# ಕಸ್ತೂರಿ

ಐವತ್ತೈದನೆ
ವರ್ಷದಲ್ಲಿ
ಪದಾರ್ಪಣ

ಸಪ್ಟೆಂಬರ್ 1990 ರೂ. 3-00

## ಮೀನಿನಿಂದ ಹೃದಯರೋಗ ನಿವಾರಣೆ



## ಹರೀಂದ್ರನಾಥರ ಜೀವನದೃಷ್ಟಿ




# ಲೋಕ ಶಿಕ್ಷಣ ಟ್ರಸ್ಟ್
## ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | | ಬೆಲೆ |
|---|---|---|
| 1. ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಸಪ್ಪ ದಾನಪ್ಪ ಜತ್ತಿ | ರೂ. 12-00 |
| 2. ಅಂತರಾತ್ಮನಿಗೆ | ಶ್ರೀ ರಂಗನಾಥ ದಿವಾಕರ | ರೂ. 5-00 |
| 3. ಗೀತೆಯ ಗುಟ್ಟು | ಶ್ರೀ ರಂಗನಾಥ ದಿವಾಕರ | ರೂ. 15-00 |
| 4. ಪುಟಾಣಿಗೆ ಶರಣರ ಕಥೆಗಳು | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 3-50 |
| 5. ಮರಳಿ ಬಂದ ಮಧುರ ಮಾಸ | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 12-00 |
| 6. ವಿಚಾರ ಜ್ಯೋತಿ | ಶ್ರೀ ಕೆ.ಟಿ.ಪಾಂಡುರಂಗಿ | ರೂ. 10-00 |
| 7. ವಚನಗಳಲ್ಲಿ ಪ್ರತಿಮೆಗಳು | ಶ್ರೀಮತಿ ಉಷಾಕಿರಣ್ | ರೂ. 25-00 |
| 8. ಶಿಶುನಾಳ ಶರೀಫ ಸಾಹೇಬರು | ಶ್ರೀ ಶಿವಾನಂದ ಗುಬ್ಬಣ್ಣವರ | ರೂ. 15-00 |
| 9. ನನಗೆ ನಾನೇ ಮಾದರಿ (ಆತ್ಮಕಥನ) | ಶ್ರೀ ಬಿ.ಡಿ.ಜತ್ತಿ | ರೂ. 40-00 |
| 10. ಕೋಟ್ಯಧೀಶ್ವರರ ಪ್ರಪಂಚದಲ್ಲಿ 60 ದಿನ | ಶ್ರೀ ಎಸ್.ಪಿ.ಭಟ್ಟ | ರೂ. 20-00 |




# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: 35

ಸಂಚಿಕೆ: 1

ಸಪ್ಟೆಂಬರ್ 1990

●

ವ್ಯವಸ್ಥಾಪಕ ಸಂಪಾದಕ:

ಕೆ. ಶಾಮರಾವ್

ಸಂಪಾದಕ:

ಆರ್. ಎ. ಉಪಾಧ್ಯ

●

ಮುಖಪುಟ

ಆಹಾರ-ಔಷಧಿ

(ಕಸ್ತೂರಿಯ ಸಂಗ್ರಹದಿಂದ)

●

ಕಸ್ತೂರಿ ಕಾರ್ಯಾಲಯ

ಕೊಪ್ಪೀಕರ ರಸ್ತೆ

ಹುಬ್ಬಳ್ಳಿ-580020


## ಬೆಳಕಿಂಡಿ

★ ಹೇಗೆ ಶ್ರೀಗಂಧದ ಸಸಿ ಮರವಾದ ಮೇಲೆಯೇ ಸುವಾಸನೆಯನ್ನು ಬೀರುವುದೋ ಹಾಗೆಯೆ ವಯಸ್ಸಾದ ಮೇಲೆಯೇ ಬುದ್ಧಿ ಪರಿಪಕ್ವವಾಗುವುದು.

— ಸುಭಾಷಿತ

★ ಹೆಂಗಸರನ್ನು ಪ್ರೀತಿಸಬೇಕೆ ಹೊರತು ಅರ್ಥ ಮಾಡಿಕೊಳ್ಳುವ ಗೊಡವೆಗೆ ಹೋಗಬಾರದು.

— ಆಸ್ಕರ್ ವೈಲ್ಡ್

★ ಕೃಷಿಕನಿಗೆ ದುರ್ಭಿಕ್ಷವಿಲ್ಲ, ಮೌನವಾಗಿರುವವನಿಗೆ ಕಲಹವಿಲ್ಲ, ಜಾಗೃತನಾಗಿರುವವನಿಗೆ ಭಯವಿಲ್ಲ.

— ಒಲಿಮನ್

★ ಕತ್ತಲೆಯ ಮನೆಯಲ್ಲಿ ದೀಪ ಹಚ್ಚುವುದು ಸುಲಭ. ಆದರೆ ಗಾಳಿಯಿದ್ದ ಮನೆಯಲ್ಲಿ ದೀಪ ಹಚ್ಚುವುದು ಸುಲಭವಲ್ಲ.

— ಗಯಟೆ

★ ಮೂರ್ಖತನ ತಂತಾನೆ ಜಗಜ್ಜಾಹೀರಾಗಬೇಕಿದ್ದರೆ ಪ್ರತಿಯೊಬ್ಬನಿಗೂ ಸಂಪೂರ್ಣ ಭಾಷಣ ಸ್ವಾತಂತ್ರ್ಯವನ್ನು ಕೊಡಿ.

— ವುಡ್ರೊ ವಿಲ್ಸನ್


### ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆ ಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಸಹಚಿಂತನ

**ಅರ್ಥ-ಅನರ್ಥ**

'ರಾಮಾಯಣ ಎಷ್ಟು ಹಳೆಯದು? (ಜೂನ್ 1990) ಲೇಖನದಲ್ಲಿರುವ ವಿಚಾರಗಳ ಕುರಿತು ಈ ಪತ್ರ.

ಶ್ರೀ ಮದ್ರಾಮಾಯಣದ ಸುಂದರಕಾಂಡದಲ್ಲಿ 'ತಥಾಗತ' ಮತ್ತು 'ಚೈತ್ಯ' ಎಂಬ ಶಬ್ದಗಳ ಪ್ರಸ್ತಾಪವೇನೋ ಇದೆ. ಉದಾಹರಣೆಗೆ 29ನೆ ಸರ್ಗದ ಮೊದಲ ಶ್ಲೋಕವು ಈ ಕೆಳಕಂಡಂತಿದೆ.

**ತಥಾಗತಾಂ ತಾಂ ವ್ಯಥಿತಾಮ ನಿಂದಿತಾಂ**
**ವ್ಯಪೇತ ಹರ್ಷಾಂ ಪರಿದೀನ ಮಾನಸಾಂ**
**ಶುಭಾ ನಿಮಿತ್ತಾನಿ ಶುಭಾನಿ ಭೇಜಿರೇ**
**ನರಂ ಶ್ರೀಯಾಜುಷ್ಟಮಿವೋಪ ಜೀವಿನಃ**

ತಥಾಗತ ಶಬ್ದವು ವಿಶೇಷಣವೂ ಹೌದು ನಾಮಪದವೂ ಹೌದು. 'ತಥಾಗತ' ಎಂಬ ವಿಶೇಷಣಕ್ಕೆ Being in such a state or condition ಮತ್ತು of such quality ಎರಡು ಅರ್ಥಗಳುಂಟು. ಹಾಗೆಯೇ 'ತಥಾಗತಃ' ಎಂಬ ಪುಲ್ಲಿಂಗ ನಾಮಪದಕ್ಕೂ 'ಬುದ್ಧ' ಮತ್ತು 'ಜೈನ' ಎಂಬ ಅರ್ಥಗಳುಂಟು. (ವಿ.ಎಸ್. ಆಪ್ಟೆ ಸಂಸ್ಕೃತ-ಇಂಗ್ಲಿಷ್ ನಿಘಂಟು, 1965ನೆ ಆವೃತ್ತಿ, ಪು. 228).

ಮೇಲಿನ ಶ್ಲೋಕದಲ್ಲಿ 'ತಥಾಗತ'ವು ವಿಶೇಷಣವೋ ನಾಮಪದವೋ ಎಂಬುದು ಸ್ಪಷ್ಟವಾಗಬೇಕಿದ್ದರೆ ಇಡೀ ಶ್ಲೋಕದ ಪ್ರತಿ ಪದಾರ್ಥ ಅಗತ್ಯ.

(ತಥಾಗತಾಂ) ಅಂತಹ ಹೀನ ಸ್ಥಿತಿಯಲ್ಲಿದ್ದ, (ಅನಿಂದಿತಾಂ) ನಿಷ್ಕಳಂಕಳಾದ, (ವ್ಯಪೇತಹರ್ಷಾಂ) ಹರ್ಷವಿಲ್ಲದ, (ಪರಿದೀನ ಮಾನಸಾಂ) ಕುಗ್ಗಿದ ಮನಸ್ಸುಳ್ಳ, (ಶುಭಾಂ) ಮಂಗಳೆಯಾದ, (ತಾಂ) ಆ ಸೀತೆಯನ್ನು (ಶುಭಾನಿಮಿತ್ತಾನಿ) ಶುಭಶಕುನಗಳು, (ಶ್ರೀಯಾಜುಷ್ಟಂ) ಸಿರಿಯಿಂದ ಕೂಡಿದ (ನರಂ) ಮನುಷ್ಯನನ್ನು, (ಉಪಜೀವಿನಃ ಇವ) ಸೇವಕರು ಹೇಗೋ ಹಾಗೆ, (ಭೇಜಿರೇ) ಹೊಂದಿದವು.

ಇಲ್ಲಿ ತಥಾಗತಾಂ, ಅನಿಂದಿತಾಂ, ವ್ಯಪೇತ ಹರ್ಷಾಂ, ಪರಿದೀನ ಮಾನಸಾಂ ಮತ್ತು ಶುಭಾಂ ಎಂಬ ಶಬ್ದಗಳು ತಾಂ ಎಂಬ ಶಬ್ದಕ್ಕೆ (ಎಂದರೆ ಸೀತಾದೇವಿಗೆ) ವಿಶೇಷಣಗಳು. ತಥಾಗತ ಶಬ್ದದ ನಾಮಪದ ಪ್ರಯೋಗ ಇಲ್ಲಿಲ್ಲ. ಹೀಗಿರುವಾಗ ಸ್ತ್ರೀಲಿಂಗ ಸರ್ವನಾಮಕ್ಕೆ ಅನ್ವಯವಾಗುವ 'ತಥಾಗತ' ಎಂಬ ವಿಶೇಷಣ 'ತಥಾಗತಃ' ಎಂಬ ಪುಲ್ಲಿಂಗ ನಾಮಪದ ಹೇಗೆ ಆಗಬಲ್ಲದು?

ಇನ್ನು 'ಚೈತ್ಯ' ಶಬ್ದ. ಸುಂದರಕಾಂಡದ 12ನೇ ಸರ್ಗದ 14ನೇ ಶ್ಲೋಕದಲ್ಲಿ 'ಭೂಮಿಗೃಹಾಂಶ್ಚೈತ್ಯಗೃಹಾನ್' ಎಂದಿದೆ. ಹಾಗೆಯೇ ಅದೇ ಕಾಂಡದ 43ನೇ ಸರ್ಗದಲ್ಲಿ ಆಂಜನೇಯನು 'ಚೈತ್ಯ ಪ್ರಾಸಾದವನ್ನು ನಾಶಮಾಡಿದ ವಿವರಣೆಯಿದೆ. ವಿ.ಎಸ್.ಆಪ್ಟೆಯವರನ್ನು ಉಲ್ಲೇಖಿಸಿ ಮಾನ್ಯ ಲೇಖಕರು 'ಚೈತ್ಯ' ಶಬ್ದಕ್ಕೆ ನೀಡಿರುವ ಒಂದೇ ಒಂದು ಅರ್ಥವು ಪೂರ್ಣವಲ್ಲ. ಆಪ್ಟೆಯವರು 'ಚೈತ್ಯಃ' ಅಥವಾ 'ಚೈತ್ಯಂ' ಶಬ್ದಕ್ಕೆ ಕೆಳಕಂಡಂತೆ ಏಳು ಅರ್ಥಗಳನ್ನು ನೀಡುತ್ತಾರೆ.
1) ಪ್ರದೇಶವೊಂದರ ಗುರುತಿಗಾಗಿ ಪೇರಿಸಿಟ್ಟ ಕಲ್ಲಿನ ರಾಶಿ 2) ಒಂದು ಸ್ಮಾರಕ, ಗುಂಬಜಗಲ್ಲು 3) ತ್ಯಾಗಕ್ಕೆಂದೇ ಕಟ್ಟಿದ ಗುಡಿಸಿಲದಂಥ ಕಟ್ಟಡ 4) ಅವಶೇಷಗಳನ್ನಿಟ್ಟು ಪೂಜೆ ಮಾಡುವ ಜಾಗ, ಧಾಮ 5) ಒಂದು ದೇವಾಲಯ 6) ಬೌದ್ಧ ಅಥವಾ ಜೈನ ದೇವಾಲಯ 7) ಆಲದ ಮರ ಅಥವಾ ರಸ್ತೆ ಬದಿಯ ಮರ.

ಮೇಲಿನ 43ನೆ ಸರ್ಗದಲ್ಲಿ 'ಚೈತ್ಯ' ಶಬ್ದವನ್ನು ಆರನೆಯ ಅರ್ಥದಲ್ಲೇ ಏಕೆ ಗ್ರಹಿಸಬೇಕು? ನಾಲ್ಕನೆಯ ಅಥವಾ ಐದನೆಯ ಸಾಮಾನ್ಯ ಅರ್ಥದಲ್ಲಿ ಏಕೆ ಗ್ರಹಿಸಬಾರದು? 'ಚೈತ್ಯ' ಶಬ್ದದ ಬಳಕೆ ಬೌದ್ಧರಿಗೆ ಮೊದಲು ಇರಲೇ ಇಲ್ಲವೆ? ಒಂದು ಪಕ್ಷ ಈ ಶಬ್ದವನ್ನು ಆರನೆಯ ಅರ್ಥದಲ್ಲೇ ಬಳಸಿದರೂ ಇಡೀ 43ನೆಯ ಸರ್ಗ ಎಷ್ಟರ ಮಟ್ಟಿಗೆ ಸಂಬದ್ಧವಾಗುತ್ತದೆ?

ಕೇವಲ ಶಬ್ದಗಳ ಆಧಾರದಿಂದ ಒಂದು ಕಾವ್ಯದ ಕಾಲವನ್ನು ಹುಡುಕಿ ಹೊರಟರೆ ಆ ಕಾವ್ಯದ ಗತಿ ಏನಾದೀತು? ನಮ್ಮ ಪೂರ್ವಾಗ್ರಹಗಳನ್ನು ಪೋಷಿಸಿಕೊಳ್ಳಲು ಶಬ್ದ ಅರ್ಥವನ್ನೇ ಒಗ್ಗಲಿಸುವುದು ಕೃತಕವಷ್ಟೇ ಅಲ್ಲ, ಬಾಲಿಶವೂ ಹೌದು. ಸಂಶೋಧಕನೆನಿಸಿಕೊಂಡವನಿಗೆ ಇರಬೇಕಾದುದು ಸಂದರ್ಭಾನುಸಾರವಾಗಿ ಅರ್ಥವನ್ನು ಗ್ರಹಿಸುವ ಸಾಮಾನ್ಯ ಪ್ರಜ್ಞೆ.

ಮೈಸೂರು ಡಾ.ಹು.ಲ.ಚಂದ್ರಶೇಖರ

ಶ್ರೀ ಮಾನ್ ರಾಜೀವ ಅಜ್ಜಿಬಳರ 'ರಾಮಾಯಣ ಎಷ್ಟು ಹಳೆಯದು' ಎಂಬ ಲೇಖನದಲ್ಲಿ ಲೇಖಕರ ಉಳಿದ ಆಧಾರಗಳು ಪೂರ್ಣ ಒಪ್ಪಬೇಕಾದವುಗಳೆಂದು ಅನ್ನಲು ಬರುವುದಿಲ್ಲ. ಚಾರಿತ್ರಿಕ ಮತ್ತು ವೈಜ್ಞಾನಿಕ ದೃಷ್ಟಿಯಿಂದ ಸಾಮಾನ್ಯವಾಗಿ ವಿಚಾರಿಸಿದಾಗ ಘಟನೆ ನಡೆದದ್ದು ಕ್ರಿಸ್ತ ಪೂರ್ವ 7-8ನೇ ಶತಮಾನಕ್ಕಿಂತ ಹಳೆಯದಲ್ಲವೆಂಬುದನ್ನು ಮಾನ್ಯ ಮಾಡಬೇಕಾಗುತ್ತದೆ. ಉಲ್ಲೇಖಿತ ಆಧಾರಗಳು ಸರಿ ಇರುವ ಕುರಿತು ತಾವು ಪರಿಶೀಲಿಸುವದು ಸೂಕ್ತ; ಆದರೆ ಪ್ರಕಟಣೆಗೆ ಪೂರ್ವದಲ್ಲಿ ಮಾತ್ರ.

ಮುಧೋಳ ಬಾಳಾಸಾಹೇಬ ಸಾಲೀಮಠ

### ಸಿನಿಕರು

'ಕಸ್ತೂರಿ' ಅಗಸ್ಟ ಸಂಚಿಕೆಯಲ್ಲಿ ಪ್ರಕಟವಾದ ಎಂ.ವಿ.ಶರ್ಮಾ ತದ್ದಲಸೆಯವರ 'ಸಿನಿಕರು' ಎಂಬ ಲೇಖನ ಅತ್ಯಂತ ಅಧ್ಯಯನಪೂರ್ಣವಾಗಿ ಬಂದಿದ್ದು ಮನೋಜ್ಞವಾಗಿದೆ. ಸಿನಿಕರು ಯಾರು? ಅವರ ಸಿದ್ಧಾಂತಗಳೇನು? ಎಂಬ ಸಂಶಯಗಳು ಕಾಡುತ್ತಿದ್ದ ನನಗೆ ಈ ಲೇಖನ ಪರಿಹಾರವೊದಗಿಸಿದೆ.

ಶಿರಸಿ ಶ್ರೀಧರ ಹೆಗಡೆ

### ರಂಕ?

ಜುಲೈ 90ರ ಸಂಚಿಕೆಯಲ್ಲಿ 'ನಿಮ್ಮ ಶಬ್ದ ಭಾಂಡಾರ ಬೆಳೆಯಲಿ' ವಿಭಾಗದಲ್ಲಿ 'ರಂಕ' ಶಬ್ದಕ್ಕೆ ಅರ್ಥ ವಿವರಣೆ ನೀಡಿ, ಆ ಶಬ್ದದ ಮೂಲ ಹಿಂದಿ ಎಂದು ಉಲ್ಲೇಖಿಸಿದ್ದೀರಿ. ವಾಸ್ತವವಾಗಿ ಆ ಶಬ್ದ ಸಂಸ್ಕೃತ ಮೂಲದ್ದು. ಉದಾಹರಣೆಗೆ ಈ ಕೆಳಕಂಡ ಸುಭಾಷಿತವನ್ನು ಗಮನಿಸಬಹುದು.

ರಂಕಂ ಕರೋತಿ ರಾಜಾನಂ ರಾಜಾನಂ ರಂಕಮೇವ ಚ।
ಧನಿನಂ ನಿರ್ಧನಂ ಚೈವ ನಿರ್ಧನಂ ಧನಿನಂ ವಿಧಿಃ।।

(ವಿಧಿಯು ಭಿಕ್ಷುಕನನ್ನು ರಾಜನನ್ನಾಗಿ ಮಾಡುತ್ತದೆ. ರಾಜನನ್ನು ಭಿಕ್ಷುಕನನ್ನಾಗಿ ಮಾಡುತ್ತದೆ. ಧನಿಕನನ್ನು ದರಿದ್ರನನ್ನಾಗಿಯೂ ದರಿದ್ರನನ್ನು ಧನವಂತನನ್ನಾಗಿಯೂ ಮಾಡುತ್ತದೆ.)

ಇದೂ ಅಲ್ಲದೆ ಆಪ್ಟೆಯವರ 'ಸಂಸ್ಕೃತ - ಇಂಗ್ಲೀಷ್ ಶಬ್ದಕೋಶ'ದಲ್ಲೂ 'ರಂಕ' ಶಬ್ದವಿದ್ದು ಅದರ ಅರ್ಥ ವಿವರಣೆ ಉದಾಹರಣೆ ಸಹಿತ ಕೊಟ್ಟಿದ್ದಾರೆ.

ಅಂಬುತೀರ್ಥ ವಿ.ಕೆ.ವಾಸುದೇವ ಉಡುಪ

### ಕ್ಷೇಮ

'ಮುದುಕರಿಲ್ಲದ ಊರು' (ಕಸ್ತೂರಿ, ಅಗಸ್ಟ 90) ಶಲೆಬರಹ ಓದಿ ಆ ಊರಿಗೆ ಹೋಗಬೇಕೆನಿಸಿತಾದರೂ ಲೇಖನವೋದಿದ ಮೇಲೆ ಹೋಗದಿರುವುದೇ ಕ್ಷೇಮ ಎನಿಸಿತು.

ಡೇಗ್ನನ್ನನ ಅನುಭವ ರೋಮಾಂಚಕ.

ಬೆಳಗಾಂವಿ ಗುರು ಕುಲಕರ್ಣಿ

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

# ಸ್ವಯೂಥ ಕಲಹ - ಸರ್ವನಾಶ

## ಲಕ್ಷ್ಮಣ ಆಳವಂಡಿ

ಬಹು ಹಿಂದೆ ಪಕ್ಷಿಗಳನ್ನು ಹಿಡಿಯ ಬಯಸಿ, ಬೇಟೆಗಾರನೊಬ್ಬ ಕಾಡಿನಲ್ಲಿ ತನ್ನ ಬಲೆಯನ್ನೊಡ್ಡಿದ. ಅವನೊಡ್ಡಿದ ಬಲೆಯಲ್ಲಿ ಎರಡು ಪಕ್ಷಿಗಳು ಸಿಲುಕಿಕೊಂಡವು. ಅಂತಹ ಪ್ರಸಂಗದಲ್ಲಿಯೂ ಆ ಪಕ್ಷಿಗಳು ಧೈರ್ಯಗುಂದಲಿಲ್ಲ. ಬದಲು ಎರಡೂ ಸೇರಿ ಒಟ್ಟಾಗಿ ತಾವು ಸಿಲುಕಿಕೊಂಡ ಬಲೆಯನ್ನೇ ಎತ್ತಿಕೊಂಡು ಮೇಲಕ್ಕೆ ಹಾರಿದವು. ಇದನ್ನು ಕಂಡು ವ್ಯಾಕುಲಗೊಂಡ ಬೇಡನು ನೆಲದ ಮೇಲೆಯೇ ಓಡುತ್ತ, ಆಕಾಶ ಮಾರ್ಗದಲ್ಲಿ ಹಾರುತ್ತಿದ್ದ ಆ ಪಕ್ಷಿಗಳನ್ನು ಹಿಂಬಾಲಿಸಿದ.

ಮಾರ್ಗಮಧ್ಯದಲ್ಲೊಂದು ಋಷ್ಯಾಶ್ರಮವಿತ್ತು. ಆಗತಾನೇ ಹೊರಬಂದ ಮುನಿ ಆಗಸದಲ್ಲಿ ಬಲೆಯನ್ನೆತ್ತಿಕೊಂಡು ಹಾರುತ್ತಿದ್ದ ಪಕ್ಷಿಗಳನ್ನೂ ಅವುಗಳನ್ನು ಭೂಮಿಯ ಮೇಲೆ ಓಡುತ್ತಲೇ ಹಿಂಬಾಲಿಸುತ್ತಿದ್ದ ವ್ಯಾಧನನ್ನೂ ಕಂಡ.

"ಪ್ರಾಣಿ ಹಂತಕನಾದ ವ್ಯಾಧನೇ! ನಿನ್ನ ವರ್ತನೆಯು ಬಹು ವಿಚಿತ್ರವಾಗಿದೆ. ಆಕಾಶದಲ್ಲಿ ಹಾರುತ್ತಿರುವ ಆ ಪಕ್ಷಿಗಳನ್ನು ನೀನು ಹೇಗೆ ನೆಲದ ಮೇಲೆ ಓಡುತ್ತ ಹೋಗಿ ಹಿಡಿಯಬಲ್ಲೆ? ಇದು ಸಾಧ್ಯವೇ?" ಎಂದು ಆಶ್ಚರ್ಯದಿಂದ ವ್ಯಾಧನನ್ನು ಪ್ರಶ್ನಿಸಿದ.

"ತಾವು ಹೇಳುತ್ತಿರುವುದು ನಿಜ ಮುನಿಶ್ರೇಷ್ಠರೇ. ಆದರೆ ನನ್ನಲ್ಲಿರುವುದು ಅದೊಂದೇ ಬಲೆ. ನನ್ನ ಜೀವನನಿರ್ವಹಣೆಯ ಸಾಧನವಾಗಿದ್ದ ಅದನ್ನೇ ಆ ಪಕ್ಷಿಗಳು ಎತ್ತಿಕೊಂಡು ಮೇಲೆ ಹಾರುತ್ತಿವೆ. ಆದರೂ ನಾನೊಬ್ಬ, ಆಶಾವಾದಿ. ನನ್ನ ಬಲೆ ಪುನಃ ನನಗೆ ಸಿಕ್ಕೇ ತೀರುವುದೆಂಬ ನಂಬುಗೆ ನನಗಿದೆ. ಈ ಆಸೆಯಿಂದಲೇ ನಾನು ಅವುಗಳನ್ನು ಈ ರೀತಿ ಹಿಂಬಾಲಿಸುತ್ತಿದ್ದೇನೆ," ಎಂದಾತ ವಿನೀತನಾಗಿ ಉತ್ತರಿಸಿದ.

"ಈ ನಂಬುಗೆ ನಿನಗೆ ಬಂದದ್ದು ಹೇಗೆ?"

"ಮುನಿವರ್ಯ, ಮೇಲೆ ಹಾರುತ್ತಿರುವ ಆ ಎರಡು ಪಕ್ಷಿಗಳ ನಡುವೆ ವಿವಾದ ಉದ್ಭವಿಸಬಹುದೆಂಬುದು ನನ್ನ ನಿರೀಕ್ಷೆ. ಹಾಗೇನಾದರೂ ನಾನು ಊಹಿಸಿದಂತೆ ಅವುಗಳಲ್ಲಿ ವಿವಾದ ಉಂಟಾದರೆ ಅವು ನನಗೆ ವಶವಾಗುವುದು ಖಂಡಿತ."

ಮುಂದೆ ಶಬರನ ನಿರೀಕ್ಷೆಯಂತೆಯೇ ಎಲ್ಲವೂ ನಡೆಯಿತು. ಆ ಬುದ್ಧಿಹೀನ ಪಕ್ಷಿಗಳು ಪರಸ್ಪರ ಕಚ್ಚಾಡುತ್ತ ನೆಲಕ್ಕೆ ಬಿದ್ದವು. ಭೂಮಿಗೆ ಬಿದ್ದ ನಂತರವೂ ಅವು ತಮ್ಮೊಳಗೆ ಕಲಹವಾಡುವುದನ್ನು ನಿಲ್ಲಿಸಲಿಲ್ಲ. ಹಾಗೆ ಅವು ಕೋಪದಿಂದ ಕಚ್ಚಾಡುತ್ತಿರುವಾಗಲೇ, ಸಾವಿನ ನೆರಳಿನಂತಿದ್ದ ವ್ಯಾಧನು, ಸದ್ದಾಗದಂತೆ ಬಲೆಯನ್ನು ಸಮೀಪಿಸಿ ಅವುಗಳನ್ನು ಹಿಡಿದುಕೊಂಡ.

"ಇದೇ ಸಾದೃಶವು ಮನುಷ್ಯರಿಗೂ ಅನ್ವಯಿಸುತ್ತದೆ. ಆಸ್ತಿ, ಐಶ್ವರ್ಯಗಳ ನಿಮಿತ್ತ ಪರಸ್ಪರ ಹೊಡೆದಾಡುವ ಅಣ್ಣ-ತಮ್ಮಂದಿರೆಲ್ಲ ಈ ಮೂಢ ಪಕ್ಷಿಗಳ ಹಾಗೆ ವಿನಾಶಕ್ಕೀಡಾಗುತ್ತಾರೆ," ಎಂದು ಕೌಟುಂಬಿಕ ಕಲಹಗಳಿಂದ ಉಂಟಾಗುವ ಹಾನಿಯನ್ನು ಧೃತರಾಷ್ಟ್ರನಿಗೆ ವಿವರಿಸಿದ ವಿದುರನು, ಪಾಂಡವರೊಂದಿಗೆ ಸಂಧಾನವನ್ನು ಮಾಡಿಕೊಳ್ಳುವಂತೆ ಸಲಹೆ ನೀಡಿದ.



# ಹರೀಂದ್ರನಾಥರ ಜೀವನದೃಷ್ಟಿ

**● ನಿಮಗೀಗ ತೊಂಬತ್ತೆರಡು ವರ್ಷ. ಆದರೂ 'ತನ್ನ ಬಗ್ಗೆ ಯಾರಿಗೇ ಆಗಲಿ ಗೊತ್ತಿರುವುದೇನು? ಏನೂ ಇಲ್ಲ' ಎಂಬ ಅಭಿಪ್ರಾಯಕ್ಕೆ ಬಂದಿದ್ದೀರಲ್ಲ....**

'ನಿಮ್ಮ' ಬಗ್ಗೆ ನಿಮಗೇನಾದರೂ ಗೊತ್ತೆ? ನಿಮ್ಮ ಬಗ್ಗೆ ನಿಮಗೇನಾದರೂ ಸ್ವಲ್ಪ ಗೊತ್ತಾಗಿದೆ ಎನ್ನುವುದಾದರೆ ನನಗೂ 'ನನ್ನ' ಬಗ್ಗೆ ಸ್ವಲ್ಪ ಅರಿವಾದೀತು. ಆದರೆ ಅದಷ್ಟು ಸುಲಭದ ಮಾತಲ್ಲ. ನಿಜವಾಗಿಯೂ ನಾವು ಯಾರ ಕುರಿತು ಏನನ್ನೂ ತಿಳಿದುಕೊಂಡಿರುವುದಿಲ್ಲ. ಅದೇ ಜೀವನದ ಪರಮ ರಹಸ್ಯ. ಬದುಕು ಹಾಗೆಯೇ ಸಾಗಿಹೋಗುತ್ತಿರುತ್ತದೆ. ದುರಾದೃಷ್ಟದ ಸಂಗತಿಯೆಂದರೆ ಹೀಗೆ ಜೀವಿಸಬೇಕೆನ್ನುವುದನ್ನು ತಿಳಿಯದೆಯೆ ನಾವು ಜೀವನವನ್ನು ಸಾಗಿಸಿಕೊಂಡು ಹೋಗುತ್ತೇವೆ. ಅಂತರ್ಯದಲ್ಲಿ ನುಸುಳಿಕೊಂಡು ಬದುಕಿನ ಬಗ್ಗೆ ಆಲೋಚಿಸುವುದೊಂದೇ ಇದಕ್ಕೆ ದಾರಿ. ಆದರೆ ಅದಕ್ಕೆ ನಮಗೆ ಸರಿಯಾದ ಮಾರ್ಗವನ್ನನುಸರಿಸುವಂತೆ ಮಾಡಬಲ್ಲ 'ಗುರು'ವೊಬ್ಬನ ನೆರವು ಬೇಕು. ಹಾಗಾದರೆ ಮಾತ್ರ, ಒಂದಿಲ್ಲೊಂದು ದಿನ ಗುರಿಯನ್ನು ತಲಪಬಹುದು. ಗುರು ಈ ಗುರಿಯ ರಹಸ್ಯಮಯ ಬಿಂದುವನ್ನು ತಲಪಲು ಅವಿರತ ಶ್ರಮಿಸಿರುತ್ತಾನೆ. ಕೆಲ ವರ್ಷಗಳಿಂದ ನಾನು ಗುರುವೊಬ್ಬನನ್ನು ಅನುಸರಿಸುತ್ತಿದ್ದೇನೆ.

ಸಾವನ್ನು ನಿರೀಕ್ಷಿಸುತ್ತ ಎಂದಿನಂತೆಯೆ ನಕ್ಕು-ನಗಿಸಿ, ಚಿಂತನಶೀಲನಾಗಿಯೇ ಬದುಕಿದ್ದವರು ಹರೀಂದ್ರನಾಥ ಚಟ್ಟೋಪಾಧ್ಯಾಯ. ತಮ್ಮ ಗತಜೀವನದ ಸಾಧನೆಗಳ ಕುರಿತು ಬೀಗದೆ, ಅವುಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ ತಾಳಿ ಸ್ಥಿತಪ್ರಜ್ಞನಾಗಿ ಬಾಳಿದ ಅವರೊಂದಿಗೆ - ಸಾಯುವುದಕ್ಕೆ ಕೆಲವೇ ವಾರ ಮೊದಲು **ಸುಮಾ ಜಾಸ್ಸನ್** ನಡೆಸಿದ ಸಂದರ್ಶನ ಇದು. ಬಾಳಿನ 'ಭ್ರಮೆ'ಗಳು, ಬದುಕು-ಸಾವುಗಳ ರಹಸ್ಯಗಳ ಕುರಿತ ಅವರ ವಿಚಾರಗಳಿಲ್ಲಿ ವ್ಯಕ್ತವಾಗಿವೆ.

('Sunday Observer'ನಿಂದ)

ರಮಣ ಮಹರ್ಷಿ; ದಕ್ಷಿಣದವರು. ಸಾವಿರಾರು ಜನರು ದೇವರಿಗೆ ನಡೆದುಕೊಳ್ಳುವ ತೆರನಾಗಿಯೆ ಅವರೊಡನೆ ನಡೆದುಕೊಳ್ಳುತ್ತಾರೆ. ಈಗ ಅವರು ಕೇವಲ ಗುರುವಾಗಿ ಉಳಿದಿಲ್ಲ. ಭಕ್ತರಿಗೆಲ್ಲ ದೇವಸಮಾನರಾಗಿದ್ದಾರೆ. ಹಾಗೆ ನೋಡಿದರೆ ನಾನವರನ್ನು ಆರಾಧಿಸುವುದಿಲ್ಲ. ಅವರ ಸಾನ್ನಿಧ್ಯದ ಅನುಭವವನ್ನು ಪಡೆಯುತ್ತೇನೆ, ಅಷ್ಟೆ. ಅದೇ ನನ್ನ ಪಾಲಿನ ದೊಡ್ಡ ಆರಾಧನೆ.

● **ಎಲ್ಲಿಯವರೆಗೆ ಗುರು ಮಾರ್ಗದರ್ಶನ ಮಾಡಿಯಾರು?**

ಗುರಿಯನ್ನು ತಲಪುವುದು ಎಂದು ಹೇಳಿದೆನಲ್ಲ. ಈ 'ತಲಪುವಿಕೆ' ಎಂಬುದೊಂದು ಮೂರ್ಖ ಕಲ್ಪನೆ. ತಲಪುವುದೆಲ್ಲಿಗೆ? ಯಾರು ಎಲ್ಲಿ ತಲಪುತ್ತಾನೆಂಬುದೇ ದೊಡ್ಡ ಪ್ರಶ್ನೆ. ಕ್ರಮಿಸಬೇಕಾದ ಅಂತರ ಯಾವುದು? ಎಲ್ಲಿದೆ ಅದು? ಈ ಅಂತರ ಇರುವುದು ನಮ್ಮ ಅಜ್ಞಾನದಲ್ಲಿ. ನೀನು ಗುರುವಿನೊಂದಿಗಿದ್ದೀ.. ಗುರು ನಿನ್ನೊಟ್ಟಿಗಿದ್ದಾನೆ. ಸದಾ ಕೈ-ಕೈ ಮಿಲಾಯಿಸಿ ನಡೆಯುತ್ತೀರಿ. ನನಗನಿಸುವುದೇ ಹೀಗೆ. ಇಷ್ಟೆಲ್ಲ ದಿನ ಬದುಕಿದ ನಾನು ಈ ಅನಿಸಿಕೆಯನ್ನು ಧೈರ್ಯದಿಂದ ನಿಮ್ಮೆದುರು ವ್ಯಕ್ತಪಡಿಸಬಲ್ಲೆ.

'ಗುರಿ' ಎಂಬುದೊಂದಿದೆ ಎಂದು ನನಗೆ ಗೊತ್ತು. ತಲಪುವಿಕೆ ಎಂಬುದೂ ಇದೆ ಎಂದೂ ಗೊತ್ತು. ಬಾಳಪಯಣದ ಹೆಜ್ಜೆಯಿಟ್ಟಾಗಲೆ ನಾವು ಗುರಿಯನ್ನು ತಲಪಿರುತ್ತೇವೆ.

● **ಹಾಗಾದರೆ 'ಜ್ಞಾನ'ವೆಂಬುದು ಒಂದು ಸರ್ವವ್ಯಾಪ್ತ ಸ್ಥಿತಿಯೆಂದಂತಾಯಿತು. ಸದಾ ತೀರುತ್ತಿರುವ ಮತ್ತು ತೀರುತ್ತಿರುವಂತೆಯೆ ತಂತಾನೆ ಮತ್ತೆ ತುಂಬಿಕೊಳ್ಳುವಂಥದು..**

ಅದು ಸ್ವಯಂ ಪರಿಪೂರ್ಣವಾದದ್ದು, ತನ್ನೊಳಗೇ ತಾನು ಇರುವಂಥದು. ನಾವು ಅದರೊಂದಿಗೆ ಬದುಕುತ್ತೇವೆ. ಅದರಿಂದಲೆ, ಅದರೊಳಗೆ ಬದುಕುತ್ತೇವೆ.

● **ಹಾಗಾದರೆ ಅದು ಸ್ಥಿರವಾದದ್ದೆಂದಾಯಿತು..**

ಹೌದು. ಅದು ಸ್ಥಿರ ಮನೋಸ್ಥಿತಿಯಾಗಬೇಕು. ಇಲ್ಲದೇ ಹೋದರೆ ನಾವು ನೆಮ್ಮದಿ ಕಳೆದುಕೊಳ್ಳುತ್ತೇವೆ. ಮಾನಸಿಕ ಸಮತೋಲ ಕಳೆದುಕೊಳ್ಳುತ್ತೇವೆ. ರಕ್ಷಣೆ ರಹಿತರಾಗುತ್ತೇವೆ. ನಾವು ಸದಾ ಅದರೊಂದಿಗಿರಬೇಕು. ಆದರೆ ಆ ಮನೋಸ್ಥಿತಿಯನ್ನು ತಲಪಲು ನಮಗೆ ಇಡೀ ಜೀವಮಾನವೇ ಬೇಕಾದೀತು. ಅಥವಾ ಕ್ಷಣ ಮಾತ್ರದಲ್ಲಿಯೆ ಆ ಸ್ಥಿತಿಯನ್ನು ತಲುಪಲೂ ಬಹುದು.

● **ಈಗಲೂ ನೀವು ಲೇಖನ ಕಾರ್ಯ ಮುಂದುವರಿಸಿದ್ದೀರಾ?**

ಇಲ್ಲ. ಬರೆಯುವುದನ್ನು ನಿಲ್ಲಿಸಿಬಿಟ್ಟಿದ್ದೇನೆ.

*ನೊಬೆಲ್ ಪಾರಿತೋಷಕ ವಿಜೇತ ಕವಿ ರವೀಂದ್ರನಾಥ ಠಾಕೂರರ ಜೀವಿತದ ಕೊನೆಯ ದಿನಗಳಲ್ಲಿ ಯಾರೋ ಅವರನ್ನು ಕೇಳಿದರು- "ಸರ್, ನಿಮ್ಮ ನಂತರ ಯಾರು?" ಎಂದು.*

*"ಈ ನನ್ನ ನಿಲುವಂಗಿ ಹರೀಂದ್ರನಾಥ ಚಟರ್ಜಿಯನ್ನಲಂಕರಿಸುತ್ತದೆ" ಎಂದು ತಟ್ಟನೇ ಉತ್ತರಿಸಿದರಂತೆ ಕವೀಂದ್ರರು.*

> ಸುಳ್ಳು
> ಕವಿಯೆ,
> ಗುಲಾಬಿ ಹೂಹಾಸಿನ ಮೇಲೆ
> ಹಾಯಾಗಿ ಸಾಗಿ ಹೋಗುವ
> ನೇರಿಳೆ ಮೋಡಗಳ ಕುರಿತು
> ನೀನು ಹಾಡುವುದ ನಾ ಕೇಳಿರುವೆ...
> ಆದರೆ,
> ತುಣುಕು ರೊಟ್ಟಿಗಾಗಿ ಹಸಿದ ಹೆಣ್ಣು
> ತನ್ನ ದೇಹವನ್ನು ಮಾರಿಕೊಳ್ಳುವ
> ಕುರಿತು ನೀನೆಂದಾದರೂ ಹಾಡಿದ್ದೀಯಾ ?
> (ಹರೀಂದ್ರನಾಥರ 'ದಿ ಲೈ' ಕವನದ
> ಭಾವಾನುವಾದ)

ಸಾಕಷ್ಟು ಬರೆದಿದ್ದೇನೆ ಎಂದುಕೊಂಡಿದ್ದೇನೆ. ನನ್ನ ಜೀವಿತದ ಪೂರ್ಣಕಾರ್ಯ ಮುಗಿದಿದೆ. ಈಗ ಬರೆಯಬೇಕೆಂದು ಅನಿಸುವುದೂ ಇಲ್ಲ. ಚಿತ್ರ ರಚನೆಯ ಮಾಡಬೇಕೆಂದೂ ಅನಿಸುವುದಿಲ್ಲ. ಕುಂಚ-ಬಣ್ಣಗಳನ್ನು ಸಾಕಷ್ಟು ಬಳಸಿದ್ದೇನೆ. ಈಗದರ ಅಗತ್ಯವೇ ಕಾಣುವುದಿಲ್ಲ ನನಗೆ.

**● ನೆನಪುಗಳೊಂದಿಗೆ ಬದುಕುತ್ತಿದ್ದೀರಿ. ಹಾಗಾದರೆ..**

ಹೂಂ. ನೆನಪುಗಳು ಮರುಕಳಿಸುತ್ತವೆ, ಮಾಸುತ್ತವೆ ಕೂಡ. ಅವೆಲ್ಲವುಗಳನ್ನು. ನಾನು 'ಸಾಕ್ಷಿ'ಗಳೆಂಬಂತೆ ಗಣಿಸುತ್ತೇನೆ. ಅಷ್ಟು ಮಾತ್ರ ಈಗ ನಾನು ಮಾಡಬಹುದಾದದ್ದು. ಈಗ ಅದು ಕೂಡ ಒಂದು ಭ್ರಮೆಯೆ. ಹಲವು ಭ್ರಮೆಗಳ ಹಾಗೆ. ಭ್ರಮೆಯ ಅಸ್ತಿತ್ವವಿಲ್ಲದೆ ಜಗತ್ತಿನ ಅಸ್ತಿತ್ವವೇ ಇಲ್ಲ. ಯಾಕೆಂದರೆ ಅದು ಇದೆ ಎಂದು ನಾವು ಭ್ರಮಿಸಿದುದರಿಂದಲೇ ಜಗತ್ತು ಅಸ್ತಿತ್ವದಲ್ಲಿದೆ.

**● ನೆನಪುಗಳು ಭ್ರಮೆಗಳೇನೊ ನಿಜ. ಆದರೆ ಅವುಗಳಲ್ಲಿ ವೇದನೆಗಳೂ ಇವೆಯಲ್ಲ. ಅವುಗಳೊಡನೆ ಹೊಂದಿಕೊಂಡು ಹೋಗುವುದು ಹೇಗೆ?**

ನೋವು! ಹೌದು. ನಾವು ಅವುಗಳೊಂದಿಗೆ ಸಹ ಜೀವನ ನಡೆಸುವಷ್ಟು ಕಾಲ.. ಸುಖ-ದುಃಖಗಳೆರಡೂ ಸಮ್ಮಿಶ್ರಗೊಳ್ಳುವಂಥವು. ಎಲ್ಲ ತರಹದ ಕ್ಷಣಗಳನ್ನೂ ನಾವು ನೆನಪಿಸಿಕೊಳ್ಳುತ್ತೇವೆ. ನೋವಿನ ಕ್ಷಣಗಳು, ಸಂತಸದ ಕ್ಷಣಗಳು. ಭಯಂಕರ ಕ್ಷಣಗಳು ಈ ಕ್ಷಣಗಳ ನೆನೆಕೆಯಿಂದ ಯಾರೂ ಪಾರಾಗಲು ಸಾಧ್ಯವಿಲ್ಲ.

**● ನೀವು ಮತ್ತೆ ಹುಟ್ಟಿಬರುವುದಾದರೆ ಏನಾಗಬಯಸುತ್ತೀರಿ?**

ಮತ್ತೆ ಕಲಾವಿದನಾಗಿ- ಬೆಳೆದು ಯೋಗಿಯಾಗುವುದಕ್ಕಾಗಿ... ಯಾಕೆಂದರೆ ಮಹಾನ್ ಕಲಾವಿದ, ಅವನಿಗೇನೇ ಕಳಂಕಗಳಿರಲಿ, ನಿಶ್ಚಿತವಾಗಿಯೂ ಅವನೊಬ್ಬ ಯೋಗಿಯೆ.

**● ನಿಮ್ಮ ಮೊದಲ ಪತ್ನಿ ಕಮಲಾದೇವಿ ಇತ್ತೀಚೆ ನಿಧನರಾದರು.. ಅವರ ಕುರಿತು ಏನಾದರೂ ಒಂದಿಷ್ಟು ಹೇಳುವಿರಾ?**

ಆಕೆಯೊಂದು ದೊಡ್ಡ ವ್ಯಕ್ತಿತ್ವ. ಭಾರತದ ಧೀಮಂತ ಮಹಿಳೆಯರಲ್ಲೊಬ್ಬಳೆಂದು ಗಣಿಸಲ್ಪಡಬೇಕಾದ ವ್ಯಕ್ತಿ. ಕುಶಲ ಕೈಗಾರಿಕೆ-ಕೈಮಗ್ಗಗಳಿಗಾಗಿ ಸಾಕಷ್ಟು ಶ್ರಮಿಸಿದಳು. ಕುಶಲ ಕೈಗಾರಿಕೆಗಳನ್ನು ಉನ್ನತ ಸ್ಥಾನಕ್ಕೇರಿಸಿದಳು.

**● ನಿಮ್ಮಿಬ್ಬರ ವೈಯಕ್ತಿಕ ಸಂಬಂಧ ಹೇಗಿತ್ತು?**

ನಾವು ಜತೆಗೂಡಿದ್ದದ್ದೇ ಕಡಿಮೆ. ವಿವಾಹಾನಂತರದ ಮೊದಲ ಕೆಲ ವರ್ಷಗಳು ಅಷ್ಟೆ. ತದನಂತರ ನಮ್ಮ ನಮ್ಮ ಕಾರ್ಯಕ್ಷೇತ್ರಗಳಲ್ಲಿ ಮಗ್ನರಾದೆವಲ್ಲ.. ಆಕೆ ಸಾಕಷ್ಟು ಸಾಮಾಜಿಕ ಕಾರ್ಯಗಳನ್ನು ಗೈದಳು. ಬೃಹತ್ ಗ್ರಂಥವೊಂದನ್ನಾಕೆ ಬರೆದಿದ್ದಾಳೆ. ಇನ್ನೂ ಅಪಾರ ಲೇಖನ ರಾಶಿಯನ್ನಾಕೆ ಬಿಟ್ಟು ಹೋಗಿರಬೇಕು. ಅವೆಲ್ಲ ಬೆಳಕು ಕಾಣಬೇಕು.

**● ಆಕೆಯ ಅಗಲುವಿಕೆಯ ಕುರಿತು...**

ಅಗಲುವಿಕೆ... ಜೀವನವೇ ಒಂದು ನಿರಂತರ ವಿದಾಯವಲ್ಲವೆ?

**● ಅಂದರೆ ಯಾವುದೂ ಶಾಶ್ವತವಲ್ಲ?**

'ಶಾಶ್ವತ'ವೆಂಬುದೇನನ್ನಾದರೂ ನೀವು ನೋಡಿದ್ದೀರಾ? ನೋಡಿದ್ದೇನೆ ಎಂಬುದು ನಿಮ್ಮ ಉತ್ತರವಾದರೆ ಅದೂ ಒಂದು ಭ್ರಮೆಯೆ.



Complan

**● ಸಂಬಂಧಗಳ ಕುರಿತು ಏನನ್ನುತ್ತೀರಿ?**

ಅದು ಸ್ವಭಾವಗಳನ್ನವಲಂಬಿಸಿದ್ದು. ನೀವು ಸ್ವಭಾವತಃ ಸುಂದರ ಸಮತೋಲ ಗಳಿಸಿದ್ದೀವಿ ಎಂದುಕೊಳ್ಳುತ್ತೀರಿ. ಹಠಾತ್ತನೇ ಏನೋ ಒಂದು ಘಟಿಸುತ್ತದೆ. ಆಗ 'ಸುಂದರ ಸಮತೋಲ'ವೆಂಬುದು ನಿಜವಲ್ಲವೆಂಬ ಅರಿವಾಗುತ್ತದೆ. ಆಗ ಮತ್ತೊಂದು ಸುಂದರ ಸಮತೋಲದ ಸಂಧಾನಕ್ಕೆ ತೊಡಗುತ್ತೀರಿ. ಅಷ್ಟೆ. ನಿರಂತರ ವಿದಾಯ..

**● ಪ್ರತಿಯೊಂದು ಸಂಬಂಧವೂ ಒಂದು ನಿಶ್ಚಿತ ಅವಧಿಯ ನಂತರ ಕೊನೆಗೊಳ್ಳುವುದು ಹೀಗೆಯೆ ಏನು?**

ಅದು ನಿಮ್ಮನ್ನು ತೊರೆಯುತ್ತದೆ-ನೀವು ಅದನ್ನು.

**● ಹಾಗಾದರೆ ಪ್ರೇಮದ ಅರ್ಥವೇನು?**

ಪ್ರೇಮದ ಕುರಿತು ಮಾತನಾಡುವುದಾದರೆ ಆಗೆಲ್ಲ ನಾವು ಲಂಪಟತೆಯ ಕುರಿತೇ ಮಾತನಾಡುತ್ತೇವಲ್ಲವೆ?

ಪಾವಿತ್ರ್ಯದ ಕುರಿತು?

ಪ್ರೇಮ ವ್ಯವಸ್ಥೆಯನ್ನೆಲ್ಲ ಆವರಿಸಿಕೊಳ್ಳುತ್ತದೆ. ಇಡೀ ಅಸ್ತಿತ್ವವನ್ನೆಲ್ಲ.

**● ಅದು ಭೌತಿಕ ಸಂಬಂಧಗಳ ರಾಹಿತ್ಯವನ್ನು ಸೂಚಿಸುತ್ತದೆಯೆ?**

ಹಾಗೇನೂ ಇಲ್ಲ. ಆತ್ಮದಿಂದ ದೇಹ ವಿಭಿನ್ನವಾಗಿದೆಯೆಂದು ನಾವೇಕೆ ಭಾವಿಸಬೇಕು? ಅದು ಅಖಂಡತ್ವದ ಒಂದು ಅಂಗ. ನಾವು ನಿಜವಾಗಿ ಪ್ರೀತಿಸಲಾರಂಭಿಸಿದಾಗ ಲಂಪಟತೆ ಮಾಯವಾಗುತ್ತದೆ. ಅದರರ್ಥ ನಾವು ಷಂಢರೆಂದಲ್ಲ. ಅಷ್ಟೇ ಅಲ್ಲ, ಸಾಮರ್ಥ್ಯ ಎಂಬುದು ದೇಹಕ್ಕೆ ಸಂಬಂಧಿಸಿದ್ದಲ್ಲವೇ ಅಲ್ಲ, ಅದು ಆತ್ಮಬಲ.

**● ಹೆಂಗಸರು ನಿಮ್ಮ ಜೀವನದಲ್ಲಿ ಮುಖ್ಯ ಪಾತ್ರವಹಿಸಿದ್ದಾರೆ. ಆ ಕುರಿತು ಏನಾದರೂ..**

ನಾನು ಅನೇಕ ಹೆಂಗಸರ ಪ್ರೇಮಪಾಶದಲ್ಲಿ ಸಿಲುಕಿದ್ದೇನೆ. ಅದಕ್ಕೆ ಪ್ರತಿಯಾಗಿ ಅವರಿಂದ ಪಡೆದೂ ಇದ್ದೇನೆ. ಅವರೊಂದಿಗೆ ನನ್ನ ಸಂಬಂಧ ಒಳ್ಳೆಯದಾಗಿತ್ತು. ಪ್ರತಿಕ್ಷಣವೂ ನಾನು ಪ್ರೇಮಪಾಶದಲ್ಲಿ ಸಿಲುಕಿದೆ. ಆದರಿಂದ ಪಾರಾದೆ ಕೂಡ. ಇನ್ನೂ ನನ್ನ ಚಿತ್ರಭಿತ್ತಿಯಲ್ಲಿ ಹಸಿರಾಗಿರುವ ಹೆಂಗಸರನೇಕರಿದ್ದಾರೆ. ಅವರೆಲ್ಲ ಶಕ್ತಿಶಾಲಿ ವ್ಯಕ್ತಿಗಳು. ಹೆಂಗಸರಿಲ್ಲದೇ ಬದುಕುವುದೇ ಅಸಾಧ್ಯ. ಹೆಣ್ಣನೆದುರು ನಾವೆಲ್ಲ ಕೂಸುಗಳಾಗಿ ಬಿಡುತ್ತೇವೆ.

**● ಯಾರಾದರೂ ನಿಮ್ಮ ಮೇಲೆ ಪ್ರಭಾವ ಬೀರಿದ ಹೆಂಗುಸರು..**

ಯಾರೂ ಇಲ್ಲ. ಆದರೆ ಸಂಬಂಧವಿರುವವರೆಗೂ ಈ ಪ್ರತಿಯೊಬ್ಬರೂ ಮಹತ್ವದವರೆಂದೆನಿಸುತ್ತಿದ್ದುದು ನಿಜ. ಅಷ್ಟೆ.

**● ದೇವರ ಬಗ್ಗೆ ನಿಮ್ಮ ಕಲ್ಪನೆ ಏನು?**

ನಾವು ನಮಗಾಗಿ ಸೃಷ್ಟಿಸಿಕೊಂಡ ಒಂದು 'ಅಗತ್ಯ' ಈ ದೇವರು. ಸಂಕಟ ಬಂದಾಗಲೆಲ್ಲ ಅವನ ಬಳಿಗೋಡುತ್ತೇವೆ-ಅವನು ಎಂದರೆ ಅದೇ ನಾವು ಸೃಷ್ಟಿಸಿದ 'ಅಗತ್ಯ'. ಒಂದು ಕಥೆಯಿದೆಯಲ್ಲ. ಒಬ್ಬ ದೇವರನ್ನು ಕಂಡು ಇಪ್ಪತ್ತು ವರ್ಷಗಳ ಮೇಲೆ ವಾಪಸ್ಸು ಬಂದ.

---

ಹರೀನ್, ಹರೀಂದಾ, ಹರೀಂದ್ರನಾಥ ಚಟ್ಟೋಪಾಧ್ಯಾಯರೆಂದೇ ಪರಿಚಿತರಾಗಿದ್ದ ಈ ವ್ಯಕ್ತಿ ಈಗಿನ ತಲೆಮಾರಿನವರಿಗೆ "ಎಂಟ್ಹತ್ತು ಸಿನಿಮಾಗಳಲ್ಲಿ ನಟಿಸಿದ್ದ ಮುದುಕ" ಎಂದಷ್ಟೇ ಗೊತ್ತು. ಅದೂ ಅತಿ ಕಡಿಮೆ ಜನಕ್ಕೆ. ಆದರೆ ಆ ಸುಕ್ಕುಗಟ್ಟಿದ ಮುಖ-ಮಿಂಚುಗಣ್ಣು-ಬೆಳ್ಳಿ ಕೂದಲಿನ ವ್ಯಕ್ತಿ ಭಾರತದ ಕೆಲವೇ ಬಹುಮುಖ ಪ್ರತಿಭೆಗಳಲ್ಲೊಬ್ಬರಾಗಿದ್ದರು. ಅವರೊಬ್ಬ ಬಹುಭಾಷಾವಿದ, ವರ್ಣಚಿತ್ರ ಕಲಾವಿದ, ಇಂಗ್ಲೀಷ್ ಮತ್ತು ಬಂಗಾಳಿ ಭಾಷೆಗಳ ಶ್ರೇಷ್ಠ ಕವಿ, ಮೊನಚು ವ್ಯಂಗ್ಯದ ಮಾತುಗಾರ, ಗಾಯಕ. ಎಡಪಂಥೀಯ ಧೋರಣೆಯ ಹರೀಂದಾ ರಂಗಭೂಮಿಯ ಬಗ್ಗೆ ಅಪಾರ ಕಾಳಜಿಯುಳ್ಳವರಾಗಿದ್ದರು. ಸರಿಸುಮಾರು ಇನ್ನೂರು ಪುಸ್ತಕಗಳನ್ನು ಬರೆದಿರುವ ಇವರು ಐವತ್ತು ಕವನ-ಸಂಕಲನಗಳು ಮತ್ತು ನಾಟಕಗಳನ್ನು ನಮಗೆ ಕೊಟ್ಟಿದ್ದಾರೆ IPTAದ ಸ್ಥಾಪಕ ಸದಸ್ಯರಲ್ಲೊಬ್ಬರಾಗಿದ್ದ ಹರೀಂದ್ರನಾಥ ಹೈದ ರಾಬಾದಿನಲ್ಲಿ (ಹುಟ್ಟಿದ್ದು ಅಲ್ಲಿಯೆ 1898 ರ

ಜನಜಂಗುಳಿ ಸೇರಿತು. "ನಿಮ್ಮಲ್ಲಿ ಯಾರಿಗಾದರೂ ದೇವರ ಬಗ್ಗೆ ಗೊತ್ತೆ?" ಎಂದು ಜನರನ್ನಾತ ಕೇಳಿದ. "ಇಲ್ಲ, ಇಲ್ಲ" ಎಂದಿತು ಜನಸಮೂಹ. "ಹಾಗಾದರೆ ನಿಮ್ಮೆದುರು ನಾನು ಹೇಳಿ ಏನು ಪ್ರಯೋಜನ?" ಎಂದ ಆತ. ಮತ್ತೊಮ್ಮೆ ಸೇರಬೇಕೆಂದು ನಿರ್ಧರಿಸಿದ ಜನ ಈ ಸಲ ಅರ್ಧ ಜನ 'ಗೊತ್ತಿದೆ' ಎನ್ನೋಣ, ಅರ್ಧ ಜನ 'ಗೊತ್ತಿಲ್ಲ' ಎಂದು ಹೇಳೋಣ ಎಂದು ಮಾತಾಡಿಕೊಂಡರು. ಮತ್ತೆ ಆತ ಅದೇ ಪ್ರಶ್ನೆ ಕೇಳಿದ. ಕೆಲವರು 'ಗೊತ್ತಿದೆ' ಎಂದರು, ಇನ್ನು ಕೆಲವರು ಗೊತ್ತಿಲ್ಲ ಎಂದುಬಿಟ್ಟರು. ಆಗ ಆತ, "ಸರಿ ಹಾಗಾದರೆ, ಯಾರಿಗೆ 'ಗೊತ್ತಿದೆ'ಯೊ ಅವರು 'ಗೊತ್ತಿಲ್ಲ'ದವರಿಗೆ ಹೇಳಿಬಿಡಿ." ಎಂದು ನಡೆದುಬಿಟ್ಟ.

● **ನಿಮ್ಮ ಪ್ರಾರಂಭಿಕ ಜೀವನದ ಬಗ್ಗೆ ಸ್ವಲ್ಪ ಹೇಳುವಿರಾ?**

ನಾನು ತುಂಬ ಸಮಾಧಾನಿ ಮಗುವಾಗಿದ್ದೆ. ಎಂಟರೆಳವೆಯಲ್ಲೇ ಬರೆಯಲಾರಂಭಿಸಿದೆ. ಅದರಲ್ಲಿ ಬಹುಪಾಲು ಕಳಪೆಯೆ. ಒಂದೆರಡು ಪದ್ಯಗಳು 'ಭರವಸೆದಾಯಕ' ಎನಿಸಿದುವು. ಓದಿದವರು ನಾನೊಬ್ಬ ಲೇಖಕನಾಗುತ್ತೇನೆಂದು ಹೇಳಿದರು. ಅಮ್ಮನೆಂದರೆ ತುಂಬ ಪ್ರೀತಿ, ಅಪ್ಪನ



ಎಪ್ರಿಲ್ 2 ರಂದು) ಶೇಕ್ಸ್‌ಪಿಯರ್‌ನ ನಾಟಕಗಳಲ್ಲಿ ಅಭಿನಯಿಸಿದ್ದರು. ಮೋಲಿಯರ್ ಮತ್ತು ಶೇಕ್ಸ್‌ಪಿಯರ್ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲವರಾಗಿದ್ದ ಹರೀನ್ ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯವನ್ನು ಲೇವಡಿ ಮಾಡಿ ಬರೆದ ಪ್ರಹಸನಗಳು ತುಂಬ ಚರ್ಚೆಗೊಳಗಾದವು.

'ದಿ ಫೀಸ್ಟ್ ಆಫ್ ಟ್ರುತ್', 'ದಿ ಮ್ಯಾಜಿಕ್ ಟ್ರೀ', 'ಪರ್ಫ್ಯೂಮ್ ಆಫ್ ಅರ್ಥ್', 'ಔಟ್ ಆಫ್ ದಿ ಡೀಪ್', 'ದ ವಿಜರ್ಡ್ಸ್ ಮಾಸ್ಕ್', 'ದಿ ಡಿವೈನ್ ವೇಗಬಾಂಡ್', ಮತ್ತು 'ಸ್ಪ್ರಿಂಗ್ ಇನ್ ವಿಂಟರ್'ಗಳು ಅವರ ಕೆಲವು ಕವನ ಸಂಕಲನಗಳು. 'ಕರ್ಡ್ ಸೆಲ್ಲರ್' ಅವರ ಪ್ರಸಿದ್ಧ ಕವನ. ತಮ್ಮ ವರ್ಣಚಿತ್ರಗಳ ಕುರಿತ ಪುಸ್ತಕವೊಂದನ್ನವರು 'ಮಾನಾ' ಎಂಬ ಗುಪ್ತನಾಮದಲ್ಲಿ ಪ್ರಕಟಿಸಿದ್ದಾರೆ.

ಗುಂಟೂರು (ಆಂಧ್ರಪ್ರದೇಶ) ಮತಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾಗಿದ್ದ ಹರೀಂದ್ರನಾಥ ನಂತರ ಬೆಂಗಳೂರಿನ ದಕ್ಷಿಣ ಮತಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿ ಸೋತಿದ್ದರು. ಆದರೆ ಈ ಚುನಾವಣೆಯ ಸಂದರ್ಭದಲ್ಲಿ ಅವರು ಮಾಡುತ್ತಿದ್ದ ಪ್ರಚಾರ ಭಾಷಣಗಳು ಶ್ರೋತೃಗಳನ್ನು ನಗೆಯ ಅಲೆಗಳಲ್ಲಿ ಮುಳುಗಿಸುತ್ತಿದ್ದವು. ಹರೀನ್ ತುಂಬ ರಂಜಕವಾಗಿ ಮಾತನಾಡುತ್ತಿದ್ದರು.

'ಬ್ಲಿಟ್ಜ್' ಪತ್ರಿಕೆಗೆ ಕೆಲವಷ್ಟು ವರ್ಷ ಅವರು ಬರೆಯುತ್ತಿದ್ದ ಅಂಕಣವೊಂದು ಆಗಿನ ವಿದ್ಯಮಾನಗಳ ಬಗ್ಗೆ ಹರೀನ್ ನೀಡುತ್ತಿದ್ದ ಹರಿತವಾದ ಪ್ರತಿಕ್ರಿಯೆಗಳಿಂದಾಗಿ ಪ್ರಸಿದ್ಧವಾಗಿತ್ತು.

'ಪದ್ಮಭೂಷಣ' ಪ್ರಶಸ್ತಿಪಾತ್ರರಾಗಿದ್ದ ಅವರು ತಮ್ಮ 'ಆತ್ಮಕಥೆ'ಯನ್ನು ಪ್ರಕಟಿಸಿದ್ದು ಅದರಲ್ಲಿ, ತಮಗಿದ್ದ ಹೆಣ್ಣು-ಹೆಂಡಗಳ ಗುಂಗನ್ನೂ ತಮ್ಮ ರಂಗು-ರಂಗಿನ ಜೀವನವನ್ನೂ ಯಾವುದೇ ಉತ್ಪ್ರೇಕ್ಷೆ, ಮುಚ್ಚುಮರೆಯಿಲ್ಲದೆ ಪ್ರಾಂಜಲವಾಗಿ ಬಿಚ್ಚಿಟ್ಟಿದ್ದಾರೆ.

ಮೊನ್ನೆ ಜೂನ್ 23 ರಂದು ಹರೀನ್ ಹೃದಯಾಘಾತದಿಂದ ನಮ್ಮನ್ನಗಲಿದರು.

*ಸ್ವತಂತ್ರ ಭಾರತದ ಪ್ರಥಮ ಲೋಕಸಭೆಯ ಕಲಾಪ ನಡೆದಿತ್ತು. ಪ್ರಶ್ನೋತ್ತರ ಸಮಯದಲ್ಲಿ ಪ್ರಧಾನಿ ನೆಹ್ರೂ, ಅವರು ಲೋಕಸಭಾಸದಸ್ಯ ಡಾ. ನಾಗ್ ಎನ್ನುವವರಿಗೆ ''ನಿಮ್ಮಲ್ಲಿ ಎಳ್ಳಷ್ಟೂ ಜಾಣ್ಮೆಯಿಲ್ಲ'' ಎಂದು ಚುಚ್ಚಿದರು.*

*''ಸರ್, ಜಾಣ್ಮೆ ಕೇವಲ ನೆಹ್ರೂಗಳ ವಂಶಪಾರಂಪರ್ಯ ಹಕ್ಕಲ್ಲ ತಿಳಿಯಿತೆ?'' ಎಂದು ಕೂಡಲೇ ಉತ್ತರ ಬಂತು. ಹಾಗಂದವರು ಡಾ. ನಾಗ್ ಅಲ್ಲ. ಆಂಧ್ರಪ್ರದೇಶದ ಗುಂಟೂರು ಮತಕ್ಷೇತ್ರದ ಪ್ರತಿನಿಧಿಯಾಗಿದ್ದ ಹರೀಂದ್ರನಾಥ ಚಟ್ಟೋಪಾಧ್ಯಾಯ ಅವರು. ಹರಿತ ಮಾತು 'ಹರೀನ್‌ತನ'ದ ಪ್ರತೀಕವಾಗಿತ್ತು.*

ಬಗ್ಗೆ ತುಂಬ ಗೌರವ ನನಗೆ. ನನ್ನ ತಂದೆ ಒಬ್ಬ ಖ್ಯಾತ ವಿಜ್ಞಾನಿ. ಭಾರತದ ಮೊಟ್ಟಮೊದಲ 'ಡಾಕ್ಟರ್ ಆಫ್ ಸೈನ್ಸ್' ಅವರು. ಆಗ ನಾವಿದ್ದದ್ದು ಹೈದರಾಬಾದಿನಲ್ಲಿ. ನಾನು ಹುಟ್ಟಿದ್ದು ಅಲ್ಲಿಯೆ. ಅಮ್ಮನದು ಮೃದುಹೃದಯ. ಚೆನ್ನಾಗಿ ಹಾಡುತ್ತಿದ್ದಳು ಕೂಡ. ಹೀಗಾಗಿ ನನಗೆ ಸಂಗೀತದ ಬಗ್ಗೆ ಒಲವು ಮೂಡಿತು. ಆಕೆ ಹಾಡುವಾಗಲೆಲ್ಲ ಕಿಟಕಿಯ ಚೌಕಟ್ಟಿಗೆ ಆತುಕೊಳ್ಳುವಳು. ಭಾವುಕ ಗಾಯಕಿ. ಅರ್ಧ ಹಾಡಿನಷ್ಟೊತ್ತಿಗೆ ಆಕೆಯ ಕಣ್ಣಿಂದ ನೀರುಕ್ಕಿ ಕೆನ್ನೆಯ ಮೇಲೆಲ್ಲ ಹರಿಯಬೇಕು. ನಂತರ ಜೋರಾಗಿ ಅತ್ತುಬಿಡುತ್ತಿದ್ದಳು. ಭಾವುಕತನ ನನ್ನಲ್ಲಿ ಇಳಿದು ಬರಲು ಅಮ್ಮನ ಇಂಥ ಪ್ರಸಂಗಗಳೇ ಕಾರಣ.

● ನಿಮ್ಮ ಮೇಲೆ ಸರೋಜಿನಿದೇವಿ ನಾಯ್ಡು ಅವರ ಪ್ರಭಾವ ಏನು?

ಆಕೆಯ ಬಗ್ಗೆ ನನಗೆ ಹೆಚ್ಚು ಗೊತ್ತಿರಲಿಲ್ಲ. ಯಾಕೆಂದರೆ ಆಕೆ ನನ್ನ ಜೀವನದಲ್ಲಿ ಬಂದದ್ದೇ ತೀರ ಕಡಿಮೆ. ರಾಜಕಾರಣದಲ್ಲಿ ತುಂಬ ವ್ಯಸ್ತಳಾಗಿರುತ್ತಿದ್ದಳಲ್ಲ. ಹಾಗೆ ನೋಡಿದರೆ ಆಕೆ ಸ್ವಂತ ಮಕ್ಕಳಿಗೇ ಹೆಚ್ಚು ಅವಧಿಯವರೆಗೆ ದೂರತವಳಲ್ಲ. ರಾಜಕಾರಣವೇ ಹಾಗೆ-ಕೌಟುಂಬಿಕ ಜೀವನದಿಂದ ವ್ಯಕ್ತಿಯನ್ನದು ದೂರ ಸೆಳೆದುಬಿಡುತ್ತದೆ. ಆದರೆ ನಾವಿಬ್ಬರೂ ಒಳ್ಳೆಯ ಮಿತ್ರರಾಗಿದ್ದೆವು. ನನ್ನ ಬರವಣಿಗೆ ಆಕೆಯದಕ್ಕಿಂತ ತುಂಬ ಭಿನ್ನ. ಸರೋಜಿನಿಯ ಪದ್ಯಗಳು ತುಂಬ 'ಲೈಟ್'. ಆಳ ಕಡಿಮೆ. 'ದಿ ಪರ್ಲ್' ಮತ್ತು 'ಲಾರ್ಡ್ ಬುದ್ಧ ಸೀಟೆಡ್ ಆನ್ ಹೀಜ್ ಲಾಟಸ್ ಥ್ರೋನ್' ಎಂಬೆರಡು ಪದ್ಯಗಳು ಮಾತ್ರ ಇದಕ್ಕೆ ಅಪವಾದ. ಸರೋಜಿನಿಯಲ್ಲಿ ಕಾವ್ಯ ಗುಣವಿತ್ತು. ಆದರೆ ಅದು ಆಕೆಯ ಅನುಭವವಾಗಿ ಕಾವ್ಯಕ್ಕೆ ಮೆರುಗು ಕೊಡಲಿಲ್ಲ.

● ಈಗ.. ಸಾವನ್ನು ನಿರೀಕ್ಷಿಸುತ್ತಿದ್ದೀರಾ?

ಸ್ವಾಗತಿಸಲು ಸಿದ್ಧನಾಗಿ ಕುಳಿತಿದ್ದೇನೆ. ಯಾವಾಗ ಬಂದರೂ ಸರಿ. ಆದರಿಂದಾಗಿ ನಾನು ಮುಕ್ತನಾದಂತಾಗುತ್ತದೆ. ಮೊದಲೇ ಹೇಳಿದೆನಲ್ಲ-ಜೀವನವೊಂದು ಭ್ರಮೆ ಎಂದು. 'ಭ್ರಮೆ' ಎಂಬ ಪದವನ್ನೇ ಬಳಸುತ್ತಿರುವುದಕ್ಕೆ ಕಾರಣವೇನು ಗೊತ್ತೆ? ಅದೊಂದೇ ನಾನು ಬಳಸಬಹುದಾದ ಪದ.

ಸಾವಿನ ಬಗ್ಗೆ ನನಗೆ ಭಯವಿಲ್ಲ. ಯಾಕೆಂದರೆ ಜೀವನದ ಬಗೆಗೂ ಎಂದೂ ಭಯಪಟ್ಟಿರಲಿಲ್ಲ. ಸಾವೇನು-ಬದುಕೇನು? ಎರಡೂ ಒಂದೆ. ಅವುಗಳದು ಅವಿನಾ ಸಂಬಂಧ. ಮೃತದೇಹವೊಂದನ್ನು ನೋಡುವುದೊಂದು ಕುತೂಹಲದ ಕೆಲಸ; ಅದರಲ್ಲೂ ನಮಗೆ ಹತ್ತಿರವಾದವರದು.. ಆಗೆಲ್ಲ ನಮಗೆ ಒಂಟಿತನ, ಏನೋ ಕಳೆದುಹೋಗಿದೆಯೆಂಬಂಥ ವಿಚಿತ್ರ ಭಾವನೆಯುಂಟಾಗುತ್ತದೆ. ಹಾಗಾಗಲೇಬೇಕು. ಯಾಕೆಂದರೆ ನಾವೂ ಮನುಷ್ಯರಲ್ಲವೆ? ಒಂದು ವೇಳೆ ನಾವಿದನ್ನು ಗೆದ್ದರೆ-ಅಂದರೆ ಆತ್ಮವನ್ನು ಅರಿತುಕೊಳ್ಳುವ ಮಟ್ಟವನ್ನು ತಲುಪಿದರೆ-ಅಂಥ ಭಾವನೆಯು ಬರುವುದಿಲ್ಲ. ಸಾವನ್ನು ಆಗ ನಾವು 'ಸಂಬಂಧರಹಿತ'ವಾಗಿ ನೋಡುತ್ತೇವೆ.

● ಯಾರದಾದರೂ ಸಾವು ನಿಮ್ಮ ಮೇಲೆ ಪರಿಣಾಮ ಬೀರಿದೆಯೆ?

ಇಲ್ಲ. ಒಂದು ರೀತಿಯಲ್ಲಿ ನಾನು ಸ್ಥಿತಪ್ರಜ್ಞನಾಗಿದ್ದೇನೆ.

●

ಕೃಷ್ಣ ಕೊತಾಯ



# ಸಿಂಗಪುರದಲ್ಲಿ . . . .

ವಿಮಾನದಿಂದಿಳಿದು ನಿಲ್ದಾಣದೊಳಗೆ ಹೊಕ್ಕಾಗಲೇ, ಸಿಂಗಪುರದ ಶುಭ್ರತೆಯ ಬಗೆಗೆ ನಾನು ಕೇಳಿದ್ದು ನಿಜವೆಂದು ಮನದಟ್ಟಾಯಿತು. ಅತ್ಯಂತ ವ್ಯವಸ್ಥಿತವಾದ ಈ ಅಂತಾರಾಷ್ಟ್ರೀಯ ನಿಲ್ದಾಣದಲ್ಲಿ ಒಂದು ಚೂರು ಕಸವಾಗಲಿ, ಕಾಗದವಾಗಲಿ, ಸಿಗರೇಟಿನ ತುಂಡುಗಳಾಗಲಿ ಕಸಕಡ್ಡಿ ಖಾಲಿ ಬೆಂಕಿ ಪೊಟ್ಟಣವಾಗಲಿ ನಿಮಗೆ ಕಾಣಸಿಗುವುದಿಲ್ಲ. ಇಲ್ಲಿನ ಶೌಚಾಲಯದಲ್ಲಿನ ಶುಚಿತ್ವ ಆಶ್ಚರ್ಯವೆನಿಸುವಂತಿದೆ. ಸಿಂಗಪುರದಲ್ಲಿರಬಹುದಾದ ಪ್ರವಾಸೀ ಹಾಗೂ ನಾಗರಿಕ ವ್ಯವಸ್ಥೆಗಳ ಸೂಚನೆ ವಿಮಾನ ನಿಲ್ದಾಣದಲ್ಲೇ ನಮಗೆ ದೊರೆಯುತ್ತದೆ. ನನ್ನನ್ನು ಹೊತ್ತು ವಿವಿಧೆಡೆಗಳಿಗೆ ಕೊಂಡೊಯ್ಯುತ್ತಿದ್ದ 'ಕ್ಯಾಥೇ ಫೆಸಿಫಿಕ್' ವಿಮಾನ ಕಂಪನಿ ಸಿಂಗಪುರದಲ್ಲಿ ನನ್ನ ವಾಸ್ತವ್ಯಕ್ಕೆ ವ್ಯವಸ್ಥೆ ಮಾಡಿತ್ತು. ಆ ಕುರಿತು ನಿಲ್ದಾಣದಲ್ಲಿ ವಿಚಾರಿಸಿದಾಗ ನಿಗದಿಪಡಿಸಿದ ಹೋಟೆಲಿನಲ್ಲಿ ನನ್ನ ಹೆಸರಿನ ನೊಂದಾವಣೆ ಆಗಿಲ್ಲವೆಂದು ತಿಳಿಯಿತು. ತುಸು ಗಾಬರಿಯಾಗಿ 'ಕ್ಯಾಥೇ' ಆಫೀಸಿಗೆ ನುಗ್ಗಿದೆ. ನನಗೆ ಇನ್ನೊಂದು ಆಶ್ಚರ್ಯ ಕಾದಿತ್ತು. ನನ್ನ ವಿಷಯವೆಲ್ಲ ತಿಳಿದುಕೊಂಡ ಅಲ್ಲಿನ ಅಧಿಕಾರಿ, ಕಂಪ್ಯೂಟರು ನನ್ನ ಹೆಸರನ್ನು ತೋರಿಸಲು ನಿರಾಕರಿಸಿದರೂ, ಹೋಟೆಲಿಗೆ ಫೋನ ಮಾಡಿ ನನ್ನ ವಸತಿ ವ್ಯವಸ್ಥೆ ಮಾಡಿದ. (ಬಾಡಿಗೆ ವಿಮಾನ ಕಂಪನಿ ಭರಿಸುತ್ತದೆ) ಇದು ಸಿಂಗಪುರದಲ್ಲಿ ನೀವು ಕಾಣುವ ಸೌಜನ್ಯ; ಅಲ್ಲಿನ ವ್ಯವಸ್ಥೆ. ಅಂತೆಯೇ ಈ ನಾಡು ನಮಗೆ ಅತ್ಯಂತ ಆಪ್ಯಾಯಮಾನವೆನಿಸುತ್ತದೆ.

ಕೇವಲ 617 ಚದರ ಕಿಲೋಮೀಟರುಗಳಷ್ಟು ವಿಸ್ತಾರವಾದ ಸಿಂಗಪುರ ಪ್ರಪಂಚದಾದ್ಯಂತ ಪ್ರವಾಸಿಗರನ್ನು ಕೈ ಬೀಸಿ ಕರೆಯುವ ಪುಟ್ಟ ರಾಷ್ಟ್ರ. ಭಾರತದಿಂದ ಸಿಂಗಪುರಕ್ಕೆ ಪ್ರವಾಸ ಹೋಗುವವರ ಸಂಖ್ಯೆ ಅಗಾಧ. ದೂರದ ದೇಶಗಳಿಗೆ ಹೋಗಲು ಸಾಧ್ಯವಾಗದಿದ್ದರೂ ಸಿಂಗಪುರವನ್ನಾದರೂ ನೋಡಿ ಬರಲು ಹಾತೊರೆಯುವವರು ಸಾವಿರಾರು ಜನ. ಸುಂಕರಹಿತವಾಗಿ ಕಡಿಮೆ ಬೆಲೆಗೆ ಸಿಗುವ ವಸ್ತುಗಳನ್ನು ಸಿಂಗಪುರದಲ್ಲಿ ಕೊಳ್ಳುವ ಕನಸು ಕಾಣುವವರ ತಂಡ ಬಹು ದೊಡ್ಡದು. ಕಡಿಮೆ ಬೆಲೆಗೆ ಮಾಲುಗಳನ್ನು ಕೊಂಡು ಹೆಚ್ಚು ಬೆಲೆಗೆ ಮಾರುವವರ

ಸಂಖ್ಯೆಯೂ ಸಣ್ಣದೇನಲ್ಲ. ಪ್ರವಾಸಿಗರ ಸಂಪೂರ್ಣ ಖರ್ಚನ್ನು ಭರಿಸಿ ಅವರನ್ನು ಸಿಂಗಪುರಕ್ಕೆ ಕೊಂಡೊಯ್ದು, ಅವರ ಮೂಲಕ ಸರಕುಗಳನ್ನು ಭಾರತಕ್ಕೆ ತಂದು ಮಾರಿ ಹಣ ಮಾಡುವ ವ್ಯವಸ್ಥಿತ ಜಾಲಗಳಿವೆಯಂತೆ; ಒಟ್ಟಿನಲ್ಲಿ ಎಲ್ಲರಿಗೂ ಸಿಂಗಪುರ ಒಂದು ದೊಡ್ಡ ಆಕರ್ಷಣೆ.

ಪ್ರಚಲಿತ ದಂತ ಕಥೆಯೊಂದರಂತೆ ಬಹು ವರ್ಷಗಳ ಹಿಂದೆ ಶ್ರೀವಿಜಯ ಸಾಮ್ರಾಜ್ಯದ ದೊರೆ 'ಟೆಮಾಸೆಕ್' ರಾಜ್ಯಕ್ಕೆ ಬಂದಾಗ, ಸಿಂಹವನ್ನು ಹೋಲುವ ಒಂದು ವಿಚಿತ್ರ ಪ್ರಾಣಿಯನ್ನು ಕಂಡನಂತೆ. ಅಂದಿನಿಂದ 'ಟೆಮಾಸೆಕ್' ರಾಜ್ಯ 'ಸಿಂಗಪುರ' (ಸಿಂಹರಾಜ್ಯ)ವೆಂದು ಪ್ರಖ್ಯಾತವಾಯಿತು.

ಆಧುನಿಕ ಸಿಂಗಪುರವನ್ನು 1819ನೆಯ ಇಸವಿಯಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಸರ್ ಸ್ಟಾಮ್‌ಫೋರ್ಡ್ ರ್‍ಯಾಫೆಲ್ಸ್ ಸ್ಥಾಪಿಸಿದ. ಈ ದ್ವೀಪದ ಅತ್ಯಂತ ಪ್ರಧಾನ ಸ್ಥಾನ ಮಹಿಮೆಯಿಂದಾಗಿ, ಇದೊಂದು ಯಶಸ್ವೀ ಬಂದರಾಗುವುದೆಂಬುದನ್ನು ರ್‍ಯಾಫೆಲ್ಸ್ ಕಂಡುಕೊಂಡಿದ್ದ. ಅಂತೆಯೇ ಸಿಂಗಪುರ ಇಂದು ಪ್ರಪಂಚದ ಎರಡನೆಯ ಅತಿ ದಿರುಸಿನ ಬಂದರೆನಿಸಿಕೊಂಡಿದೆ.

ರ್‍ಯಾಫೆಲ್ಸ್ ಆಧುನಿಕ ಸಿಂಗಪುರವನ್ನು ಸ್ಥಾಪಿಸಿದ ನಂತರ ಬೇರೆ ಬೇರೆ ದೇಶಗಳ ವ್ಯಾಪಾರಿಗಳೂ ಕಷ್ಟಜೀವಿಗಳೂ ಇಲ್ಲಿಗ ಲಗ್ಗೆಯಿಟ್ಟರು. ಮಲಯ, ಇಂಡೋನೇಶಿಯ, ಚೀನ, ಭಾರತ, ಮಧ್ಯಪ್ರಾಚ್ಯ, ಶ್ರೀಲಂಕಾ, ಬ್ರಿಟನ್ ಮುಂತಾದ ಕಡೆಗಳಿಂದ ಆಗ ಬಂದು ನೆಲೆ ನಿಂತ ಜನರೇ ಇಂದಿನ ಸಿಂಗಪುರದ ಪ್ರಜೆಗಳು. ಹಾಗಾಗಿ ಈ ಪುಟ್ಟ ದ್ವೀಪ ವಿಭಿನ್ನ ಸಂಸ್ಕೃತಿಗಳ ಆಗರ. ಬೇರೆ ಬೇರೆ ದೇಶಗಳಿಂದ ಬಂದವರು ಇಲ್ಲಿ ತಮಗಾಗಿ ಬೇರೆ ಬೇರೆ 'ಆಗ್ರಹಾರ'ಗಳನ್ನೇ ರಚಿಸಿಕೊಂಡಿದ್ದಾರೆ.

ಅತ್ಯಂತ ವೈಭವೋಪೇತವಾದ ಆಧುನಿಕ ಸಿಂಗಪುರದ ಮಡಿಲಲ್ಲಿ ಪ್ರಾಚೀನ ಸಿಂಗಪುರ ಹುದುಗಿರುವುದು ಇಲ್ಲಿಯ ಸೋಜಿಗ. ಚೈನಾ ಟೌನಿನಲ್ಲಿ ಕಾಲುನಡಿಗೆಯಲ್ಲಿ ಸಂಚರಿಸುವಾಗ ಈ ಅನುಭವ ಎಲ್ಲರಿಗೂ ಆಗುತ್ತದೆ. ಅಂಕುಡೊಂಕಾದ ಮಾರ್ಗಗಳು, ಅಲ್ಲಲ್ಲಿ ಒಣಗಲು ಹರವಿರುವ ವಸ್ತ್ರಗಳು, ಚದುರಂಗದಾಟದಲ್ಲಿ ನಿರತರಾದ ಚೀನೀಯರು, ಗುಟ್ಟು ಮಾತನಾಡುವ ಮುದುಕಿಯರು, ಮೂಗಿಗೆ ಘಮ್ ಎಂದು ಬಡಿಸುವ ಚೀನೀ ತಿನಿಸುಗಳ ವಾಸನೆ ಇವೆಲ್ಲ ನಮ್ಮ ಅನುಭವಕ್ಕೆ ಬರುವ ಸಂಗತಿಗಳು.

ಆದರೆ 'ಆರ್ಚರ್ಡ್ ರೋಡಿನಲ್ಲಿ' ನಡೆಯುವಾಗ ಬರುವ ಅನುಭವವೇ ಬೇರೆ. ಗಗನಚುಂಬಿ ಕಟ್ಟಡಗಳು, ಐಷಾರಾಮ ವ್ಯವಸ್ಥೆಯ ಹೋಟೆಲುಗಳು, ಥಳ ಥಳಿಸುವ ಬೃಹತ್ತಾದ ವ್ಯಾಪಾರೀ ಸಂಕೀರ್ಣಗಳು, ಮನಮೋಹಕ ಮನರಂಜನಾ ತಾಣಗಳು - ಇವುಗಳನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ರಸ್ತೆಗಳ ಶುಚಿತ್ವ ದಿಗಿಲುಗೊಳಿಸುವಂತಿರುತ್ತದೆ. ಬಾಲ ಎತ್ತಿಕೊಂಡು ಓಡುವ ಪ್ರಾಣಿಗಳಾಗಲಿ, ಸಗಣಿಯ ರಾಶಿಗಳಾಗಲಿ, ನಿಮ್ಮ ಕಣ್ಣಿಗೆ ಎಲ್ಲಿಯೂ ಬೀಳಲಾರವು.

ಸಿಂಗಪುರದ 'ಕಲೋನಿಯಲ್ ಹಾರ್ಟ್' ಇಂಥ ಇನ್ನೊಂದು ಮುಖ್ಯ ಸ್ಥಳ. ಸರಕಾರೀ ಕಛೇರಿಗಳೂ, ರಕ್ಷಣಾ ಇಲಾಖೆಗಳೂ, ಸುಂದರ ಚರ್ಚ್‌ಗಳೂ, ಕ್ಲಬ್‌ಗಳೂ ಇಲ್ಲಿವೆ. ಶತಮಾನ ಕಂಡ ಕ್ರಿಕೆಟ್ ಕ್ಲಬ್ ಹಾಗೂ ಪ್ರಸಿದ್ಧ 'ವಿಕ್ಟೋರಿಯಾ ಥಿಯೇಟರ್' ಇರುವುದು ಇಲ್ಲಿಯೆ. ಪಾರ್ಲಿಮೆಂಟ್ ಭವನ, ಉಚ್ಚ ನ್ಯಾಯಾಲಯ, ಸಿಟಿ ಹಾಲ್ ಎಲ್ಲಾ ಇಲ್ಲಿಯೆ ಇವೆ. ಸರ್ ಸ್ಟಾಮ್‌ಫೋರ್ಡ್ ರ್‍ಯಾಫೆಲ್ಸ್ ಮೊದಲು ಸಿಂಗಪುರದ ನೆಲದ ಮೇಲೆ ಕಾಲಿಟ್ಟ ಸ್ಥಳವಲ್ಲದೇ, ವಿಕ್ಟೋರಿಯಾ ಥಿಯೇಟರಿನ ಎದುರು ಆತನ ವಿಗ್ರಹಗಳನ್ನು ನಿಲ್ಲಿಸಿದ್ದಾರೆ.

ಚೈನಾ ಟೌನಿನಲ್ಲಿ 'ಪುಟ್ಟ ಚೀನಾ' ನಮಗೆ ಗೋಚರಿಸಿದರೆ, ಅರಬ್ ಬೀದಿ ಒಂದು ಮುಸಲ್ಮಾನ ಪಟ್ಟಣದ ದರ್ಶನವನ್ನು ನಮಗೊದಗಿಸುತ್ತದೆ. ಈ ವ್ಯಾಪಾರೀ ತಾಣದಲ್ಲಿ ಮುಸ್ಲಿಮ್ ಸಂಸ್ಕೃತಿಯ ದಟ್ಟ ಛಾಯೆಯನ್ನು ಕಾಣುತ್ತೇವೆ. ಮಲಯ, ಜಾವನೀಸ್, ಬುಗಿನೀಸ, ಬೊಯ

ನೀಸ್ ಹಾಗೂ ಅರಬ್ ಮೂಲದ ಮಹಮ್ಮದೀಯರು ಈ ಬೀದಿಯಲ್ಲಿ ಒಂದೂವರೆ ಶತಮಾನಕ್ಕೂ ಹೆಚ್ಚು ಸಮಯದಿಂದ ಬಾಳುತ್ತಾ ಬಂದಿದ್ದಾರೆ.

ಕೇವಲ 41.8 ಕಿಲೋಮೀಟರು ಉದ್ದ ಹಾಗೂ 28.9 ಕಿಲೋಮೀಟರು ಅಗಲವಾಗಿರುವ ಸಿಂಗಪುರದಲ್ಲಿ ಕೃಷಿಯಾಗಲೀ ಒಕ್ಕಲುತನಕ್ಕೆ ಸಂಬಂಧಿಸಿದ ಚಟುವಟಿಕೆಗಳಾಗಲೀ ಕಾಣಸಿಗವು. ಇಲ್ಲಿನ ಮುಖ್ಯ ಆಕರ್ಷಣೆಯೆಂದರೆ ವ್ಯಾಪಾರ. ನಾವು ಕನಸಿನಲ್ಲೂ ಕಾಣದ ಪೂರ್ವ ಹಾಗೂ ಪಶ್ಚಿಮ ರಾಷ್ಟ್ರಗಳ ವಿಧವಿಧದ ವಸ್ತುಗಳನ್ನು ಇಲ್ಲಿ ಕಾಣಬಹುದು. ಸುಂಕವಿಲ್ಲದೆ ಕಡಿಮೆ ಬೆಲೆಗೆ ವಸ್ತುಗಳು ದೊರೆಯುವುದರಿಂದ ವ್ಯಾಪಾರಕ್ಕೆಂದೇ ಪ್ರಪಂಚದ ಬೇರೆ ಬೇರೆ ಕಡೆಗಳಿಂದ ಅದೆಷ್ಟೋ ಜನ ಇಲ್ಲಿಗೆ ಬರುತ್ತಾರೆ.

ಒಂದು ಡಜನ್ನಿನಷ್ಟು ವಾತಾನುಕೂಲಿತ ಬೃಹತ್ ವ್ಯಾಪಾರೀ ಸಂಕೀರ್ಣಗಳಲ್ಲದೆ ಸಾವಿರಾರು ಇತರ ಮಳಿಗೆಗಳೂ ಇವೆ. ಚೀನಾ, ಹಾಗೂ ತೈವಾನ ದೇಶಗಳ ವಸ್ತುಗಳನ್ನು ಮಾರುವ ಮಳಿಗೆಗಳಿಗೂ ಕೊರತೆಯಿಲ್ಲ. ನೂರಾರು ಬಗೆಯ ಕರಕುಶಲ ವಸ್ತುಗಳನ್ನು ನೋಡಲು - ಕೊಳ್ಳಲು ಸಿಂಗಪುರ ಕರಕುಶಲ ಕೇಂದ್ರವಿದೆ. ಅರಬ್ ಬೀದಿ, ಚೇಂಜ್ ಅಲೆ, ಹೈಸ್ಟ್ರೀಟ , ನಾರ್ತ್‌ಬ್ರಿಡ್ಜ್ ಮಾರ್ಗ, ಕೋಲ್ಮನ್ ಬೀದಿ, ಆರ್ಚರ್ಡ್ ರಸ್ತೆ, ಟ್ಯಾಂಗಲಿನ್ ರಸ್ತೆ, ಸ್ಕಾಟ್ಸ್ ರಸ್ತೆ, ಓಪರ್ಲ್ಸ್ ಪಾರ್ಕ್ ಹಾಗೂ ಸೆರಂಗೂನ್ ರಸ್ತೆ ಇವು ಸಿಂಗಪುರದ ಮುಖ್ಯ ವ್ಯಾಪಾರೀ ಪ್ರದೇಶಗಳು.

ತೆರ ತೆರನಾದ ವಸ್ತುಗಳು, ರೆಡಿಮೇಡ ದಿರುಸುಗಳು, ಸುಂದರ ಸೀರೆಗಳು, ಬಗೆ ಬಗೆಯ ಚರ್ಮದ, ಬೆತ್ತದ, ಬೀಳಿನ ಸಾಮಗ್ರಿಗಳು,



ಸಿಂಗಪುರದ ಕ್ವೀನ್ಸ್‌ಟೌನ್ ಪ್ರದೇಶ

ಮನಮೋಹಕ ಚಿನ್ನಾಭರಣಗಳು, ಲೆಕ್ಕವಿಲ್ಲದಷ್ಟು ಬಗೆಯ ಸೌಂದರ್ಯ ಸಾಧನಗಳು, ಆಕರ್ಷಕ ಅಡುಗೆ ಪಾತ್ರೆಗಳು, ಕ್ಯಾಮರಾಗಳು, ವಾಚುಗಳು, ರೇಡಿಯೋ, ಟು-ಇನ್-ವನ್‌ಗಳು ಒಂದೇ, ಎರಡೇ ಧಾರಣೆ ಕೇಳಿದಾಗ ಎಲ್ಲ ಕೊಳ್ಳೋಣವೆನಿಸುವಷ್ಟು ಕಡಿಮೆ ಬೆಲೆ. ನಾಲ್ಕಾರು ಕಡೆ ಸುತ್ತಾಡಿ, ಚೌಕಾಶಿ ಮಾಡುವವರಿಗೆ ಇನ್ನೂ ಲಾಭ. ಕೆಲವೆಡೆಗಳಲ್ಲಿ ಮೋಸ ಹೋಗಲೂ ಸಾಕಷ್ಟು ಅವಕಾಶ. ಒಟ್ಟಿನಲ್ಲಿ ಗ್ರಾಹಕನಿಗೆ ಹುಚ್ಚು ಹಿಡಿಯುವ ಪರಿಸ್ಥಿತಿ. ಪ್ರವಾಸದ ಕಡೆಯ ಹಂತದಲ್ಲಿ ನಾನಿದ್ದುದರಿಂದ ನನ್ನ ಕಿಸೆ ಬರಿದಾಗಿತ್ತು. ಹಾಗಾಗಿ ಕೇವಲ ಕೆಲ ಸೀರೆ, ಬಟ್ಟೆಗಳನ್ನು ಕೊಳ್ಳುವುದರಲ್ಲೇ ತೃಪ್ತಿಪಟ್ಟುಕೊಳ್ಳಬೇಕಾಯಿತು.

ಸಸ್ಯಾಹಾರಿಯಾದ ನಾನು ಫಿಲಿಪೀನ್ಸ್‌ನಲ್ಲಿ ಬರೀ ಅನ್ನ ತಿಂದು ತಿಂದು ಬಳಲಿದ್ದೆ. ಅಂತೆಯೇ ಸಿಂಗಪುರದಲ್ಲಿ ದಕ್ಷಿಣ ಭಾರತೀಯ ಊಟಕ್ಕಾಗಿ ವಿಚಾರಿಸಿದಾಗ 'ಸೆರಂಗೂನ ರಸ್ತೆಗೆ ಹೋಗಿ' ಎಂಬ ಉತ್ತರ ಸಿಕ್ಕಿತು. ಟ್ಯಾಕ್ಸಿ ಹತ್ತಿ ಸೆರಂಗೂನ ರಸ್ತೆ ತಲುಪಿದೆ. ಈ ಪ್ರದೇಶವನ್ನು 'ಲಿಟಲ್ ಇಂಡಿಯಾ' (ಪುಟ್ಟ ಇಂಡಿಯಾ) ಎಂದು ಕರೆಯುತ್ತಾರೆ. ಈ ಪ್ರದೇಶದಲ್ಲಿ ನೀವಿದ್ದಾಗ, ದಕ್ಷಿಣ ಭಾರತದ ಒಂದು ಶಹರದಲ್ಲಿದ್ದಂತೆನಿಸುತ್ತದೆ. ಇಲ್ಲಿ ವಾಸಿಸುವವರೆಲ್ಲರೂ ಭಾರತೀಯರು. ಬೀದಿಯಲ್ಲಿ ಅಡ್ಡಾಡುವಾಗ 'ಸಾಂಬಾರ ಪದಾರ್ಥಗಳ' ವಾಸನೆ ಮೂಗಿಗೆ ಬಂದು ಅಪ್ಪಳಿಸುತ್ತದೆ. ಭಾರತೀಯ ವ್ಯಾಪಾರಿಗಳು ರಸ್ತೆ ಬದಿಯ ವ್ಯಾಪಾರದಿಂದ ಆರಂಭಿಸಿ ದೊಡ್ಡ ಅಂಗಡಿಗಳ ವ್ಯಾಪಾರದವರೆಗೆ ತೊಡಗಿರುತ್ತಾರೆ. ಲುಂಗಿ ಧರಿಸಿ ಪಾನ ಬೀಡಾ ಮಾರುವವನಿಂದ ದುಬಾರಿ ಬಡ್ಡಿಯ ಸಾಲ ಕೊಡುವ ಚೆಟ್ಟಿಯಾರವರೆಗೆ ಎಲ್ಲರೂ ಇಲ್ಲಿ ಭಾರತೀಯರು-ಅಂತೆಯೇ ಇದು 'ಲಿಟಲ್ ಇಂಡಿಯಾ'. ವಡೆ, ಉಪ್ಪಿಟ್ಟು, ಮಸಾಲೆ ದೋಸೆ, ಪೂರಿ, ಇಡ್ಲಿ ಮಾಡುವ ಹೋಟೆಲುಗಳು ಇಲ್ಲಿ ಸಾಕಷ್ಟಿವೆ. ಬಹುದಿನಗಳ ನಂತರ ಉತ್ತಮವಾದ ಸಸ್ಯಹಾರಿ ಊಟವನ್ನು ಮಾಡಿದೆ. ಬಾಳೆ ಎಲೆಯಲ್ಲಿ ಕರಿಬೇವಿನ ಸೊಪ್ಪನ್ನೂ ಬಿಡಲಿಲ್ಲ. ಊಟಕ್ಕೆ 24 ರೂಪಾಯಿ ತೆತ್ತ ಹಾಗೆ ನೆನಪು.

ಆಧುನಿಕ ಸಿಂಗಪುರದ ಸ್ಥಾಪನೆಯಾದ ಹೊಸದರಲ್ಲಿ ಅದು ಬ್ರಿಟಿಷ್ ಇಂಡಿಯಾದ ಭಾಗವೆಂದೇ ಪರಿಗಣಿಸಲ್ಪಟ್ಟಿತ್ತು. ಹಾಗಾಗಿ ಬಹು ಮಂದಿ ಭಾರತೀಯ ವಲಸೆಗಾರರು ಸಿಂಗಪುರ ಸೇರಿಕೊಂಡರು. ಹೀಗೆ ಸೇರಿಕೊಂಡವರ ಸಿಂಗಪುರಕ್ಕೆ ಬೇಕಾದ ರಸ್ತೆಗಳು, ಸೇತುವೆಗಳು, ಕಟ್ಟಡಗಳನ್ನು ನಿರ್ಮಿಸಿದರು. ಹೀಗೆ ಆಧುನಿಕ ಸಿಂಗಪುರ ಕಟ್ಟುವಲ್ಲಿ ಭಾರತೀಯರ ಪಾತ್ರ ಹಿರಿದಾದದ್ದು. ನಂತರ ವ್ಯಾಪಾರಿಗಳು, ಅಧಿಕಾರಿಗಳು, ಸಾಲ ಕೊಡುವವರು ಇನ್ನಿತರರು ಸಿಂಗಪುರ ತಲುಪಿದರು. ದಕ್ಷಿಣದ ಕೋರಮಂಡಲ ಹಾಗೂ ಮಲಬಾರಿನಿಂದ ಹಿಂದುಗಳೂ, ಮುಸಲ್ಮಾನರೂ ಸಿಂಗಪುರಕ್ಕೆ ಲಗ್ಗೆ ಇಟ್ಟವರಲ್ಲಿ ಮೊದಲಿಗರು. ಗುಜರಾತಿ, ಸಿಂಧಿ, ಸಿಖ್, ಪಾರ್ಸಿ ಹಾಗೂ ಬೆಂಗಾಲಿ ಜನರೂ ಸಿಂಗಪುರಕ್ಕೆ ಓಡುವ ರೇಸಿನಲ್ಲಿ ಹಿಂದುಳಿಯಲಿಲ್ಲ. ಆರಂಭದಲ್ಲಿ ಸಿಂಗಪುರದ ದಕ್ಷಿಣ ಭಾಗದಲ್ಲಿ ನೆಲೆ ನಿಂತ ಈ ಭಾರತೀಯರು 1880ರ ನಂತರ 'ಲಿಟಲ್ ಇಂಡಿಯಾ'ದಲ್ಲಿ ವಾಸಿಸಲು ಆರಂಭಿಸಿದರು.

ಸಿಂಗಪುರಕ್ಕೆ ಪ್ರವಾಸ ಬಂದ ಬಹುಮಂದಿ ಭಾರತೀಯರು ಸೆರಂಗೂನ ರಸ್ತೆಯಲ್ಲಿ ವಿವಿಧ ವಸ್ತುಗಳನ್ನು ಖರೀದಿಸುತ್ತಾರೆ. ಭಾರತೀಯ ಮಳಿಗೆಗಳಿಂದ ಖರೀದಿಸಲು ಅವರಿಗೆ ಅದೇನೊ ಒಂದು ರೀತಿಯ ಅವ್ಯಕ್ತ ಸಂತೋಷ. ನಾನು ಅಲ್ಲಿ ಅಡ್ಡಾಡುತ್ತಿದ್ದಾಗ ಅಕಸ್ಮಾತಾಗಿ ಒಂದು ಅಂಗಡಿಯಿಂದ ಕನ್ನಡ ಕೇಳಿ ಬಂತು. ಮೈ ಪುಲಕಗೊಂಡಿತು. ಕುವೆಂಪುರವರ 'ಕನ್ನಡವೆನೆ ಕುಣಿದಾಡುವುದೆನ್ನೆದೆ, ಕನ್ನಡವೆನೆ ಕಿವಿ ನಿಮಿರುವುದು, ಕಾಮನ ಬಿಲ್ಲನು ಕಾಣುವ ಕವಿಯೊಲ್ ತೆಕ್ಕನೆ ಮನ ಮೈ ಮರೆಯುವುದು.' ಪದ್ಯದ ಅರ್ಥ ನನ್ನ ಅನುಭವಕ್ಕೆ ಬಂತು. ಆ ಕನ್ನಡಿಗರನ್ನು ಮಾತನಾಡಿಸಿದೆ. ಲಿಟಲ್ ಇಂಡಿಯಾದಲ್ಲಿ

ಸ್ಥಳ ಸಿಗದೇ ಅವರು ಸಿಂಗಪುರದಲ್ಲಿ ಸಿಕ್ಕಿಬಿದ್ದಿದ್ದರು. ತಂದ ಹಣ ಎಲ್ಲ ಬರಿದಾಗಿ, ಕೊಂಡ ಮಾಲುಗಳನ್ನು ಮಾರುವ ಹಂತವನ್ನು ಅವರು ತಲುಪಿದ್ದರು.

ಸಿಂಗಪುರದ ಪೋಲೀಸ್ ವ್ಯವಸ್ಥೆ ತುಂಬಾ ಸೊಗಸಾಗಿದೆ. ಒಂದು ಅಂಗಡಿಯ ಬಳಿ ಒಬ್ಬ ಅನಾಥ ಚೀನೀ ಮಹಿಳೆ ಪ್ರಜ್ಞೆ ತಪ್ಪಿ ಬಿದ್ದಳು. ಒಂದು ಪುಟ್ಟ ತಂಡ ಅಲ್ಲಿ ಜಮಾಯಿಸುವ ಮೊದಲೇ ಪೋಲೀಸ್ ಅಂಬ್ಯುಲೆನ್ಸ್ ಶಬ್ದಗೈಯುತ್ತಾ ಅಲ್ಲಿಗೆ ಬಂತು. ಸಮವಸ್ತ್ರ ಧರಿಸಿದ ಮಹಿಳಾ ಪೋಲೀಸರು ಕೆಳ ಧುಮುಕಿ ಕ್ಷಣಾರ್ಧದಲ್ಲಿ ಆ ಅನಾಥಳನ್ನು ಸಾಗಿಸಿಬಿಟ್ಟರು. ಅತಿ ಹತ್ತಿರದಲ್ಲಿ ನಾನಿದ್ದುದರಿಂದ ನನಗೆ ಈ ಸಂಗತಿ ತಿಳಿಯಿತು. ಉಳಿದವರಿಗೆ ವಿಷಯ ತಿಳಿಯುವ ಮೊದಲೇ ಪೋಲೀಸ್ ಅಂಬ್ಯುಲೆನ್ಸ್ ಆಸ್ಪತ್ರೆಗೆ ಹೊರಟುಹೋಗಿತ್ತು.

ಸಿಂಗಪುರದಲ್ಲಿ ಸಾಧಾರಣ ಹೋಟೆಲುಗಳಿಂದ ಆರಂಭಿಸಿ ಅತ್ಯಂತ ಐಷಾರಾಮಿ ಹೋಟೆಲುಗಳವರೆಗೆ ಎಲ್ಲ ತರಹದ ಹೋಟೆಲುಗಳಿವೆ. ನಾನು ತಂಗಿದ್ದ 'ಹೋಟೆಲ್ ಪೆನಿನ್ಸುಲ' ಒಂದು ಸುಸಜ್ಜಿತ ಹೋಟೆಲ್.

24ನೆಯ ಮಹಡಿಯ ನನ್ನ ಕೊಠಡಿಗೆ ನನ್ನನ್ನು ಲಿಫ್ಟ್ ಕಣ್ಣು - ಮುಚ್ಚಿ ತೆರೆಯುವುದರೊಳಗೆ ಕೊಂಡೊಯ್ಯಿತು. ವಿದ್ಯುತ್ತು ಕೈ ಕೊಟ್ಟರೆ ಇಂತಹ ಕಟ್ಟಡಗಳಲ್ಲಿ ಬದುಕುವುದೇ ಅಸಾಧ್ಯ. ಆದರೆ ಇಲ್ಲಿ ಅಂತಹ ಸಂದರ್ಭ ಬರುವುದೇ ಕಡಿಮೆ.

ನನ್ನ ಕೊಠಡಿ ತುಂಬಾ ಸೊಗಸಾಗಿತ್ತು. ಬೆಂಕಿಪೊಟ್ಟಣದಿಂದ ಹಿಡಿದು ಅತ್ಯಾಧುನಿಕ 'ಡ್ರೈರ್'ವರೆಗೆ ಎಲ್ಲ ಅಲ್ಲಿತ್ತು. ಪ್ರತಿ ಕೊಠಡಿಯಲ್ಲಿ ಟಿ.ವಿ. ಇರಿಸಿದ್ದಾರೆ. ಇಂಗ್ಲೀಷ್, ಮಲಯ, ಚೀನೀ ಹಾಗೂ ತಮಿಳು ಭಾಷೆಯ ಕಾರ್ಯಕ್ರಮಗಳು 5, 8 ಹಾಗೂ 12ನೆಯ ಚಾನೆಲ್ಲುಗಳಲ್ಲಿ ಸಿಗುತ್ತವೆ. ನಾನು ಟಿ.ವಿ. ತಿರುವಿದಾಗ ಒಂದು ನಾದಸ್ವರದ ಕಛೇರಿ ನಡೆದಿತ್ತು. ಟಿ.ವಿ. ಕಾರ್ಯಕ್ರಮಗಳು ರಾತ್ರಿ 11ಕ್ಕೆ ಮುಗಿಯುವಾಗ ಇಲ್ಲಿ ಮುಖ್ಯ ಭಾಷೆಗಳಲ್ಲಿ ಶುಭಕೋರುತ್ತಾರೆ. ಅದರಲ್ಲಿ 'ವಣಕ್ಕಂ' ಕೂಡ ಇದೆ. (ಹಿಂದಿ, ಗುಜರಾತಿ, ಬಂಗಾಳಿ ಇತ್ಯಾದಿ ಭಾರತೀಯ ಭಾಷೆಗಳು ಅಲ್ಲಿ ಚಾಲ್ತಿಯಲ್ಲಿದ್ದರೂ ತಮಿಳು ಮಾತನಾಡುವವರೆ ಜಾಸ್ತಿ.)

ನಾನಿದ್ದ ಹೋಟೆಲ್‌ನಲ್ಲಿ ಸುಸಜ್ಜಿತ ಕೊಠಡಿಗಳ ಜೊತೆಗೆ, ಪ್ರತ್ಯೇಕ ಭೋಜನಾಲಯ, ಸುಸಜ್ಜಿತ ಈಜುಗೊಳ, ಆರೋಗ್ಯಧಾಮ, ಬಾರ್, ಸಭಾಂಗಣ, ಹಾಡು ಕುಣಿತಗಳಿಗಾಗಿ ಪ್ರತ್ಯೇಕ ಸ್ಥಳ, ಕುಳಿತು ವಿರಮಿಸಲು ಸುಂದರ ತಾವು - ಹೀಗೆ ಎಲ್ಲ ವ್ಯವಸ್ಥೆಗಳಿವೆ. ಆದರೆ ಬಿಲ್ ಮಾತ್ರ ದುಬಾರಿ.

ಇಂಥ ಹೋಟೆಲುಗಳು ಸಿಂಗಪುರದಲ್ಲಿ ಅರವತ್ತಕ್ಕೂ ಹೆಚ್ಚು. 1886ರಲ್ಲಿ ಸಾರ್‌ಕೀಸ್ ಸೋದರರು ಅಪರೂಪದ ಫ್ರೆಂಚ್ ವಾಸ್ತುಶೈಲಿಯಲ್ಲಿ ಕಟ್ಟಿಸಿದ 'ರ್‍ಯಾಫಲ್ಸ್ ಹೋಟೆಲ್' ಬಹು ಪ್ರಸಿದ್ಧವಾದದ್ದು. ಖ್ಯಾತ ಸಾಹಿತಿಗಳಾದ ರುಡ್ಯಾರ್ಡ್ ಕಿಪ್ಲಿಂಗ್, ಸಾಮರಸೆಟ್ ಮಾಮ್, ನೋಯೆಲ್ ಕಾವರ್ಡ್ ಅಲ್ಲದೇ ರಾಜಕುವರರು, ಸುಲ್ತಾನರು, ಸಿನೆಮಾ ತಾರೆಯರು ಹಾಗೂ ಇತರ ಪ್ರಖ್ಯಾತ ವ್ಯಕ್ತಿಗಳು ತಂಗಿದ್ದ ತಂಗುವ ಸ್ಥಳ ಈ ಹೋಟೆಲು. ಹಣವಿದ್ದರೆ ಈ ಹೋಟೆಲುಗಳಲ್ಲಿದ್ದು ಖುಷಿಪಡಬಹುದು. ಇಲ್ಲದಿದ್ದರೆ ಹೊರಗಿನಿಂದ ಕಟ್ಟಡ ನೋಡಿ ಆನಂದಿಸಬಹುದು.

ವಿವಿಧ ದೇಶೀಯರೂ ಹಾಗೂ ಧರ್ಮೀಯರೂ ಸಿಂಗಪುರದಲ್ಲಿ ಬದುಕುತ್ತಿರುವುದರಿಂದ ಇಲ್ಲಿ ವಿವಿಧ ಧರ್ಮಗಳಿಗೆ ಸಂಬಂಧಿಸಿದ ಪೂಜಾಸ್ಥಳಗಳನ್ನು ಕಾಣಬಹುದು. ಹಿಂದುಗಳಿಗೆ ಮಾರಿಕಾಂಬ ಮಂದಿರ, ಚೆಟ್ಟಿಯಾರ್ ದೇಗುಲಗಳಿರುವಂತೆ, ಮುಹಮ್ಮದೀಯರಿಗೆ ಜಾಮಿಯಾ ಮಸೀದಿ, ಅಲ್ ಅಬ್ರಾರ್ ಮಸೀದಿ, ಸುಲ್ತಾನ್ ಮಸೀದಿಗಳಿವೆ. 'ಆರ್ಮೀನಿಯನ್ ಚರ್ಚ್', 'ಕೆಥೆಡ್ರಲ್ ಆಫ್ ದಿ ಗುಡ್ ಶೆಪನಿರ್ಡ್', ಮತ್ತು 'ಸೈಂಟ್ ಆ್ಯಂಡ್ರೂಸ್ ಕ್ಯಾಥೆಡ್ರಲ್' ಕ್ರೈಸ್ತ ಧರ್ಮೀಯರ ಪವಿತ್ರ ಸ್ಥಳ

ಗಳಾದನೆ, ಹದಿನೈದು ಮೀಟರಿಗೂ ಎತ್ತರವಾದ ಬುದ್ಧನ ಪ್ರತಿಮೆಯಿರುವ ಸಹಸ್ರ ದೀಪದ ಮಂದಿರ ಬೌದ್ಧರಿಗೆ ಶ್ರದ್ಧಾ ಕೇಂದ್ರ. ಸಿಯಾಂಗ್ ಲಿಂಗ್ ದೇಗುಲ, ಟಾನ್ ಸಿ ಚಾಂಗ್ ಸು ದೇಗುಲ, ಥಿಯಾನ್ ಹಾಕ್ ಕೆಂಗ್ ಚೀನೀಯರ ದೇವಾಲಯಗಳು.

ಸಿಂಗಪುರದ ಸಾರಿಗೆ-ಸಂಪರ್ಕ ವ್ಯವಸ್ಥೆ ಅತ್ಯುತ್ತಮವಾಗಿದೆ. ಇಡೀ ನಾಡಿನುದ್ದಗಲಕ್ಕೆ ಹೆದ್ದಾರಿಗಳೂ ಎಕ್ಸ್‌ಪ್ರೆಸ್ ಮಾರ್ಗಗಳೂ ಹರಡಿಕೊಂಡಿದ್ದು ದ್ವೀಪದ ಯಾವುದೇ ಭಾಗವನ್ನು ಅತಿ ಶೀಘ್ರವಾಗಿ ತಲುಪಬಹುದು.

ಸೈಕಲ್‌ಗಳು, ರಿಕ್ಷಾಗಳು ಬಾಡಿಗೆಗೆ ಸಿಗುವುದಲ್ಲದೇ ನೀವೇ ಓಡಿಸಿಕೊಂಡು ಹೋಗಲು ಬಾಡಿಗೆ ಕಾರುಗಳೂ ಸಿಗುತ್ತವೆ. 11,000ಕ್ಕೂ ಹೆಚ್ಚು ಬಾಡಿಗೆ ಟ್ಯಾಕ್ಸಿಗಳಿವೆ. ಬಹಳ ಕಡಿಮೆ ಖರ್ಚಿನಲ್ಲಿ ತಿರುಗಲು ಬಸ್‌ಗಳಿವೆ. ಒಂದು ಟಿಕೇಟನ್ನು ಕೊಂಡು ಇಡೀ ದಿನ ಊರೆಲ್ಲ ಸುತ್ತಾಡಬಹುದು. ಪ್ರವಾಸೀ ಇಲಾಖೆ ಕೊಡುವ 'ಮ್ಯಾಪ್' ನಿಮ್ಮ ಕೈಯಲ್ಲಿದ್ದರೆ, ಯಾವ ಸ್ಥಳದಲ್ಲಿ ಬಸ್ ಇಳಿಯಬೇಕು, ಎಲ್ಲಿ ಪುನಃ ಬಸ್ ಹತ್ತಬೇಕು ಎಂಬುದೆಲ್ಲ ತಿಳಿಯುತ್ತದೆ.

ನೀರಿನ ಮೇಲೆ ಹೋಗಲು ದೋಣಿಗಳಿವೆ. 'ಸೆಂಟೋಸಾ' ದ್ವೀಪ ತಲುಪಲು 'ಕೇಬಲ್ ಕಾರು'ಗಳಿವೆ. ಹೀಗೆ ರಸ್ತೆ, ನೀರು, ಆಕಾಶ ಎಲ್ಲ ಮಾರ್ಗಗಳಲ್ಲೂ ಸಂಚರಿಸಲು ಸಾರಿಗೆ ವ್ಯವಸ್ಥೆಯಿದೆ. ಕಾಲು ನಡಿಗೆಯಲ್ಲಿ ಈ ನಾಡಿನ ಬೆಡಗನ್ನು ಸವಿಯುವುದು ಅತಿ ರೋಚಕ.

ಪ್ರವಾಸೋದ್ಯಮ ಸಿಂಗಪುರದ ಇನ್ನೊಂದು ಮಹತ್ವದ ಆದಾಯದ ಮೂಲ. ದೇಶದ ಪ್ರವಾಸೋದ್ಯಮ ಇಲಾಖೆ ಅತ್ಯುತ್ತಮ ವ್ಯವಸ್ಥೆಗಳನ್ನು ಮಾಡಿದೆ. ವ್ಯವಸ್ಥೆಗೊಳಿಸಿದ ಪ್ರವಾಸಗಳಲ್ಲಿ ವಿವಿಧ ಪ್ರವಾಸೀ ಕೇಂದ್ರಗಳನ್ನು ನೋಡಬಹುದು.



ಸಿಂಗಪುರದ ಉಚ್ಚ ನ್ಯಾಯಾಲಯ



"ನಾನು ಚಿತ್ರಗಾರನ್ನ ಮದ್ವೆಯಾಗಬಾರದಿತ್ತು ಕಣೆ. ಯಾವುದೇ ಇಂಥದ್ದು ಬೇಕು ಅಂತ ಕೇಳಿ ಬಿಟ್ರಾಯ್ತು; ಅದರ ಚಿತ್ರಾನ ಬಿಡಿಸಿ ಇಟ್ಟು ಬಿಡ್ತಾರೆ."

ಪ್ರಪಂಚದ ಅತ್ಯಂತ ದೊಡ್ಡ ಪಕ್ಷಿಧಾಮ ಜುರ್‍ರಾಂಗ್ ಉದ್ಯಾನವನದ ಒಂದು ಆಕರ್ಷಕ ಸ್ಥಳ. 350ಕ್ಕೂ ಹೆಚ್ಚು ಬಗೆಯ ಪಕ್ಷಿಗಳಿರುವ ಈ ಒಕ್ಕೂಟದಲ್ಲಿ ನಿಶಾಚರ ಪಕ್ಷಿಗಳಿಗೆ ಪ್ರತ್ಯೇಕ ವ್ಯವಸ್ಥೆ. 50 ಎಕರೆ ಪ್ರದೇಶದಲ್ಲಿ ಹರಡಿಕೊಂಡಿರುವ ಈ ಉದ್ಯಾನವನದಲ್ಲಿ ಸುಂದರ ಪಕ್ಷಿಗಳಿಂದ ನಡೆಯುವ ಮನರಂಜನಾ ಕಾರ್ಯಕ್ರಮ ಅತ್ಯಂತ ಆಕರ್ಷಕವಾದದ್ದು.

'ಜಪಾನ್' ಹಾಗೂ ಚೀನೀ ಉದ್ಯಾನವನಗಳು ಆಧುನಿಕ ಸಮಯದಲ್ಲಿ ಸೃಷ್ಟಿಸಲ್ಪಟ್ಟ ಸುಂದರ ಉದ್ಯಾನವನಗಳು. ಜಪಾನ್ ಉದ್ಯಾನವನದ ವಿನ್ಯಾಸ, ತಾಂತ್ರಿಕತೆ ಅಸ್ವಾದ್ಯಕರವಾದ್ದು.

ಎರಡನೆಯ ಮಹಾಯುದ್ಧದ ಖ್ಯಾತಿಯ 'ಚಾಂಗಿ'ಯ ಸೆರೆಮನೆಯೊಳಗೆ ಬಿಡಲು ಈಗಲೂ ಕಟ್ಟುನಿಟ್ಟಾದ ಕ್ರಮಗಳಿವೆ. ನಮ್ಮ ತಂಡದಲ್ಲಿ ಒಬ್ಬನ ಬಳಿ ಪಾಸ್‌ಪೋರ್ಟ್ ಇಲ್ಲವೆಂಬ ಕಾರಣದಿಂದ ಆತನನ್ನು ಒಳಗೇ ಬಿಡಲಿಲ್ಲ. ಎರಡನೆಯ ಮಹಾಯುದ್ಧವನ್ನು ನೆನಪಿಗೆ ತರುವ ಈ ಸೆರೆಮನೆ ಭಯ ಹುಟ್ಟಿಸುತ್ತದೆ.

ಮೊಸಳೆ ಸಾಕುವ ಕೇಂದ್ರದಲ್ಲಿ ಒಂದು ಸಾವಿರಕ್ಕೂ ಹೆಚ್ಚು ಮೊಸಳೆಗಳನ್ನು ಕಾಣುವುದಲ್ಲದೇ ಹಾವು, ಮೊಸಳೆ, ಚರ್ಮದ ವಸ್ತುಗಳನ್ನು ಮಳಿಗೆಯಲ್ಲಿ ಖರೀದಿಸಬಹುದು.

ಸೆಂಟೋಸಾ ದ್ವೀಪವನ್ನು ಕೇಬಲ್ ಕಾರಿನಲ್ಲಿ ತಲುಪಿ ಅಲ್ಲಿನ ಸೌಂದರ್ಯ ಸವಿಯಬಹುದು. ವಿವಿಧ ಮತ ಧರ್ಮಗಳ ದೇಗುಲಗಳು, ಮತ್ಸ್ಯಾಗಾರ, ಪ್ರಾಣಿಸಂಗ್ರಹಾಲಯ, ಕ್ರೀಡಾಂಗಣಗಳು, ವಸ್ತು ಸಂಗ್ರಹಾಲಯ ಇನ್ನಿತರ ಸ್ಥಳಗಳು ಪ್ರವಾಸಿಗರನ್ನು ಕೈ ಬೀಸಿ ಕರೆಯುತ್ತವೆ.

ವಿವಿಧ ದೇಶಗಳ ಸೊಗಸಾದ ಖಾದ್ಯಗಳನ್ನು ಸಿಂಗಪುರ ಒದಗಿಸುತ್ತದೆ. ದಕ್ಷಿಣ ಭಾರತೀಯ ಆಹಾರವಲ್ಲದೇ, ಪಂಜಾಬಿ, ಕಾಶ್ಮೀರಿ, ಮುಸ್ಲಿಮ್ ಆಹಾರಗಳೂ ಇಲ್ಲಿ ಸಿಗುತ್ತವೆ. ಬಗೆಬಗೆಯ ಚೀನೀ, ಮಲಯ ಇಂಡೋನೇಶಿಯ ಆಹಾರಗಳಲ್ಲದೇ ಪಾಶ್ಚಾತ್ಯ ಜಗತ್ತಿನ ಊಟೋಪಚಾರಗಳೂ ಇಲ್ಲಿ ಲಭ್ಯ.

ಈ ಎಲ್ಲ ಬಗೆಯ ಆಹಾರಗಳು ಅವುಗಳನ್ನು ಸರಬರಾಜು ಮಾಡುವ ಸ್ಥಳಗಳಿಗನುಗುಣವಾಗಿ ಕಡಿಮೆ ಬೆಲೆಯಿಂದ ಆರಂಭಿಸಿ ಅತಿ ದುಬಾರಿ ಬೆಲೆಗೆ ಮಾರಲ್ಪಡುತ್ತವೆ. 'ಹಾಕರ್ಸ್' ತಿನಿಸು ಗೃಹಗಳಲ್ಲಿ ನಿಮಗೆ ಬೇಕಾದ ಬಗೆಯ ಆಹಾರವನ್ನು ಬಿಸಿ ಬಿಸಿಯಾಗಿ ಕಡಿಮೆ ಬೆಲೆಗೆ ಪಡೆಯಬಹುದು. ನೀವು ಆಯ್ಕೆ ಮಾಡುವ ಟೇಬಲ್ ನಂಬರ್ ಕೊಟ್ಟರಾಯ್ತು. ನಿಮ್ಮ ಮೇಜಿಗೆ ಆಹಾರ ಸರಬರಾಜಾಗುತ್ತದೆ.

ಸರಕಾರದ ಆಹಾರ ಇಲಾಖೆ ಕಟ್ಟುನಿಟ್ಟು ಕ್ರಮ ತೆಗೆದುಕೊಳ್ಳುವುದರಿಂದಾಗಿ ನಿಮಗೆ ಇಲ್ಲಿ ಕಲಬೆರಕೆ ಆಹಾರದ ಭಯ ಇರಬೇಕಾಗಿಲ್ಲ - ಹೊಟ್ಟೆಯೂ ಹಾಳಾಗದು.

ಸರಕಾರದ ಎಲ್ಲ ಇಲಾಖೆಗಳೂ ಇಲ್ಲಿ ಅತ್ಯುತ್ತಮವಾಗಿ ಕೆಲಸ ನಿರ್ವಹಿಸುತ್ತಿವೆ. ಕಾನೂನಿಗೆ ವಿರುದ್ಧವಾಗಿ ನಡೆದರೆ ದಂಡ ಖಂಡಿತ. ನಿಗದಿ

ಪಡಿಸದ ಸ್ಥಳದಲ್ಲಿ ರಸ್ತೆ ದಾಟಿದರೆ ನಿಮಗೆ 50 ಸಿಂಗಪುರ ಡಾಲರ್ ದಂಡ ವಿಧಿಸುತ್ತಾರೆ (ಒಂದು ಅಮೆರಿಕನ್ ಡಾಲರ್‌ಗೆ ಸುಮಾರು ಎರಡು ಸಿಂಗಪುರ ಡಾಲರ್‌ಗಳು).

ಹಳೆಯ ಸಂಪ್ರದಾಯಗಳು, ವ್ಯವಸ್ಥೆಗಳನ್ನು ಕಾಣುವ ಸಿಂಗಪುರದಲ್ಲಿ ಯಾಂತ್ರೀಕರಣದ ಉತ್ಕರ್ಷವನ್ನೂ ಕಾಣುತ್ತೇವೆ. ಎಲ್ಲದಕ್ಕೂ ಯಂತ್ರಗಳು - ಎಲ್ಲೆಲ್ಲೂ ಯಂತ್ರಗಳು. ನಾನು ಮಲೇಶಿಯದ ರಾಯಭಾರಿ ಕೇಂದ್ರದ ಬಳಿ ಇದ್ದಾಗ ಒಬ್ಬ ವ್ಯಕ್ತಿ ಸುಂದರವಾದ ಲೋಟ ಒಂದರಲ್ಲಿ ಏನೋ ಹೀರುತ್ತಿದ್ದ. ನನಗೆ ತಕ್ಷಣ ಕಾಫಿ ಕುಡಿಯಬೇಕೆನಿಸಿತು. ಬಳಿಯಲ್ಲಿ ಎಲ್ಲೂ ಹೋಟೆಲು ಕಾಣಿಸಲಿಲ್ಲ. ಆ ವ್ಯಕ್ತಿಯನ್ನು ಕೇಳ ಲಾಗಿ, ಆತ ಒಂದು ಮೂಲೆಯಲ್ಲಿ ಸದ್ದಿಲ್ಲದೇ ನಿಂತಿದ್ದ ಒಂದು ಯಂತ್ರವನ್ನು ತೋರಿಸಿದ. ಅದು ನಿಮಗೆ ಸಕ್ಕರೆ ಇದ್ದ ಅಥವಾ ಇಲ್ಲದ, ಹಾಲು ಇದ್ದ ಅಥವಾ ಇಲ್ಲದ ಕಾಫಿಯನ್ನು ಸರಬರಾಜು ಮಾಡುತ್ತದೆ. ನಿಗದಿತ ಹಣ ತುರುಕಿ, ಗುಂಡಿ ಅದುಮಿದರಾಯಿತು. ನಿಮಗೆ ಬೇಕಾದಂತಹ ಕಾಫಿ ಕ್ಷಣ ಮಾತ್ರದಲ್ಲಿ ಲಭ್ಯ. ವಿಮಾನ ನಿಲ್ದಾಣದ ಶೌಚಾಲಯದಲ್ಲಿ ಕೈ ತೊಳೆದಾಗ ನೀವು ಕರವಸ್ತ್ರಕ್ಕಾಗಿ ತಡಕಾಡಬೇಕಿಲ್ಲ. ಪುಟ್ಟ ಯಂತ್ರವೊಂದರ ಕೆಳಗೆ ಕೈ ಹಿಡಿದರಾಯಿತು. ಬಿಸಿ ಗಾಳಿ ಬೀರಿ ಅದು ನಿಮ್ಮ ಕೈ ಒಣಗಿಸುತ್ತದೆ. ಇವು ಯಾಂತ್ರೀಕರಣದ ಕೆಲ ಉದಾಹರಣೆಗಳಷ್ಟೆ.

ಆರೋಗ್ಯ, ಬ್ಯಾಂಕಿಂಗ್, ನಾಗರಿಕಯಾನ, ಸಂಪರ್ಕ, ವಿದ್ಯಾಭ್ಯಾಸ, ಪ್ರವಾಸೋದ್ಯಮ, ರಕ್ಷಣೆ ಇನ್ನಿತರ ನಾಗರಿಕ ಸೌಲಭ್ಯಗಳು ಸಿಂಗಪುರದಲ್ಲಿ ಅಚ್ಚುಕಟ್ಟಾಗಿವೆ.

ಅತ್ಯಾಧುನಿಕ ಸವಲತ್ತುಗಳ, ವೈಭವಗಳ ಒಡಲಲ್ಲಿ ಪ್ರಾಚೀನ ಸಂಸ್ಕೃತಿಯನ್ನು ಕಟ್ಟಿಕೊಂಡು ಬೆಳೆದಿರುವ ಈ ನಾಡು ವೈಶಿಷ್ಟ್ಯಗಳ ಬೀಡು. ವಿವಿಧ ಜನಾಂಗಗಳ, ಧರ್ಮಗಳ, ಮಿಶ್ರ ಸಂಸ್ಕೃತಿಯ ತಾಣವಾದ ಈ ರಾಷ್ಟ್ರ ನಿಜಕ್ಕೂ ಮರೆಯಲಾಗದ ಸ್ಥಳ. ಎಲ್ಲದರಲ್ಲೂ ವೈವಿಧ್ಯವನ್ನು ಸೊಗಸನ್ನು, ಬೆಡಗನ್ನು ಬೀರುವ 'ಸಿಂಗಪುರ' ಅಷ್ಟು ದೊಡ್ಡ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಆಕರ್ಷಿಸುವುದರಲ್ಲಿ ಆಶ್ಚರ್ಯವಿಲ್ಲ. ●

## ...... ತಪ್ಪದೆ ಭೂತ ಸಂಚಾರ .....!?

ಇದು ರೂಂ ನಂಬರ್ ಐದು. ಪಾರ್ಲಿಮೆಂಟ್ ಭವನ! ಇಲ್ಲಿ ಭೂತವಾಸವಾಗಿದೆಯೇ? ಈ ಕೋಣೆಯನ್ನು ಅತ್ಯಂತ ದೊಡ್ಡ ವಿರೋಧಿ ಪಕ್ಷಗಳಿಗೆ ಕೊಡುವುದು ವಾಡಿಕೆ. 1984ರ ತನಕ ಸದರೀ ಕೋಣೆಯನ್ನು ಭಾರತೀಯ ಜನತಾ ಪಕ್ಷ ಬಳಸುತ್ತಿತ್ತು. 1984ರ ನಂತರದ ಚುನಾವಣೆಗಳಲ್ಲಿ ಭಾಜಪ ಕೇವಲ ಎರಡೇ ಸ್ಥಾನಗಳನ್ನು ಗೆದ್ದಿದ್ದರ ಪ್ರಯುಕ್ತ ಅದು ರೂಮನ್ನು ಖಾಲಿ ಮಾಡಿತು. ನಂತರ ಅತ್ಯಂತ ದೊಡ್ಡ ವಿರೋಧಿ ಪಕ್ಷವಾದ ತೆಲುಗು ದೇಶಂ ಪಕ್ಷಕ್ಕೆ ಈ ಕೋಣೆಯನ್ನು ಕೊಡಲಾಯಿತು. 1989ರ ಚುನಾವಣೆಯಲ್ಲಿ 1984ರಲ್ಲಿ ಭಾಜಪದ ದುರ್ಗತಿಯೇ ತೆಲುಗು ದೇಶಂ ಪಕ್ಷಕ್ಕೆ ಬಂದೊದಗಿತು! ಅದೂ ಕೇವಲ ಎರಡೇ ಸ್ಥಾನಗಳಿಗೆ. ಐದನೆಯ ನಂಬರಿನ ರೂಮನ್ನು ತೆರವು ಮಾಡಿತು. ಈಗ ರೂಂ ನಂಬರ್ ಕಾಂಗ್ರೆಸ್ ಸೇರಬೇಕು. ಆದರೆ ಅದು ಆ ರೂಂನ್ನು ಪ್ರವೇಶಿಸಲು ನಿರಾಕರಿಸಿದೆ. ಅಷ್ಟೇ ಅಲ್ಲ, ಸಂಪ್ರದಾಯ, ದೇವರು ದಿಂಡಿರನ್ನು, ಮೂಢನಂಬಿಕೆಯನ್ನು ನಂಬದ ಕಮ್ಯೂನಿಸ್ಟ್ ಪಕ್ಷದವರೂ ರೂಮಿಗೆ ಹೋಗಲು ತಯಾರಿಲ್ಲ!! ●

ಸಂಗ್ರಹ: ವಾಸುದೇವ್.ರಾ.ಕಲಘಟಗಿ

# ಸಂಗೀತದ ಚಮತ್ಕಾರ

**ಸು**ಮಾರು 55 ವರ್ಷಗಳ ಹಿಂದಿನ ಮಾತು. ಆ ಕಾಲದಲ್ಲಿ ರೆಮಿಂಗ್‌ಟನ್ ಟೈಪ್‌ರೈಟರ್ ಸಂಸ್ಥೆ ತಮ್ಮ ಹೊಸ ಉತ್ಪಾದನೆಯಾದ ಪೋರ್ಟಬಲ್ ಟೈಪ್‌ರೈಟರುಗಳನ್ನು ಹತ್ತು ರೂಪಾಯಿಗಳ ಮಾಸಿಕ ಕಂತಿನ ಮೇಲೆ ಮಾರಾಟ ಮಾಡುತ್ತಿತ್ತು. ಅದಕ್ಕಾಗಿ ಒಬ್ಬ ಹೊಸ ಸೇಲ್ಸ್‌ಮನ್ನನನ್ನು ಆಗಷ್ಟೇ ಕಂಪನಿ ನಿಯಮಿಸಿಕೊಂಡಿತ್ತು.

ಹೊಸ ಸೇಲ್ಸ್‌ಮನ್, ತನ್ನ ಕೆಲಸದ ಮೇಲೆ ರಾಜಸ್ತಾನದಲ್ಲಿನ ಬಾಂದೀಕುಯಿ ರೈಲ್ವೆ ಜಂಕ್ಷನ್ನನ್ನು ತಲಪಿದ. ಅಲ್ಲಿ ರೇಲ್ವೆಯ ಕ್ಷೇತ್ರೀಯ ಕಾರ್ಯಾಲಯವಿತ್ತು. ಅಲ್ಲಿಗೆ ಜನರಲ್ ಮ್ಯಾನೇಜರ್ ಬರುವವರಿದ್ದರು. ರೇಲ್ವೆಯ ಸಿಬ್ಬಂದಿ ಸಾಹೇಬರ ಸ್ವಾಗತಕ್ಕೆ ತಯಾರಿ ನಡೆಸಿದ್ದರು; ಈ ಸಂದರ್ಭದಲ್ಲಿ ಸಾಹೇಬರ ಪ್ರೀತ್ಯರ್ಥ ಸಂಗೀತ ಕಾರ್ಯಕ್ರಮವನ್ನು ಇಟ್ಟುಕೊಳ್ಳಲು ಇಚ್ಛಿಸಿದ ರೇಲ್ವೆ ಸಿಬ್ಬಂದಿಗೆ ಒಳ್ಳೆಯ ಗಾಯಕ ಸಿಗಲಿಲ್ಲ.

ಶೋಧಿಸುತ್ತ ಹೊರಟಾಗ ಆ ಕಾರ್ಯಕ್ರಮದ ಸಂಘಟನಾ ಕಾರ್ಯದರ್ಶಿಗೆ ಚಿಕ್ಕ ಹೋಟೆಲ್ಲೊಂದರ ಕೊಠಡಿಯಿಂದ ಹಾರ್ಮೋನಿಯಂನ ಸ್ವರ ಕೇಳಿಬಂತು. ಜೊತೆಗೆ ತರುಣ ಗಾಯಕನೊಬ್ಬನ ಧ್ವನಿಯೂ ಕೇಳಿಸಿತು. ಆ ಗಾಯಕ ಭೈರವೀ ರಾಗದ ಅಭ್ಯಾಸ ಮಾಡುತ್ತಿದ್ದ. ಮರುಭೂಮಿಯಲ್ಲಿ ನೀರನ್ನು ಕಂಡಷ್ಟು ಸಂತೋಷವಾಯಿತು ಕಾರ್ಯದರ್ಶಿಗೆ. ಆತ ಹೋಟೆಲ್ ಮ್ಯಾನೇಜರ್ ಜೊತೆ ಆ ಸಂಗೀತಗಾರನ ಕೋಣೆಗೆ ಹೋದ. ತಾವು ಯೋಜಿಸಿರುವ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸುವಂತೆ ಆ ಗಾಯಕನನ್ನು ಕೇಳಿಕೊಂಡ.

ಆ ಗಾಯಕ, "ನಾನಿಲ್ಲಿಗೆ ಟೈಪ್‌ರೈಟರುಗಳನ್ನು ಮಾರಾಟ ಮಾಡಲು ಬಂದಿದ್ದೇನೆ. ನಿಮ್ಮ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ನಾನು ಭಾಗವಹಿಸಿದರೆ ನನ್ನ ಕೆಲಸ ಸ್ಥಗಿತಗೊಳ್ಳುತ್ತದೆ," ಎಂದು ಹೇಳಿಕೊಂಡ.

"ಹಾಗಾಗುವುದಿಲ್ಲ. ನಿಮ್ಮ ಸಂಗೀತ ಕಾರ್ಯಕ್ರಮ ನಮ್ಮ ಜನರಲ್ ಮ್ಯಾನೇಜರರಿಗೆ ಇಷ್ಟವಾದರೆ, ನಾವೆಲ್ಲ ಅಧಿಕಾರಿಗಳೂ ಟೈಪ್‌ರೈಟರುಗಳಿಗೆ ಆರ್ಡರುಗಳನ್ನು ನೀಡುತ್ತೇವೆ. ಪ್ರತಿ ತಿಂಗಳಿಗೆ ಹತ್ತು ರೂಪಾಯಿಯಂತೆ ಕಂತು ಕಟ್ಟುವುದು ನಮಗೆ ಕಷ್ಟದ ಕೆಲಸವೇನಲ್ಲ," ಎಂದು ಆ ಕಾರ್ಯದರ್ಶಿ ಹೇಳಿದ. ಚತುರ ಸೇಲ್ಸ್‌ಮನ್ 'ಆಲ್ ರೈಟ್' ಎಂದು ಕೊನೆಗೂ ಒಪ್ಪಿಕೊಂಡ.

ನಿಜಕ್ಕೂ, ಮೂರನೆಯ ದಿವಸ ರೈಲ್ವೆ ಅಧಿಕಾರಿಗಳು ಯೋಜಿಸಿದ್ದ ಸಾಂಸ್ಕೃತಿಕ ಕಾರ್ಯಕ್ರಮ ಯಶಸ್ವಿಯಾಯಿತು. ಎಲ್ಲರಿಗೂ ಆ ಸೇಲ್ಸ್‌ಮನ್ನನ ಸಂಗೀತ ತುಂಬಾ ಖುಷಿ ನೀಡಿತ್ತು! ರೈಲ್ವೆಯ ಜನರಲ್ ಮ್ಯಾನೇಜರರು ಈ ಸ್ವಾಗತ ಸಮಾರಂಭದಿಂದ ತುಂಬಾ ಸಂತೋಷಗೊಂಡರು.

ಎಲ್ಲ ಅಧಿಕಾರಿಗಳೂ ತಮ್ಮ ಮಾತಿನ ಪ್ರಕಾರ ಪೋರ್ಟೆಬಲ್ ಟೈಪ್‌ರೈಟರುಗಳಿಗೆ ಆರ್ಡರ್ ನೀಡಿದರು. ಆ ಸೇಲ್ಸ್‌ಮನ್ ತನ್ನ ಡಿವಿಜನಲ್ ಮ್ಯಾನೇಜರರಿಗೆ ಆ ಆರ್ಡರುಗಳನ್ನು ತೋರಿಸಿದಾಗ ಆತ ಆಶ್ಚರ್ಯಚಕಿತನಾದ. ಕೆಲಸಕ್ಕೆ ಸೇರಿದ ಹೊಸತಿನಲ್ಲಿ ಈತನಂತೆ ಬೇರೆ ಯಾವ ಸೇಲ್ಸ್‌ಮನ್ನನೂ ತನ್ನ ಒಂದು ಟೂರಿನಲ್ಲಿ ಇಷ್ಟು ಪ್ರಮಾಣದ ಆರ್ಡರುಗಳನ್ನು ತಂದಿರಲಿಲ್ಲ.

ಆ ಸಂಗೀತಗಾರ ಸೇಲ್ಸ್‌ಮನ್ ಯಾರು ಗೊತ್ತೆ? ಹಿಂದೀ ಚಿತ್ರಗಳ ಪ್ರಸಿದ್ಧ ನಟ ಹಾಗೂ ಗಾಯಕರಾಗಿದ್ದ ಶ್ರೀ ಕುಂದನ್‌ಲಾಲ್ ಸೈಗಲ್!

ಸಂಗ್ರಹ: ಜೆ.ವಿ.ಶಶಿಧರ

# ಮುಷ್ಕರ

ಮುಮ್ತಾಜ್

**ಡಾ.** ಸಲೀಂ ಮನೆಯ ಅಂಗಳದಲ್ಲಿ ಶತಪಥ ಹಾಕುತ್ತಿದ್ದರು. ಮಗ ಡಾಕ್ಟರ್ ಆದಂದಿನಿಂದ ಸರಿಯಾಗಿ ಅವನ ದರ್ಶನವೇ ಆಗುತ್ತಿಲ್ಲ. ಎಷ್ಟು ಹೊತ್ತಿಗೆ ಬರುತ್ತಾನೆ, ಎಷ್ಟು ಹೊತ್ತಿಗೆ ಹೋಗುತ್ತಾನೆ ಎನ್ನುವುದೊಂದೂ ಅವರಿಗೆ ಗೊತ್ತಾಗುತ್ತಿಲ್ಲ. ರಾತ್ರಿಯೇರುತ್ತಿದೆ. ಗಂಟೆ ಹನ್ನೊಂದೂವರೆ. ಇನ್ನು ಜಾಗರಣೆ ಸಾಧ್ಯವಿಲ್ಲ.

ಬೆಳಿಗ್ಗೆ ನಾಷ್ಟಾ ಮಾಡಲು ಬಂದಾಗ ಮಗ ಬೇಗ ಬೇಗ ತಿಂಡಿ ಮುಗಿಸಿ ಪ್ಲೇಟಿನಲ್ಲೇ ಕೈತೊಳೆದು, ''ಡ್ಯಾಡಿ, ಹೋಗಿ ಬರ್ತೀನೆ,'' ಎಂದು ಹೊರಟುನಿಂತಾಗ ಡಾ. ಸಲೀಂ ಅವನ ಕೈ ಹಿಡಿದೆಳೆದು, ''ಏನಷ್ಟು ಅವಸರ ಇಮ್ರಾನ್. ನೀನು ಡ್ಯೂಟಿಗೆ ಹೋಗಲು ಆರಂಭಿಸಿದ ಮೇಲೆ ನಿನ್ನ ಭೇಟಿಯೇ ಅಪರೂಪವಾಗಿದೆಯಲ್ಲ,'' ಎಂದು ಕೇಳಿದರು.

''ಅಂಥದೇನಿಲ್ಲ ಡ್ಯಾಡಿ. ನಮ್ಮ ಆಸ್ಪತ್ರೆಯ ಡಾಕ್ಟರ್ಸ್ ಎಲ್ಲ ಮುಷ್ಕರ ಹೂಡುವವರಿದ್ದೇವೆ. ಅದರ ಬಗ್ಗೆ ಮೀಟಿಂಗ್ ನಡೆಯುತ್ತಿದೆ. ಸರಕಾರ ನಮ್ಮ ಬೇಡಿಕೆಗಳನ್ನು ಏಕೆ ಪೂರೈಸುವುದಿಲ್ಲ? ಸಾಕಷ್ಟು ಮನವಿ ಮಾಡಿಯಾಯಿತು. ಇನ್ನು ಉಳಿದಿರುವ ದಾರಿಯೆಂದರೆ ಸ್ಟ್ರೈಕ್ ಒಂದೇ. ಡ್ಯಾಡಿ ಪ್ಲೀಸ್, ಸಂಜೆ ಆರಾಮವಾಗಿ ಮಾತನಾಡೋಣ. ನೌ ಲೆಟ್ ಮಿ ಗೋ,'' - ಇಮ್ರಾನ್ ಓಡಿಯೇ ಬಿಟ್ಟ. ಸಲೀಂ ನಿಧಾನವಾಗಿ ನಾಷ್ಟಾ ಮುಗಿಸಿ ತಮ್ಮ ಓದುವ ಕೋಣೆಗೆ ಬಂದಾಗ 25 ವರ್ಷಗಳ ಹಿಂದಿನ ಚಿತ್ರ ಕಣ್ಣ ಮುಂದೆ ಮೂಡಿತು.

ರಮ್‌ಜಾನ್ ತಿಂಗಳು. ಸಲೀಂ ತಮ್ಮ ಕ್ಲಿನಿಕ್‌ನಲ್ಲಿದ್ದ ಎಲ್ಲಾ ರೋಗಿಗಳಿಗೆ ಔಷಧಿ ಕೊಟ್ಟು ಇನ್ನಾರೂ ಇಲ್ಲ ಎಂದು ಖಾತ್ರಿಯಾದ ಮೇಲೆ ವಾಚ್ ನೋಡಿಕೊಂಡರು. ಉಪವಾಸ ಬಿಡಲು ಸ್ವಲ್ಪವೇ ಸಮಯ ಉಳಿದಿತ್ತು. ''ಅನಿಫ್, ಬ್ಯಾಗು ಗಾಡಿಯಲ್ಲಿಟ್ಟು ಬಿಡು,'' ಎಂದು ಎದ್ದು ನಿಂತರು. ಇನ್ನೇನು ಹೊರಡಬೇಕು ಅನ್ನುವಾಗ, ''ಡಾಕ್ಟರ್... ಡಾಕ್ಟರ್... ನನ್ನ ಜತೆ ಬನ್ನಿ. ನನ್ನ ಮಗುವಿಗೆ ಮೂರು ದಿನದಿಂದ ಜ್ವರ ಬಿಟ್ಟಿಲ್ಲ. ಮೂರ್ಛೆ ಹೋದಂತೆ ಇದ್ದಾಳೆ. ಪ್ಲೀಸ್, ಬೇಗ ಬನ್ನಿ''. ಎನ್ನುತ್ತಾ ಧಾವಿಸಿ ಬಂದಳು ಆಕೆ. ಸಲೀಂ ಆಕೆಯನ್ನು ದಿಟ್ಟಿಸಿದರು. ಸುಮಾರು 25ರಷ್ಟು ವಯಸ್ಸು. ಸುಂದರಿಯಾದರೂ ಸೋತು ಸೊರಗಿದ ಮುಖದಲ್ಲಿ ಆತಂಕ, ಭಯಭೀತ ಕಣ್ಣಲ್ಲಿ ಇಣುಕುವ ನೀರು. ಆದರೆ ಉಪವಾಸ ಬಿಡುವ ಹೊತ್ತು.

(ಉರ್ದು ಟಿ.ವಿ. ನಾಟಕವೊಂದರ ಪ್ರೇರಣೆಯಿಂದ)

''ನಾನು ಮನೆಗೆ ಹೋಗಬೇಕಾಗಿತ್ತು. ಇಫ್ತಾರ್ ಸಮಯ ಆಗುತ್ತಾ ಇದೆ.'' ಸಲೀಂ ಅನುಮಾನಿಸಿದಾಗ ಆಕೆಯ ಕಣ್ಣಲ್ಲಿ ತುಳುಕುತ್ತಿದ್ದ ನೀರು ಜಾರಿ ಕೆನ್ನೆಯ ಮೇಲೆ ಹರಿಯಿತು.

''ಪ್ಲೀಸ್ ಡಾಕ್ಟರ್, ನನ್ನ ಮಗುವನ್ನು ಉಳಿಸಿ. ನಿಮಗೆ ಇಫ್ತಾರ್ ನಾನು ಮಾಡಿಸುತ್ತೇನೆ.''

ಇನ್ನು ಪ್ರತಿ ಹೇಳುವಂತಿಲ್ಲ. ಆಕೆಯ ಜತೆ ಹೊರಟು ನಿಂತರು. ಆಕೆ ಬ್ಯಾಗ್ ಎತ್ತಿಕೊಳ್ಳಲು ಮುಂದಾದಾಗ ಸಲೀಂ ತಾನೇ ಎತ್ತಿಕೊಂಡು ಕಾರಿನಲ್ಲಿ ಕುಳಿತು ಅವಳನ್ನೂ ಕೂಡಿಸಿಕೊಂಡರು.

''ಮನೆ ತುಂಬಾ ದೂರವಿದೆಯಾ?'' ಕಾರು ಸ್ಟಾರ್ಟ್ ಮಾಡುತ್ತಾ ಕೇಳಿದರು.

''ಇಲ್ಲ ಡಾಕ್ಟರ್, ಮುಂದಿನ ತಿರುವಿನಲ್ಲಿ ಎಡಕ್ಕೆ ತಿರುಗಿ ನೇರ ಹೋಗಿ. ಅಲ್ಲೇ ಸ್ವಲ್ಪ ಮುಂದೆ.'' - ಡಾಕ್ಟರ್ ಹಾಗೆಯೇ ಕಾರು ನಡೆಸಿದರು. ಐದು ನಿಮಿಷದ ದಾರಿ ಸಾಗಿದ ಮೇಲೆ ಆಕೆಯ ಕಡೆ ತಿರುಗಿ ನೋಡಿದರು. ಆಕೆ ಸೀಟಿಗೆ ಒರಗಿ ಕಣ್ಣು ಮುಚ್ಚಿದ್ದಳು.

'ಪಾಪ. ರಾತ್ರಿ ನಿದ್ದೆಗೆಟ್ಟು ಸೋತಿರಬೇಕು.' ಅಂದುಕೊಂಡು ನಂತರ ಸ್ವಲ್ಪ ಹೊತ್ತು ಬಿಟ್ಟು ಕೇಳಿದರು. ''ಇನ್ನೆಷ್ಟು ದೂರ ಹೋಗಬೇಕು?'' ಆಕೆ ನೆಚ್ಚಿ ಬಿದ್ದು, ''ಅಂ... ಹೀಗೇ ಮುಂದೆ ಹೋಗುತ್ತಾ ದೊಡ್ಡ ಇನ್ಶೂರೆನ್ಸ್ ಬೋರ್ಡ್ ಸಿಗುತ್ತದೆ. ಅಲ್ಲಿಂದ ಬಲಕ್ಕೆ ತಿರುಗಿದರೆ ಒಂದು ಕಚ್ಚಾ ಮಾರ್ಗ ಗುಡ್ಡೆಯ ಬಳಿ ಒಯ್ಯುತ್ತದೆ. ಅಲ್ಲೇ ನನ್ನ ಮನೆ,'' ಎಂದು ಆಕೆ ಸೀಟಿಗೆ ಒರಗಿ ಕಣ್ಣು ಮುಚ್ಚಿದಳು. ನಿರ್ಜನ ಮಾರ್ಗ. ಉಪವಾಸದ ವೇಳೆ ಮೀರುತ್ತಿದೆ. ಸಲೀಂ ವೇಗ ಹೆಚ್ಚಿಸಿದರು. ಆಕಾಶದಂಚಿನಲ್ಲಿ ಕೆಂಪು ಹರಡಿತ್ತು. ಹತ್ತು ನಿಮಿಷ ದಾರಿ ಕ್ರಮಿಸಿದರೂ ಯಾವ ಬೋರ್ಡೂ ಕಣ್ಣಿಗೆ ಬೀಳಲಿಲ್ಲ. ಆಕೆ ಅಂತೂ ಗಾಢ ನಿದ್ರೆ. ಸಮಯ ನೋಡಿಕೊಂಡರು. ಇಫ್ತಾರ್ ವೇಳೆಯಾಗಿದೆ. ಮಸೀದಿಯೊಂದರ ಪಕ್ಕ ಕಾರು ನಿಲ್ಲಿಸಿ ವುಝು ಮಾಡಿ ಉಪವಾಸ ಬಿಟ್ಟು ನಮಾಜ್ ಮುಗಿಸಿ ಬರುವವರೆಗೂ ಆಕೆ ನಿದ್ದೆಯಲ್ಲೇ ಇದ್ದಳು. ಕಾರು ಮುಂದುವರಿಯಿತು. ಮತ್ತೆ ಜನ ಸಂಚಾರವಿಲ್ಲದ ಪ್ರದೇಶ. ದಾರಿದೀಪಗಳಲ್ಲಿ ಬಲ್ಬುಗಳೇ ಇದ್ದಂತಿಲ್ಲ. ಕೊನೆಗೊಮ್ಮೆ ದೊಡ್ಡ ಇನ್ಶೂರೆನ್ಸ್ ಬೋರ್ಡ್ ಕಾಣಿಸಿತು. ಆಕೆ ಹೇಳಿದ್ದಂತೆ ಬೋರ್ಡಿನ ಬಲಕ್ಕೆ ಕಚ್ಚಾ ಮಾರ್ಗವೊಂದು ಹೋಗಿತ್ತು. ಸಲೀಂ ಕಾರನ್ನು ತಿರುಗಿಸಿದರು. ಮಾರ್ಗದ ಎರಡು ಬದಿಗೂ ಬರಿ ಮರುಭೂಮಿಯಂಥ ಪ್ರದೇಶ. ಎಲ್ಲೆಲ್ಲೂ ಮೌನ. ಕಾರಿನ ಲೈಟಿನಲ್ಲಿ ಅಡ್ಡಾದಿಡ್ಡಿ ಬಿದ್ದಿರುವ ಕಲ್ಲುಗಳು ಗೋಚರಿಸುತ್ತಿದ್ದವು. ಮಾರ್ಗ ಕೊನೆಗೊಂಡಲ್ಲಿ ಬರೇ ಕಲ್ಲುಗಳ ರಾಶಿ. ಮಣ್ಣಿನ ದಿಬ್ಬಗಳು.

ಕಾರು ನಿಲ್ಲಿಸಿದ ಸಲೀಮರಿಗೆ ಒಂದು ಕ್ಷಣ ಜುಮ್ಮೆಂದಿತು. ಆದರೂ ಧೈರ್ಯವನ್ನೆಲ್ಲ ಒಟ್ಟುಗೂಡಿಸಿ, ''ಎಲ್ಲಿದೆ ನಿನ್ನ ಮನೆ?'' ಎಂದು ಕೇಳಿದರು.

''ಅಗೋ ಅಲ್ಲಿ,'' ಕೈ ತೋರಿಸಿದಳು.

ಅಲ್ಲೊಂದು ಮಣ್ಣಿನ ದಿಬ್ಬ. ಮೇಲೆ ಎರಡು ಕಲ್ಲುಗಳು.

ಸಲೀಮರಿಗೆ ರೇಗಿತ್ತು -'' ಏನಿದು ಹುಡುಗಾಟ! ತಲೆ ಕೆಟ್ಟಿದೆಯೇನು ನಿನಗೆ?'' ಆಕೆ ಗಹಗಹಿಸಿ ನಕ್ಕಳು. ನಕ್ಕು ನಕ್ಕು ಬಿಕ್ಕಳಿಸತೊಡಗಿದಳು.

''ನಿನಗೆ ನನ್ನ ಪರಿಚಯವಾಗಲಿಲ್ಲ ಅಲ್ಲವೇ ಡಾಕ್ಟರ್ ಸಲೀಂ, ನೆನಪು ಮಾಡಿಕೊಳ್ಳಿ. ಮೂರು ವರ್ಷಗಳ ಹಿಂದೆ ನನ್ನ ಮಗಳು ಜ್ವರದಲ್ಲಿ ಚಡಪಡಿಸುತ್ತಿದ್ದಳು. ಆಸ್ಪತ್ರೆಗೆ ಬಂದು ನಿನ್ನ ಕಾಲು ಹಿಡಿಯುವುದೊಂದು ಬಾಕಿ ಉಳಿದಿತ್ತು. ಮುಷ್ಕರವಂತೆ ಮುಷ್ಕರ. ನಿನ್ನ ಮುಷ್ಕರ ನನ್ನ ಮಗಳ ಪ್ರಾಣ ಹೀರಲಿಲ್ಲವೆ? ನೋಡು ಅದೇ ನನ್ನ ಮಗಳ ಗೋರಿ. ನೀನೇ ಅವಳನ್ನು ಕೊಂದ ಪಾಪಿ. ನಿನ್ನನ್ನು ಜೀವ ಸಹಿತ ಬಿಡುವುದಿಲ್ಲ,'' ಆಕೆ ಒಂದೇ ಸವನೆ ಆವೇಶದಿಂದ ಅಬ್ಬರಿಸುತ್ತಿದ್ದಳು.

''ಗಾಡಿಯಿಂದ ಕೆಳಕ್ಕಿಳಿ. ಆ ದಿನ ನಾ

ನೊಬ್ಬ ಮಾತ್ರ ಮುಷ್ಕರ ಹೂಡಿದವನಲ್ಲ. ಎಲ್ಲ ಡಾಕ್ಟರುಗಳೂ ಮುಷ್ಕರದಲ್ಲಿದ್ದರು. ಅನ್ಯಾಯವಾದದ್ದು ನಿನಗೊಬ್ಬಳಿಗೇ ಅಲ್ಲ - ಹಲವಾರು ಜನರಿಗೂ ಅನ್ಯಾಯವಾಗಿದೆ. ಆ ಬಗ್ಗೆ ಎಲ್ಲರಿಗೂ ದುಃಖವಾಗಿದೆ. ಈಗ ನನ್ನನ್ನೇಕೆ ಹಿಂಸಿಸುತ್ತೀ. ಗಾಡಿಯಿಂದಿಳಿ. ನಾನು ಮನೆಗೆ ಹೋಗಬೇಕು.'' ಕಾರಿನ ಬಾಗಿಲು




ತೆರೆದು ಆಕೆಯನ್ನು ಇಳಿಯುವಂತೆ ಒತ್ತಾಯಿಸಿದರು ಸಲೀಂ.

''ಬಚಾವ್ರೋ, ಬಚಾವ್ರೋ, ಇಲ್ಲಿ ನನ್ನನ್ನು ಎಳೆದೊಯ್ಯುತ್ತಿದ್ದಾನೆ. ಯಾರಾದರೂ ಬನ್ನಿ,'' ಆಕೆ ಬೊಬ್ಬಿಡುತ್ತಲೇ ಇದ್ದಳು. ಎಲ್ಲಿಂದಲೋ ನಾಲ್ಕಾರು ದಾಂಡಿಗರು ಓಡಿ ಬಂದರು. ಸಲೀಂರಿಗೆ ಮುಖದ ಮೇಲೊಂದು ಪ್ರಹಾರ ಬಿದ್ದುದಷ್ಟೆ ಗೊತ್ತು.

ಮೂರ್ಛೆ ತಿಳಿದಾಗ ಸಲೀಂ ಆಸ್ಪತ್ರೆಯಲ್ಲಿದ್ದರು. ಮೈ ಕೈಗೆಲ್ಲ ಬ್ಯಾಂಡೇಜು ಸುತ್ತಿದ್ದರು. ತಲೆ ಒಡೆದು ಹೋಗುವಂತೆನಿಸುತ್ತಿತ್ತು. ಸಲೀಂ ನರಳಿದಾಗ, ಅಷ್ಟೂ ಹೊತ್ತು ತಲೆಗೆ ಕೈ ಹೊತ್ತು ಕೂತಿದ್ದ ವೃದ್ಧೆ ಎದ್ದು ಅವರ ಹಣೆಗೆ ಕೈ ಇಟ್ಟು, ''ತುಂಬಾ ನೋವಿದೆಯಾ?'' ಎಂದು ಕೇಳಿದಳು.

''ಹೂಂ... ಆದರೆ ನಾನೆಲ್ಲಿದ್ದೇನೆ? ನೀವು ಯಾರು?''

''ನೀವು ಆಸ್ಪತ್ರೆಯಲ್ಲಿದ್ದೀರಿ ಡಾಕ್ಟ್ರೇ. ನನ್ನ

ಮಗಳು ನಿಮ್ಮನ್ನು ಕಾರಿನಲ್ಲಿ ಕಬ್ರಸ್ಥಾನಕ್ಕೆ ಕರೆದೊಯ್ದಿದ್ದಳು. ಪುಣ್ಯವಶಾತ್ ನಾನು ಅವಳನ್ನು ಹುಡುಕಿಕೊಂಡು ಎಂದಿನಂತೆ ಅಲ್ಲಿಗೆ ಬಂದುದರಿಂದ ನಿಮ್ಮನ್ನು ಆ ದುರುಳರಿಂದ ಬಿಡಿಸಿ ಇಲ್ಲಿಗೆ ಕರೆದು ತರಲು ಸಾಧ್ಯವಾಯಿತು. ಒಂದು ವೇಳೆ ನಾನು ಅಲ್ಲಿಗೆ ಬಾರದಿರುತ್ತಿದ್ದರೆ ಅವಳು ನಿಮ್ಮ ಪ್ರಾಣ ತೆಗೆಯಿಸುತ್ತಿದ್ದಳು.'' - ವೃದ್ಧೆ ಕಣ್ಣೊರಸಿಕೊಂಡಳು.

ಕೆಲವು ದಿನಗಳಾದ ಮೇಲೆ ಚೇತರಿಸಿಕೊಂಡ ಸಲೀಮ್ ಆ ವೃದ್ಧೆಯ ಮನೆಯನ್ನು ಹುಡುಕಿಕೊಂಡು ಹೊರಟರು. ಪ್ರೀತಿಯಿಂದ ಬರಮಾಡಿಕೊಂಡ ಆಕೆ ಅದೂ ಇದೂ ಮಾತನಾಡುತ್ತಾ ತಮ್ಮ ಮಗಳ ಬಗ್ಗೆ ಪ್ರಸ್ತಾಪಿಸಿದಳು: ''ಮೂರು ವರ್ಷಗಳ ಹಿಂದೆ ಶಾಹಿದಾಳ ಪತಿ ಅಪಘಾತವೊಂದರಲ್ಲಿ ತೀರಿಹೋದರು. ಆ ದುಃಖದಲ್ಲಿ ಮುಳುಗಿದ್ದಂತೆ ಸ್ವಲ್ಪ ದಿನದಲ್ಲೇ ಮಗುವೂ ತೀರಿಹೋಯಿತು. ಅಂದಿನಿಂದ ಅವಳು ಹೀಗಾಗಿದ್ದಾಳೆ. ಮಗುವಿಗೆ ಜ್ವರ ಬಂದಿದ್ದಾಗ ಡಾಕ್ಟರುಗಳೆಲ್ಲ ಮುಷ್ಕರದಲ್ಲಿದ್ದು ಅವಳ ಮಗು ತೀರಿಹೋಯಿತು. ಸರಿಯಾದ ಚಿಕಿತ್ಸೆ ನೀಡಿದ್ದರೆ ಬದುಕುತ್ತಿತ್ತು. ಮಗುವಿನ ಸಾವಿಗೆ ಡಾಕ್ಟರೇ ಕಾರಣ ಎಂಬ ನಂಬಿಕೆ ಅವಳದು. ಒಮ್ಮೊಮ್ಮೆ ಡಾಕ್ಟರುಗಳನ್ನೆಲ್ಲ ಬಾಯಿಗೆ ಬಂದಂತೆ ಬೈದು ಸೋತು ಹೋದಾಗ ಕಬ್ರಸ್ಥಾನಕ್ಕೆ ಹೋಗಿ ಮಗುವಿನ ಗೋರಿಯ ಬಳಿ ಕೂತು ಬಿಡುತ್ತಾಳೆ.''

''ಯಾರಾದರೂ ಮನಶ್ಶಾಸ್ತ್ರಜ್ಞರಿಗೆ ತೋರಿಸಿಲ್ಲವೇ?'' ಸಲೀಂ ಕೇಳಿದರು.

''ಎಲ್ಲಾ ಮಾಡಿದೆವು. ಅವಳು ಸರಿಯಾಗಿ ಚಿಕಿತ್ಸೆ ಮಾಡಿಸಿಕೊಂಡರಲ್ಲವೆ? ಔಷಧಿ ತೆಗೆದುಕೊಂಡರೆ ಸರಿಯಾಗಿರುತ್ತಾಳೆ. ಬಿಟ್ಟುಬಿಟ್ಟರೆ ಹೀಗೆಲ್ಲಾ ಹುಚ್ಚರಂತೆ ವರ್ತಿಸುತ್ತಾಳೆ.''

''ನಾಳೆ ನಾನು ನಿಮ್ಮ ಮಗಳನ್ನು ಕರೆದುಕೊಂಡು ನನ್ನ ಮಿತ್ರರ ಬಳಿ ಚಿಕಿತ್ಸೆಗೆ ಕರೆದೊಯ್ಯುತ್ತೇನೆ. ಬಿಡದೆ ಚಿಕಿತ್ಸೆ ಮಾಡಿಸಬೇಕು. ಹೀಗೆಯೆ ಬಿಟ್ಟರೆ ಇನ್ನೂ ಹೆಚ್ಚಾಗಬಹುದು. ನಾನಿನ್ನು ಬರ್ತೇನಮ್ಮ,'' ಎಂದು ಸಲೀಂ ಅವರಿಂದ ಬೀಳ್ಕೊಂಡು ಹೊರಟರು.

★

''ಅದೇನೋ ಅಷ್ಟು ಯೋಚನೆ ಮಾಡ್ತಾ ಇದ್ದೀರಲ್ಲ. ಮಗನ ಚಿಂತೆಯೆ? ಆತನೇನೂ ಸಣ್ಣ ಮಗುವಲ್ಲ. ಆಸ್ಪತ್ರೆಯಲ್ಲಿ ಹೆಚ್ಚು ಕೆಲಸವಿರಬಹುದು. ಅದಕ್ಕೇ ಹೊತ್ತಿಗೆ ಸರಿಯಾಗಿ ಮನೆಗೆ ಬರುವುದಿಲ್ಲವೇನೋ. ತಾಯಿಯಾಗಿ ನನಗಿಲ್ಲದ ಚಿಂತೆ ನಿಮಗೇಕೆ?'' ಪತ್ನಿಯ ಮಾತಿಗೆ ಯೋಚನೆಯಿಂದ ಎಚ್ಚತ್ತರು ಸಲೀಂ.

''ಮಗನ ಬಗ್ಗೆ ಚಿಂತೆ ಅಲ್ಲ ಶಾಹಿದಾ. ನಿನ್ನ ಮಗನ ಆಸ್ಪತ್ರೆಯಲ್ಲಿ ಇಂದು ಡಾಕ್ಟರರು ಮುಷ್ಕರ ಹೂಡುತ್ತಿದ್ದಾರಂತೆ. ಮುಷ್ಕರ ಎಂದಾಕ್ಷಣ ಎದೆ ನಡುಗುತ್ತದೆ. ಇನ್ನು ಯಾವ ಶಾಹಿದಾಳಿಗೆ ಅನ್ಯಾಯ ಕಾದಿದೆಯೋ. ನನ್ನ ಸ್ಟೆತ್ ಎಲ್ಲಿದೆ ನೋಡು. ಈ ದಿನ ಯಾರು ಬೇಕಾದರೂ ಮುಷ್ಕರ ಹೂಡಲಿ, ನಾನು ಮಾತ್ರ ಹಗಲೂ ರಾತ್ರಿ ಕೆಲಸ ಮಾಡುವೆ,'' ಎಂದರು ಸಲೀಂ ಬಿಳಿ ಕೋಟು ಧರಿಸಿಕೊಳ್ಳುತ್ತಾ. ಶಾಹಿದಾ ಪತಿಯನ್ನೇ ದಿಟ್ಟಿಸಿದಳು. ಮರಣಾಂತಿಕ ಸ್ಥಿತಿಯಲ್ಲಿದ್ದ ಮಗುವಿನ ಚಿಕಿತ್ಸೆಗಾಗಿ ಡಾಕ್ಟರರ ಬಳಿ ಗೋಗರೆಯುತ್ತಿದ್ದ ತಾಯಿಯೊಬ್ಬಳ ಚಿತ್ರ ಮನಃಪಟಲದ ಮೇಲೆ ಮೂಡಿ ಕಣ್ಣು ತೇವವಾಯಿತು.

ಇದಾವುದರ ಅರಿವು ಇಲ್ಲದ ಪಕ್ಕದ ಮನೆಯ ನಾಯಿ ಒಂದೇ ಸಮನೆ ಬೊಗಳುತ್ತಿತ್ತು.

●

---

*ಹಸಿದವರಿಗೆ ನೀವು ನಾಲ್ಕು ಸ್ಯಾಂಡ್‌ವಿಚ್‌ಗಳನ್ನೂ ನಾಲ್ಕು ಸ್ವಾತಂತ್ರ್ಯಗಳನ್ನೂ ಇತ್ತರೆ ಅವರು ಕಣ್ಣುಮುಚ್ಚಿ ಆಯ್ಕೆ ಮಾಡಿಕೊಳ್ಳುವುದು ನಾಲ್ಕು ಸ್ಯಾಂಡ್‌ವಿಚ್‌ಗಳನ್ನೇ.*

*- ಸೇನ್ ಪಾಲ್ ಡಗ್ಲಾಸ್*

# ಬೆಳ್ಳಿಯ ಬಂಡೆಗಳು

**ಕೆ**ನಡಾ ಮತ್ತು ಅಮೇರಿಕಗಳ ನಡುವೆ ದಕ್ಷಿಣ ತೀರ ಅಮೇರಿಕದಲ್ಲೂ ಉತ್ತರ ತೀರ ಕೆನಡಾದಲ್ಲೂ ಇರುವ 'ಸುಪೀರಿಯರ್ ಲೇಕ್' ಎಂಬೊಂದು ವಿಶಾಲ ಸರೋವರವಿದೆ. ಕೆನಡಾದ ಓಂಟೇರಿಯಾ ನಗರ ಈ ಸರೋವರದ ಉತ್ತರ ದಡದಲ್ಲಿದೆ. ಇಲ್ಲಿಯೇ ಬಿರುಗಾಳಿಯ ಅನಾಹುತಕ್ಕಾಗಿ ಕುಖ್ಯಾತವಾದ 'ಥಂಡರ್ ಬೇ' ಎಂಬ ಕೊಲ್ಲಿಯಿದೆ.

ಇಲ್ಲಿ ಹಲವಾರು ಪುಟ್ಟ ಪುಟ್ಟ ದ್ವೀಪಗಳಿವೆ. ಅವುಗಳ ನೆಲ ನೀರಿನಿಂದ ಸ್ವಲ್ಪ ಮಾತ್ರ ಮೇಲಿರುವುದರಿಂದ ಸರೋವರದಲ್ಲಿ ಬಿರುಗಾಳಿ ಬಂದಾಗೆಲ್ಲ ಇವು ನೀರಲ್ಲಿ ಮುಳುಗಿ ಹೋಗುತ್ತವೆ. ಹೀಗಾಗಿ ಅವುಗಳೆಲ್ಲ ನಿರ್ಜನವಾಗಿವೆ.

ಈ ಕೊಲ್ಲಿಯಲ್ಲೇ ಒಂದು ಸಣ್ಣ ಜನರಹಿತ ಕಲ್ಲು ತುಂಬಿದ ದ್ವೀಪವಿದೆ. ಹವಾಮಾನ ಶಾಂತವಾಗಿರುವಾಗ ನೆಲ ನೀರಿನಿಂದ ಎರಡು ಮೂರು ಅಡಿಯಷ್ಟು ಮಾತ್ರ ಮೇಲೆ ಕಾಣಿಸುತ್ತದೆ. ಬಿರುಗಾಳಿ ಬೀಸಿದಾಗ ದ್ವೀಪ ಪೂರ್ತಿಯಾಗಿ ಮುಳುಗಿ ಹೋಗುವುದು. ಸುಮಾರು ಒಂದೂಕಾಲು ಶತಮಾನದ ಹಿಂದೆ, ಈ ಪುಟ್ಟ ದ್ವೀಪದ ಬಂಡೆಗಳ ಮೇಲೆ ಅಮೇರಿಕ ಹಾಗೂ ಇತರ ರಾಷ್ಟ್ರಗಳ ಶ್ರೀಮಂತರ ದೃಷ್ಟಿ ಬಿದ್ದಿತ್ತು. ಆ ವೇಳೆ ಇಲ್ಲಿ ಅತಿ ದೊಡ್ಡ ಬೆಳ್ಳಿಯ ಗಣಿಯೊಂದು ಪತ್ತೆಯಾಗಿತ್ತು.

1868ರ ಜೂನ್ ಎರಡರಂದು ಮೆಕ್‌ಫರ್‌ಲೇನ್ ಮತ್ತು ಮಾರ್ಗನ್ ಎಂಬಿಬ್ಬರು ಸ್ಕಾಟ್ಲೆಂಡಿನ ಶೋಧಕರು ಥಂಡರ್ ಬೇ ತೀರದ ಬಳಿ ನಾವೆ ನಡೆಸುತ್ತಿದ್ದರು. ಇಬ್ಬರೂ ತಾಮ್ರದ ಶೋಧಕ್ಕೆ ಹೊರಟವರು. ಅಂದು ಮಿಶಿಗನ್ ಪ್ರಾಂತದಲ್ಲಿ ತಾಮ್ರದ ಹೊಸ ಗಣಿ ಪತ್ತೆಯಾಗಿತ್ತು. ಮಿಶಿಗನ್ನಿನಲ್ಲಿ ನೆಲದಡಿಯಲ್ಲಿ ಕಂಡುಬಂದ ತಾಮ್ರದ ಅದುರಿನ ನಿಕ್ಷೇಪ ಸುಪೀರಿಯರ್ ಸರೋವರದ ಕೆಳಭಾಗದಲ್ಲೇ ಸಾಗುತ್ತ ಸಾಗುತ್ತ ಅದರ ಉತ್ತರ ತೀರದಲ್ಲಿ ಥಂಡರ್ ಬೇ ಕ್ಷೇತ್ರದಲ್ಲೂ ಹರಡಿರಬಹುದೆಂದು ಮೆಕ್‌ಫರ್ಲೇನ್ ಹಾಗೂ ಮಾರ್ಗನ್ ತರ್ಕಿಸಿದರು.

ಈಗ ಅವರು ತಮ್ಮ ಸಾಮಾನುಗಳನ್ನಿಡಲು ಅನುಕೂಲವಾದ ಜಾಗವನ್ನು ಹುಡುಕುತ್ತಿದ್ದರು. ಆ ಉದ್ದೇಶದಿಂದಲೇ ಅವರು ಆ ಪುಟ್ಟ ದ್ವೀಪದ ಬಳಿ ತಲುಪಿದ್ದರು.

ಇಬ್ಬರೂ ಕೆಳಗಿಳಿದು ಎತ್ತರವಾದ ಜಾಗದಲ್ಲಿ ತಮ್ಮ ಸಾಮಾನುಗಳನ್ನಿಡಲು ನೆಲದಲ್ಲಿ ತೂತು ಕೊರೆಯತೊಡಗಿದಾಗ ಆಕಸ್ಮಾತ್ತಾಗಿ ಅವರ ದೃಷ್ಟಿ ಕಂದು ಬಣ್ಣದ ಪಟ್ಟಿಯೊಂದರ ಮೇಲೆ ಬಿತ್ತು. ಅದು ಬಂಡೆಗಳಲ್ಲಿ ಬಹುದೂರದವರೆಗೆ ವ್ಯಾಪಿಸಿತ್ತು.

"ಬೆಳ್ಳಿಯಿರಬಹುದೆಂದು ತೋರುತ್ತದೆ," ಎಂದ ಮೆಕ್‌ಫರ್ಲೇನ್ ತಮಾಷೆಗಾಗಿ.

ಇಬ್ಬರೂ ಉತ್ಸುಕತೆಯಿಂದ ಆ ಪಟ್ಟಿ ಎಲ್ಲಿಯವರೆಗೆ ಮುಂದುವರೆದಿದೆಯೆಂಬುದನ್ನು ನೋಡುತ್ತ ನಡೆದರು. 20 ಅಡಿ ಅಗಲದ ಆ ಪಟ್ಟಿ ಮುಂದೆ ನೀರೊಳಗೆ ಮರೆಯಾಗಿತ್ತು. ಮಾರ್ಗನ್ ಎಚ್ಚರಿಕೆಯಿಂದ ಅದನ್ನು ಪರೀಕ್ಷಿಸತೊಡಗಿದ.

'ಸವ್ಯಸಾಚಿ'

"ಹೌದೇ ಹೌದು, ಇದು ಬೆಳ್ಳಿಯೆ ಸರಿ," ಎಂದು ಒಮ್ಮೆಲೇ ಅವನು ಉದ್ಗರಿಸಿದ. ಮೆಕ್‌ಫರ್ಲೇನನೂ ಆ ಪಟ್ಟಿಯನ್ನೂ ಪರಿಶೀಲಿಸಿದ. ಇಬ್ಬರೂ ಓಡಿಹೋಗಿ ಗುದ್ದಲಿಯನ್ನು ತಂದರು. ಹುಚ್ಚರಂತೆ ಆ ಪಟ್ಟಿಯನ್ನು ಅಗೆಯ ತೊಡಗಿದರು. ಕೆಲವು ಗಂಟೆಗಳಲ್ಲೇ ಅವರು ಸುಮಾರು ಸಾವಿರ ಪೌಂಡುಗಳಷ್ಟು ಬೆಲೆ ಬಾಳುವ ಬೆಳ್ಳಿಯನ್ನು ಅಗೆದು ತೆಗೆದರು.

ಹಿಂದಿರುಗಿ ಅವರು ಈ ಸುದ್ದಿಯನ್ನು ತಮ್ಮ ಗೆಳೆಯರಿಗೆ ತಿಳಿಸಿದರು. ಈಗ ಎಲ್ಲೆಲ್ಲೂ ಕೋಲಾಹಲವುಂಟಾಯಿತು. ನೂರಾರು ಇಂಜಿನೀಯರರು ದ್ವೀಪಕ್ಕೆ ತಲುಪಿದರು. ಮಾರ್ಗನ್ ಮತ್ತು ಮೆಕ್‌ಫರ್ಲೇನ್ ಮೇಲಿನ ಎಲ್ಲ ಬೆಳ್ಳಿಯನ್ನೂ ಅಗೆದು ತೆಗೆದಿದ್ದರು. ಉಳಿದವು ಬಂಡೆಗಳ ಕೆಳಗೆ ಆಳದಲ್ಲಿ ಹುಗಿದಿದ್ದವು. ಈ ಪಟ್ಟಿ ಸುಪೀರಿಯರ್ ಸರೋವರದಲ್ಲಿ ನೆಲದ ಕೆಳಗೆ ಬಹುದೂರದವರೆಗೆ ಹೋಗಿತ್ತು.

ನ್ಯೂಯಾರ್ಕಿನ ಕೆಲ ವ್ಯಾಪಾರಿಗಳು ತಕ್ಷಣ ಕಾರ್ಯ ಆರಂಭಿಸಲು 15 ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದರು. ವಿಲಿಯಮ್ ಫ್ರೂ ಎಂಬ ವಿಖ್ಯಾತ ಗಣಿ ಇಂಜಿನೀಯರನಿಗೆ ಬೆಳ್ಳಿ ತೆಗೆಯುವ ಕೆಲಸವನ್ನು ವಹಿಸಿಕೊಡಲಾಯಿತು. ಫ್ರೂ ಥಂಡರ್ ಬೇಗೆ ಹೋದ. ಆ ವೇಳೆ ಅಲ್ಲಿ ಭಯಂಕರ ಬಿರುಗಾಳಿ ಬೀಸುತ್ತಿತ್ತು. ಆ ಪುಟ್ಟ ದ್ವೀಪ ನೀರೊಳಗೆ ಮುಳುಗಿಹೋಗಿತ್ತು. ಸರೋವರದ ನೀರು ಬಿರುಗಾಳಿಯ ವೇಳೆ ದ್ವೀಪದೊಳಗೆ ನುಗ್ಗದಂತೆ ತಡೆಯದಿದ್ದರೆ ಬೆಳ್ಳಿ ತೆಗೆಯಲು ಸಾಧ್ಯವಾಗದು ಎಂಬುದನ್ನು ಫ್ರೂ ಮನಗಂಡ.

ಆತ ತನ್ನ ಯೋಜನೆಯನ್ನು ಕಂಪೆನಿಯ ಎದುರಿಗಿಟ್ಟ. ಆತ ದ್ವೀಪದ ಸುತ್ತಲೂ ಸ್ವಲ್ಪ ಸ್ವಲ್ಪ ದೂರದಲ್ಲಿ ಎರಡು ಗೋಳಾಕೃತಿಯ ಅಣೆಕಟ್ಟು ಕಟ್ಟಲು ನಿರ್ಧರಿಸಿದ. ಹೊರಗಿನ ಅಣೆಕಟ್ಟು ನೀರಿನ ತೀವ್ರತೆಯನ್ನು ಕಡಿಮೆ ಮಾಡಿ ಅದು ಒಳಗೆ ಬರದಂತೆ ತಡೆಯುವುದು. ಆ ಬಳಿಕ ಪಂಪುಗಳ ನೆರವಿನಿಂದ ಎರಡೂ ಅಣೆಕಟ್ಟುಗಳ ನಡುವಿನ ನೀರನ್ನು ಹೊರಗಿನ ಸರೋವರಕ್ಕೆ ಬಿಡಲಾಗುವುದು. ನೀರು ಹೋದ ನಂತರ ಬಂಡೆಗಳಲ್ಲಿ ಹಲವಾರು ಬಾವಿಗಳನ್ನು ತೋಡಲಾಗುವುದು. ಮತ್ತೆ ಬೆಳ್ಳಿ ತೆಗೆಯುವ ಕಾರ್ಯ ಆರಂಭ.

ಫ್ರೂನ ಯೋಜನೆ ಸ್ವೀಕೃತವಾಯಿತು.



ದ್ವೀಪಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಕೆಲಸಗಾರರು ಬಂದರು. ಗಣಿಗಳಲ್ಲಿ ಕೆಲಸಕ್ಕೆ ಬರುವ ಮರದ ದಿಮ್ಮಿಗಳನ್ನು ತರಿಸಲಾಯಿತು. ವಸಂತಮಾಸ ಬಂತು. ಸಾಮಾನ್ಯವಾಗಿ ಆ ವೇಳೆ ಸರೋವರ ದಲ್ಲಿ ಬಿರುಗಾಳಿಗಳು ಬೀಸುವುದಿಲ್ಲ. ಫ್ಲೂ ಹೊಸ ಅಣೆಕಟ್ಟು ಕಟ್ಟತೊಡಗಿದ. ದೊಡ್ಡ ದೊಡ್ಡ ದಿಮ್ಮಿಗಳನ್ನು ಹಲಗೆಗಳಿಗೆ ಬಿಗಿದು ಅಣೆಕಟ್ಟು ತಯಾರಿಸಿದ. ಅಣೆಕಟ್ಟು 13 ಅಡಿ ಎತ್ತರವಾಗಿತ್ತು. ಆ ಬಳಿಕ ಒಳಗಿನ ಗೋಳಾಕೃ-ತಿಯ ಅಣೆಕಟ್ಟನ್ನು ನಿರ್ಮಿಸಿದ.



1871ರ ಅಗಸ್ಟ ತಿಂಗಳಿನಲ್ಲಿ ಈ ಎರಡೂ ಅಣೆಕಟ್ಟುಗಳು ತಯಾರಾದವು. ನೀರನ್ನು ಹೊರತಳ್ಳುವ ಪಂಪುಗಳು ಕಾರ್ಯಾರಂಭ ಮಾಡಿದವು. ಮೆಲ್ಲಮೆಲ್ಲನೆ ನೀರು ಕಡಿಮೆಯಾಯಿತು. ದ್ವೀಪದ ಬಲು ದೊಡ್ಡ ಭಾಗದ ನೀರು ಪೂರ್ತಿ ಬರಿದಾಯಿತು. ಕರಿಬಂಡೆಗಳು ಬಿಸಿಲಿನಲ್ಲಿ ಹೊಳೆಯತೊಡಗಿದವು. ಹಲವಾರು ಬಾವಿಗಳನ್ನು ತೋಡಿ ಕಚ್ಚಾ ಬೆಳ್ಳಿಯನ್ನು ಹೊರತೆಗೆಯುವ ಕೆಲಸ ಆರಂಭಿಸಿದರು.

ವಸಂತ ಮಾಸದಲ್ಲಿ ಸರೋವರದ ನೀರು ಶಾಂತವಾಗಿತ್ತು. ಆದರೆ ಸಪ್ಟಂಬರ್ ಬರುತ್ತಲೇ ಸರೋವರದ ಮೇಲೆ ಬಿರುಗಾಳಿ ಬೀಸತೊಡಗಿತು. ದಿನದಿನಕ್ಕೆ ಅದರ ತೀವ್ರತೆ ಹೆಚ್ಚುತ್ತಿತ್ತು. ಬೆಳ್ಳಿ ತೆಗೆಯುವ ಕೆಲಸವೇನೋ ಮುಂದುವರಿಯುತ್ತಿತ್ತು. ಆದರೆ ವಿಲಿಯಮ್ ಫ್ಲೂ ಮಾತ್ರ, ಅಣೆಕಟ್ಟುಗಳು ಬಿರುಗಾಳಿಯ ಆಘಾತವನ್ನು ತಡೆಯಬಲ್ಲವೆ? ಎಂದು ಚಿಂತೆಗೀಡಾದ. ಬಿರುಗಾಳಿಯ ರಭಸ ಹೆಚ್ಚಿದಾಗ ಕೆಲಸಗಾರರು ದ್ವೀಪದಿಂದ ಬೆಳ್ಳಿ ತೆಗೆಯುವುದನ್ನು ಅರ್ಧಕ್ಕೇ ನಿಲ್ಲಿಸಿ ಹೊರಟುಹೋದರು.

ಒಂದು ತೂಫಾನಿನ ರಾತ್ರಿ. ಭಯಂಕರ ಮಳೆ ಸುರಿಯುತ್ತಿತ್ತು. ಸರೋವರದಲ್ಲಿ ಎದ್ದ ಭೀಕರ ಅಲೆಗಳು ಅಣೆಕಟ್ಟುಗಳನ್ನು ದಾಟಿ ಒಳ ನುಗ್ಗಿದವು. ನೀರಿನ ಭಾರೀ ಒತ್ತಡದಿಂದ ಎರಡೂ ಅಣೆಕಟ್ಟುಗಳು ಒಡೆದು ಹೋದವು. ಗಣಿಗಳಲ್ಲಿ ನೀರು ತುಂಬಿತು. ದ್ವೀಪ ನೀರಲ್ಲಿ ಮುಳುಗಿ ಹೋಯಿತು. ಎಲ್ಲ ಪರಿಶ್ರಮವೂ ವ್ಯರ್ಥವಾಯಿತು.

ಇಷ್ಟಾದರೂ ಫ್ಲೂ ನಿರಾಶನಾಗಲಿಲ್ಲ. ಈ ಸಲ ಆತ ಹೊಸದೊಂದು ಯೋಜನೆಯನ್ನು ತಯಾರಿಸಿದ. ಆ ಪ್ರಕಾರ 18 ಇಂಚು ದಪ್ಪವಾದ ಎರಡು ಗೋಳಾಕಾರದ ಅಣೆಕಟ್ಟುಗಳನ್ನು 23 ಅಡಿ ದೂರದಲ್ಲಿ ನಿರ್ಮಿಸಿ ಅವುಗಳ ನಡುವಿನ ಖಾಲಿ ಜಾಗದಲ್ಲಿ ಮಣ್ಣು ಗಟ್ಟಿ ಕಲ್ಲುಗಳನ್ನು ತುಂಬಲಾಯಿತು. ಆ ಬಳಿಕ ಒಳಗೆ ಮೂರನೇ ಅಣೆಕಟ್ಟನ್ನು ನಿರ್ಮಿಸಲಾಯಿತು. ಈ ಹೊಸ

ಅಣೆಕಟ್ಟುಗಳು ಸುಪೀರಿಯರ್ ಸರೋವರದ ಅತಿ ಭೀಕರ ತೂಫಾನನ್ನೂ ಎದುರಿಸಬಲ್ಲವೆಂದು ಫ಼ೂ ನಂಬಿದ್ದ.

ಗಣಿಗಳಲ್ಲಿ ತುಂಬಿದ್ದ ನೀರನ್ನು ಮತ್ತೆ ಪಂಪುಗಳ ನೆರವಿನಿಂದ ಹೊರಗೆಸೆಯಲಾಯಿತು. ಬೆಳ್ಳಿ ತೆಗೆಯುವ ಕೆಲಸ ಮತ್ತೆ ಆರಂಭಗೊಂಡಿತು. ಗಣಿಗಳು ಬಂಡೆಗಳಲ್ಲಿ ಆಳವಾಗುತ್ತ ಹೋದವು. ಹೊರಬರುವ ಬೆಳ್ಳಿಯ ಪ್ರಮಾಣವೂ ಹೆಚ್ಚಿತು.

ಕೆಲ ವಾರಗಳವರೆಗೆ ಕೆಲಸ ಸರಿಯಾಗಿಯೇ ಸಾಗಿತು. ಆದರೆ ಮತ್ತೆ ತೂಫಾನು ಬಂತು. ಹಿಂದಿನ ಸಲದ ಹಾಗೆ ಈಗಾಗುವುದಿಲ್ಲ ಎಂದು ಫ಼ೂ ಭಾವಿಸಿದ. ಆದರೆ ಬಿರುಗಾಳಿಯ ಭೀಕರತೆ ಹೆಚ್ಚುತ್ತ ಹೋಯಿತು. ಒಂದು ದಿನ ಹೊರಗಿನ ಎರಡೂ ಅಣೆಕಟ್ಟುಗಳು ಒಡೆದುಹೋದವು. ಗಣಿಗಳಲ್ಲಿ ಮತ್ತೆ ನೀರು ತುಂಬಿತು. ಮರದ ದಿಮ್ಮಿಗಳು ಹುಲ್ಲುಕಡ್ಡಿಗಳಂತೆ ನೀರಲ್ಲಿ ತೇಲತೊಡಗಿದವು.

ಕಂಪೆನಿಗೆ ಬಹಳಷ್ಟು ನಷ್ಟವಾಯಿತು. ಇನ್ನು ಕೆಲಸ ಮುಂದುವರಿಸಲು ತಮಗೆ ಸಾಧ್ಯವಿಲ್ಲವೆಂದು ಕಂಪನಿಯ ನಿರ್ದೇಶಕರು ಘೋಷಿಸಿದ. ಆದರೆ ಫ಼ೂ ಈಗಲೂ ನಿರಾಶನಾಗಿರಲಿಲ್ಲ. ಆ ದ್ವೀಪದಲ್ಲಿದ್ದ ಅಪಾರ ಬೆಳ್ಳಿಯ ಸಂಗ್ರಹದಿಂದ ಇಂಥ ನೂರು ಹಾನಿಗಳನ್ನು ಅನುಭವಿಸಿಯೂ ಕಂಪೆನಿಯ ಪ್ರತಿಯೊಬ್ಬ ನಿರ್ದೇಶಕ ಶ್ರೀಮಂತನೆನಿಸಬಲ್ಲ - ಎಂದು ಆತ ತಿಳಿದಿದ್ದ. ತನಗೆ ಇನ್ನೊಂದು ಅವಕಾಶ ಕೊಡುವಂತೆ ಆತ ನಿರ್ದೇಶಕರಿಗೆ ದುಂಬಾಲು ಬಿದ್ದ. ಕಟ್ಟಕಡೆಗೆ ಅವರು ಒಪ್ಪಲೇಬೇಕಾಯಿತು.

ವಿಲಿಯಮ್ ಫ಼ೂ ಈಗ ಮತ್ತೊಂದು ಹೊಸ ಯೋಜನೆ ತಯಾರಿಸಿದ. ಪಂಪುಗಳ ನೆರವಿನಿಂದ ಗಣಿಗಳಲ್ಲಿ ತುಂಬಿದ ನೀರನ್ನು ಮತ್ತೆ ಹೊರ ಹಾಕಲಾಯಿತು.

ತೂಫಾನು ಬಂತು. ದೊಡ್ಡ ದೊಡ್ಡ ಅಲೆಗಳು ಹೊರ ಅಣೆಕಟ್ಟುಗಳಿಗೆ ಅಪ್ಪಳಿಸತೊಡಗಿದವು. ಆದರೆ ಈ ಬಾರಿ ಅಣೆಕಟ್ಟು ತೂಫಾನಿನ ಪ್ರಚಂಡ ಆಘಾತವನ್ನು ಎದುರಿಸಿ ನಿಂತಿತು. ನೀರು ಅಣೆಕಟ್ಟನ್ನು ದಾಟಿ ಒಳಬರಲಿಲ್ಲ. ಈಗ ನೆಲದೊಳಗೆ ಅಡಗಿದ ಬೆಳ್ಳಿಯನ್ನು ಹೊರತೆಗೆಯಲು ಸಾಧ್ಯವಿತ್ತು.

---

ಸುಮಾರು ಮೂರು ದಶಕಗಳ ಹಿಂದಿನ ಘಟನೆ. "ಮಾರಾಟ ಪ್ರತಿನಿಧಿಗಳು ಬೇಕಾಗಿದ್ದಾರೆ. ಪೂರ್ವಾನುಭವ ಅನಗತ್ಯ, ಕೂಡಲೇ ಸಂಪರ್ಕಿಸಿ ಬಾಕ್ಸ್ ನಂ... ಟೈಮ್ಸ್ ಆಫ್ ಇಂಡಿಯಾ, ಮುಂಬೈ-1," ಎಂದು ಒಂದು ಜಾಹೀರಾತು. ಅನುಭವ ಇಲ್ಲದವರಿಗೊಂದು ಅವಕಾಶ ನೀಡುವ ಸಂಸ್ಥೆ! ನಾನೂ ಅರ್ಜಿ ಕಳುಹಿಸಿದೆ. ಜಾಹೀರಾತನ್ನು ಪೂರ್ತಿ ಮರೆಯುವ ಮೊದಲು ಎರಡು ಪೈಸೆಯ ಲೋಕಲ್ ಡೆಲಿವರಿ ಕಾರ್ಡಿನಲ್ಲಿ ಉತ್ತರ ಬಂತು:

**ಮಹನೀಯರೆ,**

**ನಿಮ್ಮನ್ನು ಕೆಲಸಕ್ಕೆ ಆರಿಸಿದ್ದೇವೆ, ನೀವು ವೇಳೆ ಹಾಳು ಮಾಡದೆ ಎರಡು ರೂಪಾಯಿ ಕರೆನ್ಸಿ ನೋಟನ್ನು ಲಕೋಟೆಯಲ್ಲಿಟ್ಟು ಬಾಕ್ಸ್ ನಂ... 'ಟೈಮ್ಸ್ ಆಫ್ ಇಂಡಿಯಾ', ಮುಂಬೈ-1ಕ್ಕೆ ಕಳುಹಿಸಿ; ಅಂದರೆ ನಾವು ನಿಮಗೆ ನೇಮಕದ ಪತ್ರವನ್ನು ಕಳುಹಿಸುವೆವು.**

**- ತಮ್ಮ ವಿಶ್ವಾಸಿ**

ಎರಡು ರೂಪಾಯಿಯ ಕರೆನ್ಸಿ ನೋಟಿಗೆ ಕೆಲಸ! ಅನುಭವ ಮೊದಲೇ ಬೇಡ! ಮುಖದರ್ಶನ, ವಿದ್ಯಾರ್ಹತೆಯ ಪರಿಶೀಲನೆ ಅಗತ್ಯವಿಲ್ಲ! ಕೂಡಲೇ ಬೈಕುಳಾದಿಂದ ಬೋರಿ ಬಂದರಿಗೆ ಹತ್ತು ಪೈಸೆಯ ಟ್ರಾಮ್ ಪ್ರಯಾಣಗೈದೆ. ಟೈಮ್ಸ್ ಕಛೇರಿಯ ಜಾಹೀರಾತು ವಿಭಾಗದ ಗುಮಾಸ್ತನನ್ನು ಕಂಡು, ನನಗೆ ಬಂದ ಕಾರ್ಡನ್ನು ತೋರಿಸಿ, ಜಾಹೀರಾತುದಾರನ ವಿಳಾಸ ಕೇಳಿದೆ. ಆತ ದೊಡ್ಡ ಪುಸ್ತಕದ ಹಾಳೆಗಳನ್ನು ಮಗುಚಿ ಹಾಕುವಾಗ ನಾನೂ ವಿಳಾಸವನ್ನು ಗಮನಿಸಿದೆ. ಆದರೆ ಗುಮಾಸ್ತ ವಿಳಾಸ

ಹೊಸ ಅಣೆಕಟ್ಟು ಕಟ್ಟಿದ ಐದು ವಾರಗಳಲ್ಲೇ 20 ಲಕ್ಷ ರೂಪಾಯಿ ಬೆಲೆ ಬರುವ ಬೆಳ್ಳಿಯನ್ನು ಹೊರದೆಗೆಯಲಾಯಿತು. ಒಂದು ವರ್ಷದೊಳಗೆ ಒಟ್ಟು 3 ಕೋಟಿ 40 ಲಕ್ಷ ರೂಪಾಯಿ ಬೆಲೆಯ ಬೆಳ್ಳಿ ದೊರೆಯಿತು.

ಕಂಪೆನಿಯ ಷೇರಿನ ಬೆಲೆ 175 ರೂಪಾಯಿಯಿಂದ 700ಕ್ಕೇರಿತು. ಮತ್ತೆ 7000 ರೂಪಾಯಿ ತನಕ ತಲುಪಿತು. ಕಟ್ಟಕಡೆಗೆ ಮಾರುಕಟ್ಟೆಯಲ್ಲಿ ಅದು 1,7,5000 ರೂಪಾಯಿಗೆ ಮುಟ್ಟಿತು.

ಹನ್ನೆರಡು ವರ್ಷಗಳುರುಳಿದವು. ವಿಲಿಯಮ್ ಫೂನ ಅಣೆಕಟ್ಟುಗಳು ಸುಪೀರಿಯರ್ ಸರೋವರದ ಪ್ರಚಂಡ ತೂಫಾನುಗಳನ್ನೆದುರಿಸಿಯೂ ಸ್ಥಿರವಾಗಿ ನಿಂತವು. ಗಣಿಯಿಂದ ಅದುವರೆಗೆ 17 ಕೋಟಿ ರೂಪಾಯಿ ಬೆಲೆಯ ಬೆಳ್ಳಿಯನ್ನು ಹೊರದೆಗೆಯಲಾಗಿತ್ತು.

1884ರ ನವೆಂಬರ್ ತಿಂಗಳು. ಭಯಂಕರ ಚಳಿ ಆರಂಭವಾಯಿತು. ಈ ಬಾರಿ ಚಳಿಗಾಲಕ್ಕಾಗಿ ಕಲ್ಲಿದ್ದಲಿನ ಸರಬರಾಜು ಇದು ತನಕವೂ ಬಂದಿರಲಿಲ್ಲ. ಫೂ ಚಿಂತಿತನಾದ. ಪ್ರತಿವರ್ಷ ಚಳಿಗಾಲ ಆರಂಭವಾಗುವುದಕ್ಕೆ ಮೊದಲೇ ಕಲ್ಲಿದ್ದಲು ಬರುತ್ತಿತ್ತು. ಚಳಿಯಲ್ಲಿ ಸುಪೀರಿಯರ್ ಸರೋವರ ಗಡ್ಡೆಗಟ್ಟುವುದರಿಂದ ಸರಕು ಸಾಗಾಟ ಸಾಧ್ಯವಿರಲಿಲ್ಲ.

ನೀರನ್ನು ಹೊರತಳ್ಳುವ ಪಂಪು ನಡೆಸಲು ಕಲ್ಲಿದ್ದಲು ಅತ್ಯಗತ್ಯ. ಬೆಳ್ಳಿಯ ಗಣಿಗಳು ಬಂಡೆಗಳೊಳಗೆ ಆಳದತನಕ ಹೋಗಿದ್ದವು. ಸರೋವರದ ನೀರು ಅದರೊಳಗೆ ಒಸರುತ್ತಿದ್ದುದರಿಂದ ಅದನ್ನು ಹೊರಹಾಕಲು ಪಂಪು ಬೇಕಿತ್ತು.

ಈಗ ಬರೆ 48 ಗಂಟೆಗಳವರೆಗೆ ಕೆಲಸ ಮಾಡಲು ಕಲ್ಲಿದ್ದಲು ಉಳಿದಿತ್ತು. ವಿಲಿಯಮ್ ಫೂನ ಮುಖದ ಮೇಲೆ ಚಿಂತೆಯ ರೇಖೆಗಳು ಮೂಡಿಬಂದವು.

''ಕಲ್ಲಿದ್ದಲು ಮುಗಿದು ಹೋಯಿತು. ಈಗೇನು ಮಾಡಲಿ?'' ಫೈರ್‌ಮನ್ ಕೇಳಿದ.

''ಗಣಿಯ ಹತ್ತಿರದಲ್ಲಿರುವ ಗುಡಿಸಲುಗಳನ್ನು ಕಿತ್ತು ......'' ಗಂಭೀರ ಸ್ವರದಲ್ಲಿ ನುಡಿದ ಫೂ.

ಆ ಕಟ್ಟಿಗೆಗಳೂ ಬಹುಬೇಗನೆ ಮುಗಿದು ಹೋದವು. ನೌಕೆಗಳನ್ನೂ ಕ್ಯಾಬಿನ್ನಗಳನ್ನೂ ಸುಡುವಂತೆ ಫೂ ಆಜ್ಞಾಪಿಸಿದ. ಕಟ್ಟಕಡೆಗೆ

---

ವನ್ನು ಕೊಡಲು ನಿರಾಕರಿಸಿದ.

ನಾನು ಅಲ್ಲಿಂದ ಫಿರೋಜ್ ಷಾ ಮೆಹತಾ ರಸ್ತೆಯಲ್ಲಿರುವ ಲಕ್ಷ್ಮಿ ಬಿಲ್ಡಿಂಗ್ ಹತ್ತಿದೆ. ಇಡೀ ಕಟ್ಟಡದ ಉದ್ದಗಲ ಎತ್ತರದಲ್ಲಿ ಜಾಲಾಡಿದರೂ ರಾಯಲ್ ಕೆಮಿಕಲ್ಸ್ ಕಂಪನಿಯ ಕಛೇರಿ ಮಾತ್ರ ಸಿಗಲಿಲ್ಲ. ಆದರೂ ನಿರಾಶನಾಗದೆ ದೂರವಾಣಿಯ ಡೈರೆಕ್ಟರಿಯಲ್ಲಾದರೂ ವಿಳಾಸ ದೊರೆಯಬಹುದೆ? ಎಂದು ಡೈರೆಕ್ಟರಿಯಲ್ಲಿ ಹುಡುಕಿದೆ. ಶ್ರಮ ವ್ಯರ್ಥವಾಯಿತು. ಅನಂತರ, ಇವರಿಗೆ ಬುದ್ಧಿ ಕಲಿಸಲೆಂದು ಪೋಲೀಸು ಡಿಪಾರ್ಟಮೆಂಟಿಗೆ ವರದಿ ಮಾಡಿದೆ.

ಒಂದು ತಿಂಗಳ ನಂತರ ಸಿ.ಐ.ಡಿ. ಕಛೇರಿಯಿಂದ ಬುಲಾವ್ ಬಂತು. ಯಾಕಿರಬಹುದು? ಎಂದು ಸ್ವಲ್ಪ ಯೋಚಿಸಿ, ಧೈರ್ಯದಿಂದ ಹೋದೆ, ಸಿ.ಐ.ಡಿ. ಇನ್ಸ್‌ಪೆಕ್ಟರ್ ನನ್ನಿಂದ ಹೇಳಿಕೆ ಪಡೆದು, ಹೊರಡುವಾಗ, ಘಟಿಂಗರು ಪರಾರಿ ಆಗಿದ್ದಾರೆಂದೂ ಹಿಡಿದಾಕ್ಷಣ ನನಗೆ ಹೇಳಿ ಕಳುಹಿಸುವುದಾಗಿಯೂ' ಹೇಳಿದರು.

ಈಗಿನ ಯುವಕರು ನೌಕರಿಗಾಗಿ ಸಾವಿರಾರು ರೂಪಾಯಿಗಳನ್ನು ಕಳೆದುಕೊಳ್ಳಲು ತುದಿಗಾಲಲ್ಲಿ ನಿಂತಿರುವಾಗ, ಮೂವತ್ತು ವರ್ಷಗಳ ಹಿಂದೆ, ಎರಡು ರೂಪಾಯಿಗಾಗಿ ಮೋಸ ಹೋಗಲು ಇಷ್ಟಪಡಲಿಲ್ಲವಲ್ಲ, ಎಂದು ಸಂತೋಷವಾಗುತ್ತದೆ.

ಜೆ.ಎಲ್.ಬರ್ಬೋಜ

ಬಾಯ್ಲರ್ ಹೌಸಿನ ಕಟ್ಟಿಗೆಗಳನ್ನು ಸುಡಲಾಯಿತು. ಆದರೆ ಕಲ್ಲಿದ್ದಲನ್ನು ಹೊತ್ತು ತರುವ ಹಡುಗುಗಳು ಬರಲೇ ಇಲ್ಲ. ಅವು 150 ಮೈಲು ದೂರ ದಕ್ಷಿಣದಲ್ಲಿ ಹಿಮದೊಳಗೆ ಹುದುಗಿ ಹೋಗಿದ್ದವೆಂಬುದನ್ನು ಪಾಪ ಆತ ಹೇಗೆ ತಾನೆ ಊಹಿಸಬಲ್ಲ?

ಬಾಯ್ಲರುಗಳ ಬೆಂಕಿ ಮೆಲ್ಲಮೆಲ್ಲನೆ ನಂದಿ ಹೋಯಿತು. 13 ವರ್ಷಗಳಲ್ಲಿ ಮೊದಲ ಬಾರಿ ಪಂಪುಗಳು ಸ್ತಬ್ಧವಾದವು. ಎಲ್ಲೆಲ್ಲೂ ಸ್ಮಶಾನ ಮೌನ ಆವರಿಸಿತು. ಗಣಿಗಳಲ್ಲಿ ನೀರು ಜೋರಾಗಿ ನುಗ್ಗತೊಡಗಿತು. ಆದರೀಗ ಫೂ ನಿರುಪಾಯನಾಗಿದ್ದ.

ಫೂ ಇನ್ನೊಂದು ಅವಕಾಶ ಕೊಡುವಂತೆ ಕಂಪನಿಯ ನಿರ್ದೇಶಕರನ್ನು ಕೇಳಿಕೊಂಡ. ಬೆಳ್ಳಿಯ ಪಟ್ಟಿ ಸುಪೀರಿಯರ್ ಸರೋವರದಲ್ಲಿ ಬಹಳಷ್ಟು ಆಳದವರೆಗೂ ಚಾಚಿದೆಯೆಂದೂ ಗಣಿಯ ಮಾಡಿಗೆ ಆಸರೆ ನೀಡಲು ಬಳಸಲಾದ ಕಂಬಗಳೂ ಬೆಳ್ಳಿಯವೆಂದೂ ಆತ ಹೇಳಿದ. ಆದರೆ ಅಲ್ಲಿಂದ ಬೆಳ್ಳಿಯನ್ನು ತೆಗೆಯುವುದು ಗಂಡಾಂತರಕರವೆಂದು ಕಂಪನಿಯ ನಿರ್ದೇಶಕರು ಭಾವಿಸಿದರು. ಅಲ್ಲದೆ ಆ ವೇಳೆಗೆ ಮಾರುಕಟ್ಟೆಯಲ್ಲಿ ಬೆಳ್ಳಿಯ ಬೆಲೆಯೂ ಬಹಳಷ್ಟು ಕುಸಿದಿತ್ತು. ಹೀಗಾಗಿ ಫೂನ ಬೇಡಿಕೆಯನ್ನು ನಿರಾಕರಿಸಲಾಯಿತು.

ಗಣಿ ಮುಚ್ಚಿತು. ಅದರಲ್ಲಿ ನೀರು ಏರುತ್ತ ಹೋಯಿತು. ಒಂದು ಪ್ರಚಂಡ ತೂಫಾನು ದ್ವೀಪದ ಹೊರ ಅಣೆಕಟ್ಟನ್ನು ಪೂರ್ತಿಯಾಗಿ ನಾಶಪಡಿಸಿತು. ಈಗ ಅದರ ಮೇಲ್ವಿಚಾರಣೆಗೆ ಯಾರೂ ಇರಲಿಲ್ಲ. ವಿಶಾಲ ಅಲೆಗಳು ದ್ವೀಪವನ್ನು ಮತ್ತೆ ಮುಚ್ಚಿ ಹಾಕಿದವು.

1920ರಲ್ಲಿ ಹೊಸ ಕಂಪನಿಯೊಂದು ಮರಳಿ ಗಣಿ ತೋಡಲು ಪ್ರಯತ್ನಿಸಿತು. ಆದರೆ ಅಲೆಗಳನ್ನು ತಡೆಯುವ ಯಾವ ಉಪಾಯವೂ ಅದಕ್ಕೆ ಹೊಳೆಯಲಿಲ್ಲ. ಹೀಗಾಗಿ ಆ ಪ್ರಯತ್ನವನ್ನು ಅಷ್ಟಕ್ಕೆ ನಿಲ್ಲಿಸಲಾಯಿತು.

ನೀರಿನಿಂದ ತುಂಬಿದ ಬೆಳ್ಳಿಯ ಆ ಗಣಿ ಈಗಲೂ ಆ ದ್ವೀಪದಲ್ಲಿದೆ. ಆ ಗಣಿಯಲ್ಲಿ ಅದೆಷ್ಟು ಬೆಳ್ಳಿ ಹುದುಗಿದೆಯೆಂಬುದು ಯಾರಿಗೆ ಗೊತ್ತು? ●

**('ಕಾದಂಬಿನಿ'ಯ ಕೃಪೆಯಿಂದ)**

* * * * * * * * * *

*ದಿನವೂ ಕೆಟ್ಟ ಮುಖದಿಂದ ಮನೆಗೆ ಮರಳುತ್ತಿದ್ದ ಸಣ್ಣ ಪತ್ರಿಕೆಯೊಂದರ ಸಂಪಾದಕ ಮಹಾಶಯ ಆ ದಿನ ಮುಖದಗಲ ನಗೆಯರಳಿಸಿಕೊಂಡು ಬಂದವನೆ ಹೆಂಡತಿಗೆ ಹೇಳಿದ,*

*"ತುಂಬಾ ಒಳ್ಳೆ ಸುದ್ದಿ ಕಣೆ."*

*"ಐದು ವರ್ಷಗಳಿಂದ ಚಂದಾ ಕೊಡದೇ ಇದ್ದ ಚಂದ್ರೇಗೌಡರು ಚಂದಾ ಹಣವನ್ನು ತಂದು ಕೊಟ್ಟಿರಬೇಕು, ಅಲ್ವೆ?" ತಟ್ಟನೆ ಕೇಳಿದಳು ಗಂಡನ ನಾಡಿಮಿಡಿತವನ್ನರಿತ ಹೆಂಡತಿ.*

*"ಇಷ್ಟೇ ನಿನ್ನ ಬುದ್ಧಿ...." ಎಂದ ಸಂಪಾದಕ ಮಹಾಶಯರು ಇನ್ನಷ್ಟು ಗೆಲುವಿನಿಂದ, "ಇವತ್ತು ಬಂದವ್ರೆ, 'ಇನ್ನು ಮೇಲೆ ಪೇಪರ್ ಕಳಿಸ್ಬೇಡಿ' ಅಂತಂದ್ರು. ಒಂದು ಪೇಪರಾದ್ರೂ ಉಳೀತಲ್ಲ.." ಎಂದು ಖೊಖ್ಖೊಖ್ ನಕ್ಕರು.*

* * * * * * * * * *

*ಅನಾಥ ಪ್ರಾಣಿ ರಕ್ಷಣಾಲಯದಲ್ಲೊಂದು ಕತ್ತೆ ಸತ್ತು ಬಿದ್ದಿರುವುದು ಗೊತ್ತಾದಾಗ ಅದರ ಉಸ್ತುವಾರಿಗಿದ್ದಾತ ಗಾಬರಿಯಾಗಿ ತನ್ನ ಮೇಲಧಿಕಾರಿಯ ಬಳಿ ಬಂದು ಸುದ್ದಿ ತಿಳಿಸಿ "ಈಗೇನು ಮಾಡಲಿ ಸರ್?" ಎಂದು ಕೇಳಿದ.*

*"ಇನ್ನೇನು ಮಾಡುವುದು? ನೀನು ಉಸ್ತುವಾರಿಗಿರುವಾತ. ಅದರ ಅಂತ್ಯಕ್ರಿಯೆ ಮಾಡಿ ಮುಗಿಸು," ಎಂದ ಮೇಲಧಿಕಾರಿ ವ್ಯಂಗವಾಗಿ.*

*"ಅದು ಸರಿ. ಆದರೆ ಮೊದಲು ಮೃತರ ಸಂಬಂಧಿಕರಿಗೆ ತಿಳಿಸೋಣ ಎನ್ನುವ ನನ್ನ ಕರ್ತವ್ಯಾರ್ಥ ನಿಮ್ಮ ಬಳಿ ಬಂದದ್ದು," ಎಂದವನೇ ದಡಬಡ ನಡೆದುಬಿಟ್ಟ ಆತ*

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. **ಅಣಗು**
   (ಅ) ಇಳಿಮುಖವಾಗು
   (ಆ) ಉಣ್ಣೆ
   (ಇ) ಕೊಳೆ
   (ಈ) ಮುಖವಿಕಾರವಾಗು

2. **ಪ್ರಣತ**
   (ಅ) ಬಾಗಿದ
   (ಆ) ಉಬ್ಬಿದ
   (ಇ) ಸೊಡರು
   (ಈ) ಮೋಡಿಗಾರ

3. **ಹೀನಾಯಪಡು**
   (ಅ) ಶ್ರೇಷ್ಠನಂತೆ ನಟಿಸು
   (ಆ) ತನ್ನ ಬಗ್ಗೆ ಜುಗುಪ್ಸೆ ಹೊಂದು
   (ಇ) ಹೀಗಳೆ
   (ಈ) ಗತಿಗೆಡು

4. **ಅಗಾಧ**
   (ಅ) ಕೊನೆಯಿಲ್ಲದ
   (ಆ) ಮುಳುಗಿ ಹೋದ
   (ಇ) ವಿಶ್ವಾಮಿತ್ರನ ತಂದೆ
   (ಈ) ಅತಿ ಆಳವಾದ

5. **ಪ್ರಸ್ತುತಿ**
   (ಅ) ತಯಾರಾಗುವಿಕೆ
   (ಆ) ಹೊರಡುವುದು
   (ಇ) ಹಬ್ಬಿಕೊಳ್ಳುವಿಕೆ
   (ಈ) ವಿಷಯ ಮಂಡನೆ

6. **ಅನುತ್ಪಾದಕ**
   (ಅ) ಬಂಜೆ
   (ಆ) ಕಿವಿ ಕೇಳಿಸದ
   (ಇ) ಹುಟ್ಟುವಳಿ ಕೊಡದ
   (ಈ) ಅವಿವೇಕದ

7. **ಅನೂಪ**
   (ಅ) ಜವುಗು ಭೂಮಿ
   (ಆ) ಒಪ್ಪುವ
   (ಇ) ಸುಂದರ
   (ಈ) ಕಾಮ

8. **ಕಾದಲ್ಮೆ**
   (ಅ) ಬಿಸಿ
   (ಆ) ಜಗಳ
   (ಇ) ಪ್ರೇಮ
   (ಈ) ಕಿತ್ತು ಬರುವಿಕೆ

9. **ನಿರುಪಮ**
   (ಅ) ಎಲ್ಲರಂಥ
   (ಆ) ಹೋಲಿಕೆ ಇಲ್ಲದ
   (ಇ) ಅಪ್ಪಣೆಯಿಲ್ಲದ
   (ಈ) ಕಥೆ ಹೇಳುವ ರೀತಿ

10. **ಪ್ರಲೋಭನ**
    (ಅ) ಆಸೆಬುರುಕ
    (ಆ) ಆಸೆಗೊಳಪಡಿಸುವಿಕೆ
    (ಇ) ಒಂದು ಪರಿಮಳ ದ್ರವ್ಯ
    (ಈ) ಬೆಳೆಯುವಿಕೆ

11. **ಗಸಣೆ**
    (ಅ) ಹಂದಿಯ ಪಿಕ್ಕೆ
    (ಆ) ಎಣ್ಣೆಯ ತಳದ ಜಿಡ್ಡು ಕಸ
    (ಇ) ಗಾಣದ ಚಕ್ರ
    (ಈ) ಕೋಟಲೆ

12. **ಗರಜಿ**
    (ಅ) ಕ್ರೈಸ್ತ ದೇವಾಲಯ
    (ಆ) ತುರ್ತು ಆವಶ್ಯಕತೆ
    (ಇ) ಬಿಸಿ
    (ಈ) ಸಾರ್ವಜನಿಕ ಛತ್ರ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1. ಅಣಗು**

(ಅ) ಇಳಿಮುಖವಾಗು, ತಗ್ಗು, ಶಾಂತವಾಗು. ಉದಾ: ವಯಸ್ಸಾದರೂ ಆಕಾಂಕ್ಷೆಗಳು ಅಣಗಲಿಲ್ಲ. (ದೇಶ್ಯ)

**2. ಪ್ರಣತ**

(ಅ) ಬಾಗಿದ, ಎರಗಿದ, ನಮಸ್ಕರಿಸಿದ. ಉದಾ: ಪ್ರಣತರಾದ ಭಕ್ತರಿಗೆ ಹರಿ ಒಲಿದ. (ಸಂ. ಪ್ರ= ಹೆಚ್ಚಾಗಿ+ ನತ= ಬಾಗಿದ).

**3. ಹೀನಾಯಪಡು**

(ಅ) ತನ್ನ ಬಗ್ಗೆ ಜುಗುಪ್ಸೆ ಹೊಂದು, ತನ್ನನ್ನು ಕೀಳೆಂದು ಬಗೆದುಕೊಳ್ಳು. ಉದಾ: ಈ ತಪ್ಪಿಗೆ ಹೀನಾಯಪಟ್ಟುಕೊಳ್ಳಬೇಕಾಗಿಲ್ಲ. (ಸಂ. ಹೀನ= ಕೀಳು+ ದೇಶ್ಯ= ಪಡು)

**4. ಅಗಾಧ**

(ಈ) ಆಳವಾದ, ತಳ ಕಾಣದ, ಗುಂಡಿಯಾದ. ಉದಾ: ಅಗಾಧವಾದ ಆತ್ಮವಿಶ್ವಾಸ. (ಸಂ. ಅ= ಇಲ್ಲ + ಗಾಧ= ಮುಳುಗುವಿಕೆ)

**5. ಪ್ರಸ್ತುತಿ**

(ಇ) (ವಿಷಯವನ್ನು) ಮಂಡಿಸುವುದು. ಪ್ರಸ್ತಾಪಿಸುವುದು. ಮುಂದಿಡುವುದು. ಉದಾ: ಇದು ಆಕಾಶವಾಣಿಯ ಪ್ರಸ್ತುತಿ. (ಸಂ. ಪ್ರ= ಹೆಚ್ಚಿನ+ ಸ್ತುತಿ= ಹೊಗಳಿಕೆ)

**6. ಅನುತ್ಪಾದಕ**

(ಇ) ಹಾಕಿದ ಹಣಕ್ಕೆ ತಕ್ಕ ಪ್ರತಿಫಲವಿಲ್ಲದ. (ವಿಶೇಷ:) ಯಾವ ಉಪಯುಕ್ತ ಸರಕನ್ನೂ ಉತ್ಪತ್ತಿ ಮಾಡದ. ಉದಾ: ಅನುತ್ಪಾದಕ ವಿನಿಯೋಗಗಳು ಅತಿಯಾದವು. (ಸಂ. ಅನ್= ಅಲ್ಲ+ ಉತ್ಪಾದಕ= ಉತ್ಪತ್ತಿ ಮಾಡುವ)

**7. ಅನೂಪ**

(ಅ) ಜವುಗು ಭೂಮಿ, ನೀರಿಂದ ಸದಾ ಒದ್ದೆಯಾಗಿರುವ ಪ್ರದೇಶ, ನದೀ ತೀರ. ಉದಾ: ಅನೂಪಬಹುಳವಾದ ಪ್ರಾಂತ. (ಸಂ.)

**8. ಕಾದಲ್ಮೆ**

(ಇ) ಪ್ರೇಮ, ಪ್ರೀತಿ, ನಲ್ಮೆ. ಉದಾ: ಕಾದಲ್ಮೆಯ ಕಾವು ಹೆಚ್ಚಿತು. (ದೇಶ್ಯ- ಕಾದಲ= ಪ್ರೀತಿ+ ಮೆ)

**9. ನಿರುಪಮ**

(ಅ) ಹೋಲಿಕೆ ಇಲ್ಲದ, ಅಸದೃಶ, ಸಮಾನವಾದದ್ದು ಬೇರೊಂದು ಇಲ್ಲದ. ಉದಾ: ನಿರುಪಮ ಗುಣವತಿ. (ಸಂ. ನಿರ್= ಇಲ್ಲ+ ಉಪಮಾ= ಹೋಲಿಕೆ)

**10. ಪ್ರಲೋಭನ**

(ಅ) ಆಸೆಗೆ ಒಳಪಡಿಸುವಿಕೆ, ಆಸೆ ತೋರಿಸುವಿಕೆ. ಉದಾ: ಪ್ರಲೋಭನಗಳಿಗೆ ಮರುಳಾಗದವನು. (ಸಂ. ಪ್ರ= ವಿಶೇಷ+ ಲುಭ್= ಆಸೆಪಡು)

**11. ಗಸಣೆ**

(ಈ) ಕೋಟಲೆ, ಸಂಕಟ, ದುಃಖ, ದುಮ್ಮಾನ, ತೊಂದರೆ. ಉದಾ: ಅಪಾರವಾದ ಗಸಣೆಗೊಳಗಾದ. (ಸಂ. ಘರ್ಷಣೆ)

**12. ಗರಜಿ**

(ಅ) ತುರ್ತು ಅವಶ್ಯಕತೆ, ಅಗತ್ಯ. ಉದಾ: ಗರಜಿ ಬಂದಾಗ ಸಾಲ ಸಿಗುವುದಿಲ್ಲ. (ಪಾರಸೀಕ ಗರಜ್)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ನಿಮ್ಮ ಶಬ್ದಗಳಿಗೆ ಅರ್ಥ ಅರಿತದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

6- 8 ಸರಿಯುತ್ತರ ... ಸಾಧಾರಣ
9-10 " ... ಉತ್ತಮ
11-12 " ... ಅತ್ಯುತ್ತಮ

ಎಸ್. ಜೆ. ಸುಜಾತ

(ಸಾಧಾರ)

# ಮಯೂರ ಸಿಂಹಾಸನ ಹೋದದ್ದೆಲ್ಲಿ?

**1782**ರ ಅಗಸ್ಟ್ ನಾಲ್ಕರಂದು ದಕ್ಷಿಣ ಆಫ್ರಿಕದ ಪೊಂಡೋ ಲ್ಯಾಂಡಿನ ಸಮುದ್ರತೀರದ ಬಳಿ 'ಗ್ರೋಸ್‌ವೆನಾರ್' ಎಂಬ ಹಡಗೊಂದು ಜಲಸಮಾಧಿಗೊಂಡಿತು. ಈ ನೌಕಾಘಾತ ಹೇಗೆ ನಡೆಯಿತೆಂಬುದು ಇಂದಿಗೂ ರಹಸ್ಯಾತ್ಮಕವಾಗಿಯೇ ಇದೆ. ಈ ಘಟನೆ ನಡೆದು ಎರಡು ಶತಮಾನಗಳು ಕಳೆದ ಬಳಿಕವೂ ಅನೇಕ ಪ್ರಶ್ನೆಗಳು ಬಗೆಹರಿಯದೆ ಉಳಿದಿವೆ. ಅವುಗಳ ಪೈಕಿ ಈ ಹಡಗಿನಿಂದ ಬದುಕುಳಿದವರು ಏನಾದರು? ಈ ಹಡಗು ಅಮೂಲ್ಯ ಸಂಪತ್ತನ್ನು ಸಾಗಿಸುತ್ತಿತ್ತೆ? ಎಲ್ಲದಕ್ಕಿಂತ ಮುಖ್ಯವಾದ ಪ್ರಶ್ನೆಯೆಂದರೆ ಈ ಅಮೂಲ್ಯ ಸಂಪತ್ತಿನಲ್ಲಿ ಶಾಹಜಹಾನನ ಮಯೂರ ಸಿಂಹಾಸನವೂ ಸೇರಿತ್ತೆ? ಎನ್ನುವುದೂ ಒಂದು.

1778ರಲ್ಲಿ ಜಾನ್ ಕಾಕ್ಸನ್ ಎಂಬಾತ ಈ ಹಡಗನ್ನು ಕೊಂಡುಕೊಂಡ. 1782ರಲ್ಲಿ ಫ್ರೆಂಚ್ ಹಾಗೂ ಬ್ರಿಟಿಶ್ ನೌಕಾಪಡೆಗಳ ಮಧ್ಯೆ ಯುದ್ಧ ನಡೆದಾಗ 'ಗ್ರೋಸ್‌ವೆನಾರ್' ಸಿಕ್ಕಿಹಾಕಿಕೊಂಡಿತ್ತು. ಅದೇ ವರ್ಷ ಈ ಹಡಗು ಜೂನ್ ವೇಳೆಗೆ ಸಿಂಹಳವನ್ನು ಸುರಕ್ಷಿತವಾಗಿ ತಲುಪಿ, ಅಲ್ಲಿ ಪ್ರಯಾಣಿಕರನ್ನೂ ವ್ಯಾಪಾರದ ಸರಕನ್ನೂ ಬಿಟ್ಟು ಮುಂದೆ ಸಾಗಿತು. ಪ್ರತಿ ಕೂಲ ಹವಾಮಾನವಿದ್ದರೂ ಅಪಾಯದ ಮುನ್ಸೂಚನೆಯೇ ನಿರಲಿಲ್ಲ. ಇದ್ದಕ್ಕಿದ್ದ ಹಾಗೆ ಭಯಂಕರ ಬಿರುಗಾಳಿ ಎದ್ದಿತು. ಹಡಗಿನ ಕಾವಲುಪಡೆಗೆ ವಿಚಿತ್ರವಾದ ಬೆಳಕೊಂದು ಕಾಣಿಸಿಕೊಂಡಿತು. ಇದರಿಂದ ಕ್ಯಾಪ್ಟನ್ನನು ಸಮುದ್ರ ತೀರವು ಬಹುಶಃ 300 ಮೈಲಿಗಳೊಳಗೆ ಇರಬೇಕೆಂದು ಲೆಕ್ಕಹಾಕಿದ. ಕ್ಯಾಪ್ಟನ್ನನ ಈ ತಪ್ಪು ಲೆಕ್ಕಾಚಾರ ಹಡಗಿನ ಗತಿಯನ್ನೇ ಬದಲಿಸಿತು. ಒಂದು ದಿನ ಪೂರ್ತಿ ಮಳೆ, ಬಿರುಗಾಳಿ, ಮಿಂಚು ಹಾಗೂ ಅಲೆಗಳ ಹೊಡೆತಕ್ಕೆ ಸಿಲುಕಿದ ಹಡಗು ಮಾರನೇ ದಿನ ಬಂಡೆಯೊಂದಕ್ಕೆ ಡಿಕ್ಕಿ ಹೊಡೆಯಿತು.

ಸೂರ್ಯೋದಯವಾದಾಗ ಹಡಗು ಆಫ್ರಿಕದ ತೀರ ಪ್ರದೇಶದ ಬಂಡೆ ಸಾಲುಗಳ ಮಧ್ಯೆ ಸಿಕ್ಕಿಹಾಕಿಕೊಂಡಿದ್ದು ಅರಿವಾಯಿತು. ತೀರಕ್ಕೆ ಹಾಗೂ ಹಡಗಿನ ಮಧ್ಯೆ ಸಾಕಷ್ಟು ದೂರವಿತ್ತು. ಅಲೆಗಳು ಬಲವಾಗಿದ್ದವು. ಇಂತಹ ಪರಿಸ್ಥಿತಿಯಲ್ಲಿದ್ದುದರಿಂದ ದೋಣಿಗಳನ್ನು ಸಮುದ್ರಕ್ಕಿಳಿಸುವುದು ಅಪಾಯಕರವಾಗಿತ್ತು. [illegible] ತೀರಕ್ಕೆ [illegible] ಮುಳುಗಿದ [illegible] ಇದು [illegible] ಸಮುದ್ರಕ್ಕೆ [illegible]

ಚೂರುಚೂರಾಗಿ ಒಬ್ಬನೇ ಬದುಕುಳಿದ.

ಹಡಗಿನಲ್ಲಿ ಗೊಂದಲವುಂಟಾಯಿತು. ನಾವಿಕರು ಹಡಗಿನಲ್ಲಿದ್ದ ವಸ್ತುಗಳನ್ನು ಕೊಳ್ಳೆ ಹೊಡೆದರು. ಹೆಂಗಸರು ಹಾಗೂ ಮಕ್ಕಳು ಭಯದಿಂದ ಚೀರಲಾರಂಭಿಸಿದರು ಅಷ್ಟರಲ್ಲಿ ಬಲವಾದ ಅಲೆಯೊಂದು ಹಡಗಿಗೆ ಅಪ್ಪಳಿಸಿ, ಅದನ್ನು ಸಮುದ್ರತೀರಕ್ಕೆ ತಳ್ಳಿತು. ಒಳಗಿದ್ದ 123 ಪ್ರಯಾಣಿಕರೆಲ್ಲ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಪಾರಾದರು. ಹಡಗಿನ ಈ ದುರ್ವಿಧಿಯನ್ನು ನೋಡುತ್ತಿದ್ದ ಸ್ಥಳಿಕರು ಹಡಗಿನಲ್ಲಿದ್ದವರಿಗೆ ಸಹಾಯ ಮಾಡುವುದರ ಬದಲು ಇಡೀ ಹಡಗನ್ನು ಕೊಳ್ಳೆ ಹೊಡೆದರು.

ಆಹಾರದ ಕೊರತೆ, ಸ್ಥಳಿಕರ ಬೆದರಿಕೆಗಳಿಂದ ಕಂಗಾಲಾಗಿ, ಬದುಕುಳಿದವರು ಅಲ್ಲಿಂದ ಹದಿನಾರು ಮೈಲು ದೂರದಲ್ಲಿದ್ದ 'ವೈಟ್ ಸೆಟಲ್‌ಮೆಂಟ್' ಪ್ರಾಂತ್ಯಕ್ಕೆ ಹೋಗಲು ನಿರ್ಧರಿಸಿದರು. ಆಗ ಅವರು ಮೂರು ಗುಂಪುಗಳಾಗಿ ಬೇರ್ಪಟ್ಟರು ... ಗಳಾಗಿ ವಿಂಗಡನೆಯಾದರು. ಕೊನೆಯ ಗುಂಪು ಹೊರಟಾಗ ಹಡಗಿನ ಒಡೆದ ಅರ್ಧ ಭಾಗ ಇನ್ನೂ ಬಂಡೆಗಳ ಮಧ್ಯೆ ಹೊಯ್ದಾಡುತ್ತಿತ್ತು. ಸ್ಥಳಿಕರು ದಾರಿಯಲ್ಲೂ ಈ ಜನರನ್ನು ಬಿಡಲಿಲ್ಲ. ಆಗ ನಿರ್ವಾಹವಿಲ್ಲದೆ ಜೀವಭಯದಿಂದ ಹೆಂಗಸರು, ಮಕ್ಕಳು ಹಾಗೂ ಅಶಕ್ತರನ್ನು ದಾರಿಯಲ್ಲಿ ಬಿಟ್ಟು ಗುಂಪು ಮುಂದೆ ಸಾಗಿತು. ಈ ಗುಂಪುಗಳಲ್ಲಿ 47 ಜನರಿದ್ದ ಕ್ಯಾಪ್ಟನ್ ಕಾಕ್ಸನ್ನನ ಧುರೀಣತ್ವದಲ್ಲಿ ಮುನ್ನಡೆದ ಗುಂಪು ಮಾತ್ರ ಸೇರಬೇಕೆಂದುಕೊಂಡಿದ್ದ ಪ್ರಾಂತ್ಯವನ್ನು ತಲುಪಿತು. ಉಳಿದವರು ಏನಾದರೆಂದು ಯಾರಿಗೂ ತಿಳಿಯಲಿಲ್ಲ. ಇನ್ನೊಂದು ಗುಂಪು ಅನೇಕ ತೊಂದರೆಗಳನ್ನು ಎದುರಿಸಿ ಡಚ್ ಪ್ರಾಂತ್ಯವನ್ನು ಆರು ತಿಂಗಳ ಬಳಿಕ ಸೇರಿದಾಗ ಬಗುಕುಳಿದವರು ಆರು ಮಂದಿ ಮಾತ್ರ. ಹೆಂಗಸರನ್ನು ಸ್ಥಳಿಕರು ಸೆರೆಹಿಡಿದರೆಂದು ಆ ನಂತರ ತಿಳಿದು ಬಂತು.

ಇದಾಗಿ ಅರ್ಧ ಶತಮಾನ ಕಳೆದ ನಂತರ ಚಾರ್ಲ್ಸ್ ಡಿಕೆನ್ಸ್ ತನ್ನ 'ಹೌಸ್‌ಹೋಲ್ಡ್ ವರ್ಡ್ಸ್'ನಲ್ಲಿ ಅಪಘಾತಕ್ಕೊಳಗಾದ ಹಡಗಿನಲ್ಲಿದ್ದ ಹೆಂಗಸೊಬ್ಬಳನ್ನು ಹೋಲುತ್ತಿದ್ದ ಚಿಕ



ಮಹಿಳೆಯೊಬ್ಬಳು ಚಿಕ್ಕ ಮಗುವಿನೊಂದಿಗೆ ಕಾಡಿನ ತೀರಾ ಒಳ ಭಾಗದಲ್ಲಿದ್ದ ತನ್ನ ಗುಡಿಸಲಿನ ಮುಂದೆ ಅಳುತ್ತಿದ್ದುದನ್ನು ಕಂಡುದಾಗಿ ಬರೆದಿದ್ದಾನೆ. ಆದರೆ ಈ ಹಡಗಿನಲ್ಲಿ ಮಯೂರ ಸಿಂಹಾಸನವಿತ್ತೆ? ಎಂಬುದು ಚಿದಂಬರ ರಹಸ್ಯವಾಗಿಯೆ ಉಳಿಯಿತು.

ತ್ರಿಂಕೋಮಲಿ ಬಂದರನ್ನು ಬಿಡುವಾಗ ಗ್ರೋಸ್‌ವೆನಾರ್‌ನಲ್ಲಿ ಮೂವತ್ತು ಲಕ್ಷ ಪೌಂಡುಗಳಷ್ಟು ಬೆಲೆಬಾಳುವ ಚಿನ್ನ ಹಾಗೂ ಬೆಳ್ಳಿಯ ಗಟ್ಟಿಗಳು, ವಜ್ರ, ಪಚ್ಚೆ, ಮಾಣಿಕ್ಯ, ದಂತ ಹಾಗೂ ಇಂದ್ರ ನೀಲಮಣಿಗಳನ್ನೊಳಗೊಂಡ ಪೆಟ್ಟಿಗೆಯಿತ್ತೆಂದು ನಂಬಲಾಗಿದೆ. ಪೊಂಡೋಲ್ಯಾಂಡ್ ಸಮುದ್ರ ತೀರದಲ್ಲಿ ಹಡಗು ಮುಳುಗಿದಾಗ ಈ ಅಪಾರ ಸಂಪತ್ತು ಸಮುದ್ರದ ಪಾಲಾಗಿರಲೂಬಹುದು. ಮದ್ರಾಸಿನಲ್ಲಿ ಸಾಕಷ್ಟು ಬೆಲೆ ಬಾಳುವ ಸಂಪತ್ತನ್ನು ಹಡಗಿನಲ್ಲಿ ತುಂಬಲಾಗಿತ್ತೆಂದು ಹಾಗೂ ಈ ಹಡಗಿನಲ್ಲಿದ್ದ ಸರಕುಗಳ ಬೆಲೆ 3,00,000/- ಪೌಂಡುಗಳಿಗಿಂತ ಹೆಚ್ಚಿತ್ತೆಂದು ದಾಖಲೆಗಳು ತಿಳಿಸುತ್ತವೆ.

---

# ದರಿದ್ರ

ತೈತ್ತಿರೀಯೋಪನಿಷತ್ತಿನಲ್ಲಿ ಬರುವ ''ಮಾತೃ ದೇವೋಭವ, ಪಿತೃ ದೇವೋಭವ, ಆಚಾರ್ಯ ದೇವೋಭವ, ಅತಿಥಿ ದೇವೋಭವ'' ಎಂಬ ನಾಲ್ಕು ವಾಕ್ಯಗಳು ಶಿಕ್ಷಣಾಂತ್ಯದಲ್ಲಿ ಗುರುವು ಶಿಷ್ಯನಿಗೆ ತನ್ನ ಮುಂದಿನ ಜೀವನದಲ್ಲಿ ಹೇಗೆ ಉಪಯೋಗಿಸಿಕೊಳ್ಳಬೇಕೆಂದು ಕೊಟ್ಟ ಉಪದೇಶಗಳು. ಭಾರತದ ದೀನದಲಿತರ ಸ್ಥಿತಿಯನ್ನು ಕಂಡು ಮನ ಕರಗಿದ ವಿವೇಕಾನಂದರಿಗೆ ಇವಿಷ್ಟೇ ಸಾಲದೆನಿಸಿರಬೇಕು. ಈ ವಾಕ್ಯಗಳಿಗೆ ಅವರು ''ದರಿದ್ರ ದೇವೋಭವ'' ಎಂಬ ಇನ್ನೊಂದು ವಾಕ್ಯವನ್ನು ಸೇರಿಸಿದರು.

ನೂರಐವತ್ತು ವರ್ಷಗಳ ಹಿಂದೆ ಫ್ರಾನ್ಸಿನ ಸೆಂಟ್ ಸರ್ವನ್ ಎಂಬಲ್ಲಿ ಜೇನ್ ಜೂಗನ್ ಎಂಬ ಮಹಿಳೆಯು ದರಿದ್ರರ ಸೇವೆಗೆ ತನ್ನ ಬಾಳನ್ನೇ ಸಮರ್ಪಿಸಿಕೊಂಡು ''ಬಡವರ ಚಿಕ್ಕ ಸೋದರಿಯರು'' ಎಂಬ ಸಂಸ್ಥೆಯನ್ನು ಕಟ್ಟಿದಳು. ಅದು ಇಂದು ಮಹತ್ತಾಗಿ ಬೆಳೆದು ಅಂತಾರಾಷ್ಟ್ರೀಯ ಸಂಸ್ಥೆಯಾಗಿ 30 ದೇಶಗಳಲ್ಲಿ ಕಾರ್ಯ ನಡೆಸುತ್ತಿದೆ. ಇಂತಹ ಸೇವಾಶ್ರಮದಲ್ಲಿದ್ದ ಒಬ್ಬ [illegible]. ''ನಮ್ಮನ್ನು ಭಿಕ್ಷೆ ಬೇಡಲು ಕಳಿಸುವುದರ ಬದಲು ನೀನೇ ಹೋಗು.'' ಎಂದೊಮ್ಮೆ ಜೇನಳಿಗೆ ಹೇಳಿದ. ಅಂದಿನಿಂದ ಇದೊಂದು ಪರಮಾತ್ಮನದೇ ಆಜ್ಞೆಯೆಂದು ಜೇನಳು ಭಾವಿಸಿ, ಆ ನಿರಾಶ್ರಿತರಾರೂ ಭಿಕ್ಷೆಗೆ ಹೋಗುವ ಅಗತ್ಯವಿಲ್ಲವೆಂದೂ ತಾನೂ ತನ್ನ ಸಹವರ್ತಿ ಸೋದರಿಯರೂ ಹೋಗುವೆವೆಂದೂ ಆ ಅಕಿಂಚನರಿಗೆ ತಿಳಿಸಿದಳು. ಅಂದಿನಿಂದ ದೀನದಲಿತರಿಗಾಗಿ ಭಿಕ್ಷೆ ಎತ್ತುವುದರಲ್ಲಿ ಈ ಸೋದರಿಯರಿಗೆ ಅತೀವ ಸಂತೋಷ.

ಬಟ್ಟೆಬರೆ, ಆಹಾರ, ತಿಂದುಳಿದು ಚೆಲ್ಲುವ ಎಂಜಲು, ಬಟ್ಟೆ ಒಗೆಯಲು ಪಾತ್ರೆ, ಉಪ್ಪು, ಉಣ್ಣೆ, ಉಂಡೆ, ತಿಂಡಿ ಇವನ್ನೆಲ್ಲಾ ಜೇನ್ ಸಂಗ್ರಹಿಸತೊಡಗಿದಳು. ದರಿದ್ರರಲ್ಲಿಯೆ ದೇವರನ್ನು ಕಂಡು ದೇವರಿಗೆ ತಾನು ಬೇಡುತ್ತಿದ್ದೇನೋ ಎಂಬ ಭಾವದಿಂದಾಕೆ ಕೈ ಚಾಚುತ್ತಿದ್ದಳು. ಪ್ರತಿದಿನವೂ ಭಿಕ್ಷೆಗಾಗಿ ಬರುವುದನ್ನು ಒಬ್ಬರು ಆಕ್ಷೇಪಿಸಿದಾಗ ಜೇನಳು ನಗುತ್ತಲೇ, 'ಹೌದಣ್ಣ, ನಮ್ಮ ಸೋದರರು ನಿನ್ನೆ ಹಸಿದಿದ್ದರು, ಇಂದು ಹಸಿದಿದ್ದಾರೆ, ನಾಳೆಯೂ ಹಸಿದಿರುತ್ತಾರೆ.'' ಎಂದಳು. ಒಮ್ಮೆ ಯಾವನೋ ಒಬ್ಬ ಮುಂಗೋಪಿ ಜೇನಳಿಗೆ ಫಟ್ ಎಂದು ಹೊಡೆದ. ಆಗಲೂ ಅದೇ ನಗುಮುಖದಿಂದ, ''ಈಗ ನೀನು ಕೊಟ್ಟಿದ್ದು ನನಗಾಯಿತು. ಹಸಿದಿರುವ ನನ್ನ ಸೋದರರಿಗೆ ದಯವಿಟ್ಟು ಏನಾ

ನೌಕಾಘಾತವಾದ ಬಳಿಕ ಸ್ಥಳೀಯರಿಗೆ ಅಲ್ಲಿ ಕೆಲವು ಚಿನ್ನದ ನಾಣ್ಯಗಳು ದೊರಕಿದ್ದವು. 1800ರಲ್ಲಿ ಸ್ಕಾಟ್‌ಲಂಡಿನ ಅಲೆಕ್ಸಾಂಡರ್ ಲಿಂಟ್ಸೆ ಹಾಗೂ ಕ್ಯಾಪ್ಟನ್ ಸಿಡ್ನಿ ಟರ್ನರ್ ಎಂಬ ಇಬ್ಬರು ಈ ಸ್ಥಳವನ್ನು ಪರಿಶೀಲಿಸಿದಾಗ ಭಾರತದಲ್ಲಿ ತಯಾರಾದ ನಾಣ್ಯಗಳನ್ನೊಳಗೊಂಡು ಸುಮಾರು ಎರಡು ಸಾವಿರ ಚಿನ್ನದ ನಾಣ್ಯಗಳು ಸಿಕ್ಕವೆಂದು ಹೇಳಲಾಗುತ್ತದೆ.

1896ರಲ್ಲಿ ಇನ್ನಷ್ಟು ಚಿನ್ನದ ನಾಣ್ಯಗಳು ದೊರೆತು, ಈ ಸ್ಥಳದೆಡೆಗೆ ಜನರ ಗಮನ ಹರಿಯಿತು. ಈ ಉದ್ದೇಶಕ್ಕಾಗಿಯೆ 1906ರಲ್ಲಿ ಗ್ರೋಸ್‌ವೆನಾರ್ ರಿಕವರಿ ಸಿಂಡಿಕೇಟ್ ಎಂಬ ಸಂಸ್ಥೆ ದಕ್ಷಿಣ ಆಫ್ರಿಕದ ಜೋಹಾನ್ಸ್‌ಬರ್ಗಿನಲ್ಲಿ ಸ್ಥಾಪಿತವಾಯಿತು. ಆ ನಂತರ ಈ ಸಂಸ್ಥೆಯಿಂದ ಪ್ರಯೋಜನವೇನೂ ದೊರೆಯಲಿಲ್ಲವೆಂದು ಅದನ್ನು ರದ್ದುಗೊಳಿಸಲಾಯಿತು.

1923ರಲ್ಲಿ ಈ ಘಟನೆಯ ಬಗ್ಗೆ ಹೊಸದೊಂದು ದಂತಕಥೆ ಹುಟ್ಟಿತು. ದಕ್ಷಿಣ ಆಫ್ರಿಕದ ಪತ್ರಿಕೆಯೊಂದರಲ್ಲಿ ಅನಾಮಧೇಯ ಬರಹವೊಂದು ಪ್ರಕಟವಾಯಿತು. ಮೊಘಲರ

---

# ದೇವೋಭವ

**ಕೋಳಿವಾಡ ಕೃಷ್ಣಮೂರ್ತಿ**

ದರೂ ಕೊಡಣ್ಣ,'' ಎಂದಳು. ಆಗ ಅವನ ಮನಸ್ಸು ಕರಗಿತೆಂಬುದನ್ನು ಬೇರೆ ಹೇಳಬೇಕಿಲ್ಲ. 1879ರಲ್ಲಿ ಜೀನಳು ತೀರಿಕೊಂಡಾಗ ಆಕೆಯ ಸಂಸ್ಥೆ ಹತ್ತು ದೇಶಗಳಲ್ಲಿ 2400 ಜನ ನಿರ್ಗತಿಕರ ಸೇವೆ ಸಲ್ಲಿಸುತ್ತಿತ್ತು. ಅಶಕ್ತರ, ವೃದ್ಧರ, ಅಂಗವಿಕಲರ ಸೇವೆ ಮಾಡಿದ ಜೀನಳಿಗೆ ಪರಮಪದಪ್ರಾಪ್ತಿಯಾಗಲೆಂದು ಜಗದ್ಗುರು ಎರಡನೆಯ ಪಾಲ್‌ರು 1982ರಲ್ಲಿ ವಿಶೇಷ ಪ್ರಾರ್ಥನೆ ಸಲ್ಲಿಸಿದರು.

ಸೇವಾಕಾಂಕ್ಷಿಗಳಾದ ಈ ಸೋದರಿಯರು ಭಾರತದಲ್ಲಿ ಕಲ್ಕತ್ತಾ, ಮುಂಬಯಿ, ಮದರಾಸು, ಸಿಕಂದರಾಬಾದ್, ಮೈಸೂರು, ಬೆಂಗಳೂರು, 'ಈರೋಡು, ಗುಂಟೂರುಗಳಲ್ಲಿ ಕೇಂದ್ರ, ತೆರೆದಿದ್ದಾರೆ. ನಂಬೂರಿನ ಆಶ್ರಮವು ಸ್ವಚ್ಛತೆಗೆ ಒಂದು ಮಾದರಿ; ವ್ಯವಸ್ಥೆ ನೋಡುತ್ತಿರುವವರು ಆ್ಯನ್ ಮತ್ತು ಮಾರ್ಗಾರೇಟ್ ಎಂಬ ಇಬ್ಬರು ಕ್ರೈಸ್ತ ಸಂನ್ಯಾಸಿನಿಯರು. ಗುಂಟೂರಿನ ಕ್ರೈಸ್ತ ಗುರು ಕಟ್ಟಡ ಒದಗಿಸಿದ್ದಾರೆ. ದಿನನಿತ್ಯದ ವಿತರಣೆಗೆ ಇವರು ಜೀನಳು ತೋರಿಸಿದ ಭಿಕ್ಷಾವೃತ್ತಿಯ ಮಾರ್ಗವನ್ನೇ ಅವಲಂಬಿಸಿದ್ದಾರೆ. ಅದಕ್ಕಾಗಿ ಇವರಿಗೆ ಸಂಕೋಚವಿಲ್ಲ. ಬದಲು ಸಂತೋಷ, ಸಂತೃಪ್ತಿ ಇದೆ.

ತರಕಾರಿ, ಧಾನ್ಯ ಇತ್ಯಾದಿಗಳನ್ನು ತರಲು ಗುಂಟೂರಿನ ಮಾರುಕಟ್ಟೆಗೆ ಈ ಸೋದರಿಯರು ಬುಟ್ಟಿ, ಕೈ ಚೀಲಗಳನ್ನು ಹಿಡಿದು ಹೊರಟರೆ, ವರ್ತಕರು ಅವುಗಳನ್ನು ತಾವಾಗಿಯೇ ಯಥಾನುಶಕ್ತಿ ಕೊಡುತ್ತಾರೆ. ಅಷ್ಟೇ ಅಲ್ಲ, ಕೊಳ್ಳಲು ಬಂದವರು ಸಹ ತಾವು ಕೊಂಡದ್ದರಲ್ಲಿ ಒಂದಿಷ್ಟನ್ನೂ ಕೊಡುತ್ತಾರೆ.

'ಹಿಂದಿನದನ್ನು ನೆನಸಿದರೆ ಏನು ಬಂದೀತು? ನಾವು ನಮ್ಮ ಬಂಧುಬಳಗದವರಿಂದಲೇ ವಂಚಿಸಲ್ಪಟ್ಟೆವು. ಈಗ ನಮ್ಮ ಉದ್ಧಾರಕ್ಕೆ ಸೋದರಿಯರೆಂದುಕೊಳ್ಳುವ ಈ ಮಹಾಮಾತೆಯರಿದ್ದಾರೆ; ಅದಕ್ಕೂ ಮಿಗಿಲಾಗಿ ಅವರ ಮೂಲಕ ನಮ್ಮನ್ನು ರಕ್ಷಿಸುವ ದೇವರಿದ್ದಾನೆ; ಈ ಶಾಂತ ದೈವೀ ವಾತಾವರಣದಲ್ಲೇ ನಾವು ದೈವ ಚಿಂತನೆ ಮಾಡುತ್ತಾ ಇರುತ್ತೇವೆ.' ಎನ್ನುತ್ತಾರೆ ಇಲ್ಲಿ ನೆಲೆಸಿರುವ ನಿವಾಸಿಗಳು.

ದರಿದ್ರನಾರಾಯಣ ಸಾರ್ಥಕ್ಯಭಾವವನ್ನು ತಿಳಿಯುವುದು ಬಹುಶಃ ಇಂತಹ ಸ್ಥಳಗಳಲ್ಲಿಯೆ. ●

ಮಯೂರ ಸಿಂಹಾಸನದಿಂದ ಲೂಟಿ ಮಾಡಿದ ಎರಡು ಚಿನ್ನದ ನವಿಲುಗಳು ಈ ಹಡಗಿನಲ್ಲಿದ್ದವೆಂದು ಆ ಲೇಖನದಲ್ಲಿ ಹೇಳಲಾಗಿತ್ತು. (ಈ ಸಿಂಹಾಸನದಲ್ಲಿ ಎರಡು ನವಿಲುಗಳು ಗರಿ ಬಿಚ್ಚಿ ನಿಂತಿದ್ದವು. ಈ ಗರಿಗಳಲ್ಲಿ ಹಾಗೂ ಶರೀರದ ಮೇಲೆ ಪಚ್ಚೆ ಮತ್ತು ಹವಳ ಹಾಗೂ ಇಂದ್ರ ನೀಲಮಣಿಯನ್ನು ಜೋಡಿಸಲಾಗಿತ್ತೆಂದು ಆ ಕಾಲದ ಪ್ರತ್ಯಕ್ಷದರ್ಶಿಯೊಬ್ಬ ಹೇಳಿದ್ದ.) 1655ರಲ್ಲಿ ಈ ಸಿಂಹಾಸನವನ್ನು ನೋಡಿದ್ದ ಫ್ರೆಂಚ್ ಅಕ್ಕಸಾಲಿಗ ಲೇನ್‌ಮನ್ನನ ಪ್ರಕಾರ ಮಂಚದ ಹಾಗಿದ್ದ ಈ ಸಿಂಹಾಸನಕ್ಕೆ ನಾಲ್ಕು ಕಾಲುಗಳಿದ್ದವು. ಮೇಲ್ಛಾವಣಿಗೆ ಆಧಾರವಾಗಿ ಹನ್ನೆರಡು ಸಾಲುಗಳ ಸರಳುಗಳಿದ್ದವು. ಈ ಸರಳುಗಳನ್ನು ಪಚ್ಚೆ ಹಾಗೂ ಮಾಣಿಕ್ಯಗಳಿಂದ ಅಲಂಕರಿಸಲಾಗಿತ್ತು. ಆ ಕಾಲಕ್ಕೆ ಅದರ ಅಂದಾಜು ಬೆಲೆ ಅರವತ್ತು ಲಕ್ಷ ಪೌಂಡುಗಳಷ್ಟಾಗಬಹುದೆಂದು (ಸುಮಾರು ಹದಿನೆಂಟು ಕೋಟಿ ಅರವತ್ತುಲಕ್ಷ ರೂಪಾಯಿಗಳಷ್ಟು) ಆತ ಲೆಕ್ಕ ಹಾಕಿದ್ದ. 1738ರಲ್ಲಿ ನಾದಿರ್ ಶಾಹ ಹಾಗೂ ಅವನ ಗುಂಪು ದಿಲ್ಲಿಯ ಮೇಲೆ ದಂಡೆತ್ತಿ ಬಂದಾಗ ದೀವಾನ್ - ಎ ಆಮ್‌ನ್ನು ಕೆಡವಿ ಮಯೂರ ಸಿಂಹಾಸನವನ್ನೊಳಗೊಂಡಂತೆ ಅದರಲ್ಲಿದ್ದ ಸಂಪತ್ತೆಲ್ಲವನ್ನೂ ಪರ್ಶಿಯಕ್ಕೆ ಸಾಗಿಸಲಾಯಿತು. ಮೂಲ ಸಿಂಹಾಸನದ ಅಳಿದುಳಿದ ಭಾಗಗಳನ್ನು ಸೇರಿಸಿ ಅದೇ ತರಹದ ಇನ್ನೊಂದು ಸಿಂಹಾಸನವನ್ನು 1740ರಲ್ಲಿ ರಚಿಸಲಾಯಿತು. ಮಯೂರ ಸಿಂಹಾಸನದ ನವಿಲುಗಳನ್ನು ಪರ್ಶಿಯದಿಂದ ಕದ್ದು ಕಲ್ಕತ್ತೆಗೆ ಸಾಗಿಸಲಾಯಿತೆಂದು ದಕ್ಷಿಣ ಆಫ್ರಿಕದ ಆ ಬರಹಗಾರ ತನ್ನ ಲೇಖನದಲ್ಲಿ ಹೇಳಿದ್ದ.

ಹೀಗೆ ಮಯೂರಸಿಂಹಾಸನದ ಬಗ್ಗೆ ಅನೇಕ ದಂತಕಥೆಗಳಿವೆ, 'ಅರೇಬಿಯನ್ ನೈಟ್ಸ್'ಗಿಂತ ರೋಚಕವಾದ ಈ ಕಥೆಗಳಲ್ಲಿ ಸತ್ಯಾಂಶವೆಷ್ಟಿದೆಯೆಂಬುದು ಮಾತ್ರ ಯಾರಿಗೂ ತಿಳಿಯದು. ಈ ಕಥೆಗಳಲ್ಲಿ ಅಷ್ಟಿಷ್ಟು ಸತ್ಯವಿರಲೂಬಹುದು. ಅಥವಾ ಸಿಂಹಾಸನವನ್ನು ಪತ್ತೆಹಚ್ಚಲು ಸ್ಫೂರ್ತಿ ನೀಡುವ ಉದ್ದೇಶದಿಂದ ಹುಟ್ಟಿದ ವದಂತಿಗಳಾಗಿರಲೂಬಹುದು. ಆದರೆ ಜಗತ್ತಿನ ಅತ್ಯಮೂಲ್ಯ ಕಲಾಕೃತಿಯೊಂದು ಹೇಳ ಹೆಸರಿಲ್ಲದಂತೆ ಕಣ್ಮರೆಯಾಗಿದ್ದು ಮಾತ್ರ ಸತ್ಯ. ಮುಂದೆ ಎಂದಾದರೊಂದು ದಿನ ಈ ಸಿಂಹಾಸನದ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾದರೆ ಅಥವಾ ಇವೆಲ್ಲ ಸಿಂಹಾಸನದ ತುಣುಕುಗಳು ಪತ್ತೆಯಾದರೆ ಈ ಎಲ್ಲ ಊಹಾಪೋಹಗಳಿಗೂ ತೆರೆಬೀಳಬಹುದು.

ಆದರೆ ಅಂತಹ ಕಾಲ ಎಂದಾದರೂ ಬರಬಹುದೆ? ಎಂಬುದೇ ಈಗಿರುವ ಪ್ರಶ್ನೆ. ●




"ಸರಕಾರ ಬೀಳುವ ಸ್ಥಿತಿಯಲ್ಲಿದೆ ಅಂದಿದ್ದೆ..."



ಟಿ.ಎಂ. ಸುಬ್ಬರಾಯ

# ನಿರ್ಲಜ್ಜ ಸ್ತ್ರೀ

"ಯವ್ವಾ.... ತುಸಾ ನೀರು ನೀಡ್ರೀ..."

"ಯವ್ವಾನೂ ಇಲ್ಲ... ನೀರೂ ಇಲ್ಲ.. ನಡೀ," ಎಂದು ಗದರಿದೆ.

'ಯವ್ವಾ' ಇಲ್ಲ ಎನ್ನುವುದು ನಿಜವಾಗಿತ್ತು. ಅದೆ ತಾನೆ ಬೇಸಿಗೆ ರಜೆ ಪ್ರಾರಂಭವಾಗಿತ್ತು. ಅಜ್ಜನ ಮನೆಗೆ ಹೋಗಲು ಮಕ್ಕಳು ತವಕಿಸುತ್ತಿದ್ದವು. ತವರಿಗೆ ಹೋಗಲು 'ಯವ್ವಾ'ಳಂತೂ ತುದಿಗಾಲ ಮೇಲೆಯೆ ನಿಂತಿದ್ದಳು. ಮಕ್ಕಳ ಜೊತೆ ಈ 'ಯವ್ವಾ'ಳನ್ನೂ ನಿನ್ನೆ ಬಸ್ ಹತ್ತಿಸಿದ್ದೆ. ಹೀಗಾಗಿ ಆ ಹುಡುಗಿ ಬಂದಾಗ ವಾರಕ್ಕೆ ಎರಡು ಮೂರು ಬಾರಿ ನೀರು ನೀಡುತ್ತಿದ್ದ 'ಯವ್ವಾ' - ಅಂದರೆ ನನ್ನ ಗೀತಾ - ಇರಲಿಲ್ಲ. ಆದರೆ ನೀರು ಇಲ್ಲ ಎನ್ನುವುದು ನಿಜವಾಗಿರಲಿಲ್ಲ. ನೀರು ಇತ್ತು: "ಪ್ರತಿದಿನ ಡ್ರಮ್ಮಿನ ನೀರು ಬದಲಾಯಿಸಿ, ತಿಳೀತಾ.. ದಿನಾ ಒಂದ್ ಕೊಡ ನೀರನ್ನು ಬಾವಿಯಿಂದ ತಂದು ಡ್ರಮ್ಮಿಗೆ ತುಂಬಿಕೊಂಡರೆ ಸಾಕು.. ಅದರಿಂದಾನೇ ಒಂದೆರಡು ಚೊಂಬು ನೀರು ತೆಗೆದು ಗ್ಯಾಸ್ ಮೇಲಿಟ್ಟು ಕಾಯಿಸಿಕೊಳ್ಳಿ. ತಣ್ಣೀರು ಕುಡಿಯಬೇಡಿ.. ತಿಳಿಯಿತಾ.." ಮೂರು ನಾಲ್ಕು ಬಾರಿ ತಿಳಿಯಪಡಿಸಿದ್ದಳು ಗೀತಾ. ಗೀತಾ ಹೇಳಿದಂತೆಯೇ ಇವೊತ್ತು ಬೆಳಿಗ್ಗೆ ಡ್ರಂ ಖಾಲಿ ಮಾಡಿ, ಬಾವಿಯಿಂದ ಒಂದು ಕೊಡ ನೀರು ತಂದು ಡ್ರಮ್ಮಿಗೆ ಹಾಕಿದ್ದೆ. ಮನೆಯಲ್ಲಿ ನೀರಿತ್ತು. ಆದರೆ ನೀರು ನೀಡುವುದಕ್ಕೆ ಮನಸ್ಸಿರಲಿಲ್ಲ.

"ಯವ್ವಾ.. ತುಸಾ ನೀರು ನೀಡ್ರೀ," ಪುನಃ ಹುಡುಗಿಯ ಆಲಾಪ.

ರೇಗಿತು ನನಗೆ: "ಹೇಳಿದ್ದು ಕೇಳಿಸಲಿಲ್ಲವೇನು? ಯವ್ವಾ ಇಲ್ಲ, ನಡ.."

ಸ್ವಲ್ಪ ಹೊತ್ತು ಮೌನ. ಹುಡುಗಿ ಹೊರಟು

ಹೋಗಿರಬೇಕು ಎಂದುಕೊಂಡೆ.

ಇಲ್ಲ, ಹುಡುಗಿ ಹೊರಟುಹೋಗಿರಲಿಲ್ಲ. ಸ್ವಲ್ಪ ಹೊತ್ತಿನ ನಂತರ ಮತ್ತೆ ಅದೇ ರಾಗ: ''ಯವ್ವಾ, ತುಸಾ ನೀರು ನೀಡ್ರೀ...''

ಕೇಳಿಸಿದರೂ ಕೇಳಿಸದವನಂತೆ ಕುಳಿತೆ.

ಮತ್ತೆ ಅದೇ ಬೇಡಿಕೆ. ಈ ಬಾರಿ ಬೇಡಿಕೆಯ ಜೊತೆ, ''ಅಂಗಳಾ ಸಾರಿಸಾಕೆ ಸೆಗಣಿ ತಂದೀನ್ರಿ,'' ಎನ್ನುವ ಹೇಳಿಕೆ ಬೇರೆ.

''ಸೆಗಣಿ ತರೋದಕ್ಕೆ ಯಾರು ಹೇಳಿದರು ನಿನಗೆ? ಅವ್ವಾ ಮನೆಯಲ್ಲಿ ಇಲ್ಲಾ, ಊರಿಗೆ ಹೋಗಿದ್ದಾರೆ, ತಿಳಿಯಿತಾ? ತಗೊಂಡು ಹೋಗು ನಿನ್ನ ಸೆಗಣೀನಾ..''

ನನ್ನ ಅಬ್ಬರಕ್ಕೆ ಹುಡುಗಿ ಹೊರಟುಹೋಗಿರಬೇಕು ಅಂದುಕೊಂಡೆ.

ನನ್ನ ಊಹೆ ಸುಳ್ಳಾಯಿತು. ನಿಂತ ಜಾಗದಿಂದ ಹುಡುಗಿ ಒಂದು ಇಂಚೂ ಕದಲಿರಲಿಲ್ಲ.

ಪುನಃ ಅದೇ ರಾಗ ತೆಗೆದಳು. ಆದರೆ ಈ ಬಾರಿ ಸಂಬೋಧನೆಯ ವರ್ಶನ್ ಮಾತ್ರ ಬದಲಾಗಿತ್ತು: ''ಯಪ್ಪಾ, ತುಸಾ ನೀರು ನೀಡ್ರಿ...''

'ಯವ್ವಾ' ಮನೆಯಲ್ಲಿ ಇಲ್ಲ ಎನ್ನುವುದು ಹುಡುಗಿಗೆ ಖಾತ್ರಿಯಾಗಿತ್ತು.

ಪೀಡೆಯನ್ನು ತೊಲಗಿಸೋಣ ಎಂದುಕೊಂಡು ಒಳಗೆ ಹೋದೆ. ಡ್ರಮ್ಮಿನಿಂದ ಒಂದು ಚೊಂಬು ನೀರು ತೆಗೆದುಕೊಂಡೆ. ಹೊರಗೆ ಬಂದಾಗ ಗೇಟಿನ ಹೊರಗೆ ಹುಡುಗಿ ನಿಂತಿದ್ದಳು.

ಗೇಟು ತೆರೆದೆ. ''ಬಾ.. ತಗೋ..''

ಹುಡುಗಿ ಬದಿಗೆ ಸರಿದಳು. ಎರಡೂ ಕೈಗಳನ್ನು ನಿಡಿದಾಗಿ ಮುಂದೆ ಚಾಚಿದಳು. ಸೆಗಣಿ ಅಂಟಿದ ಕೈಗಳಿಗೆ ನೀರು ಹಾಕಿದೆ. ಉಜ್ಜಿ ತೊಳೆದುಕೊಂಡಳು.

ಚೊಂಬಿನಲ್ಲಿದ್ದ ನೀರು ಖಾಲಿಯಾಯಿತು.

''ಯಪ್ಪಾ, ಕುಡಿಯಾಕೆ ತುಸಾ ನೀರು ನೀಡ್ರೀ,'' ಗೋಗರೆದಳು ಹುಡುಗಿ.

ಒಳಗೆ ಹೋಗಿ ಪುನಃ ನೀರು ತಂದೆ.

ತೊಳೆದಿದ್ದ ಕೈಗಳನ್ನು ಬೊಗಸೆ ಮಾಡಿ ಎದುರು ಚಾಚಿದಳು.

ಬೊಗಸೆಗೆ ನೀರು ಹಾಕಿದೆ. ಆಕೆ ಗಟಗಟ ಕುಡಿದಳು.

ವಾರ್ನಿಂಗ್ ಕೊಟ್ಟೆ: ''ನೋಡು, ನಿನ್ನ ಯವ್ವಾ ಬರಲು ಇನ್ನೂ ಹದಿನೈದು ಇಪ್ಪತ್ತು ದಿನಗಳಾದರೂ ಆಗುತ್ತದೆ. ನಾಳೆಯಿಂದ ಇಲ್ಲಿ ಬಂದು ಪಿರಿಪಿರಿ ಹಚ್ಚಬೇಡ. ಸೆಗಣಿ - ಪಿಗಣಿ ಏನೂ ತರೋದು ಬೇಡ ತಿಳಿಯಿತಾ...''

'ತಿಳಿಯಿತು' ಎನ್ನಲಿಲ್ಲ ಹುಡುಗಿ. 'ತಿಳಿಯಲಿಲ್ಲ' ಎನ್ನಲೂ ಇಲ್ಲ. ನೀರು ಕುಡಿದು, ತೊಟ್ಟಿದ್ದ ಹರಕು ಲಂಗದ ತುದಿಯಿಂದ ಕೈಗಳನ್ನು ಒರೆಸಿಕೊಳ್ಳುತ್ತಾ ಹೊರಟುಹೋದಳು.

ಗೀತಾ ಬರುವವರೆಗೆ ಇನ್ನು ಈ ಹುಡುಗಿ ಮನೆಯ ಎದುರು ಸುಳಿಯುವುದಿಲ್ಲ. 'ಯವ್ವಾ.. ತುಸಾ ನೀರು ನೀಡ್ರೀ,' ರಾಗ ಮಾಡುತ್ತಾ ನಿಲ್ಲುವುದಿಲ್ಲ ಎಂದು ಸಮಾಧಾನ ಪಟ್ಟುಕೊಂಡೆ.

ಆದರೆ ಆ ಸಮಾಧಾನ ಎರಡು ದಿನವಷ್ಟೇ ಉಳಿದದ್ದು.

''ಯವ್ವಾ, ತುಸಾ ನೀರು ನೀಡ್ರೀ,'' ಮಾರನೆಯ ದಿನ ಮತ್ತೆ ರಾಗಾಲಾಪ ಪ್ರಾರಂಭವಾಗಿತ್ತು.

ನನಗೆ ರೇಗಿ ಹೋಯಿತು: ''ನಿನಗೆ ಹೇಳಿದ್ದು ತಿಳಿಯಲಿಲ್ಲವೇನು? ನಿನ್ನ ಯವ್ವಾ ಮನೆಯಲ್ಲಿಲ್ಲ. ಊರಿಗೆ ಹೋಗಿದ್ದಾಳೆ. ಇನ್ನೂ ಹದಿನೈದಿಪ್ಪತ್ತು ದಿವಸ ಬರುವುದಿಲ್ಲ,'' ಎಂದು ಜೋರಾಗಿ ಗದರಿದೆ. ಆದರೆ ಅದೇನೂ ಆ ಹುಡುಗಿಯ ಮೇಲೆ ಯಾವುದೂ ಪರಿಣಾಮ ಬೀರಿದಂತೆ ಕಾಣಲಿಲ್ಲ! ''ಯಪ್ಪಾ, ಅಂಗಳಾ ಸಾರಿಸೋಕೆ ಸೆಗಣಿ ತಂದೀನ್ರಿ,'' ಅಂದಿತು ಆ ಹುಡುಗಿ.

''ತರಬೇಡ ಅಂದಿರಲಿಲ್ವ ನಿನಗೆ? ಮತ್ತೇಕೆ ತಂದೆ..?'' ಎಂದು ಸ್ವಲ್ಪ ಜೋರಾಗಿಯೆ ಕೇಳಿದೆ.

ಹುಡುಗಿ ಉತ್ತರಿಸಲಿಲ್ಲ.

''ಮೊನ್ನೆ ನೀನು ತಂದು ಹಾಕಿರೋ ಸೆಗಣಿ

ಹಾಗೆಯೇ ಬಿದ್ದಿದೆ. ನೋಡು ಅಲ್ಲಿ, ಅಂಗಳಾ ಸಾರಿಸೋದಕ್ಕೆ ಇಲ್ಲಿ ಯಾರಿದ್ದಾರೆ? ನಾನೇ ಸಾರಿಸಬೇಕು..?''

ಹುಡುಗಿಯಿಂದ ಇದಕ್ಕೂ ಉತ್ತರವಿಲ್ಲ.

ಸ್ವಲ್ಪ ಹೊತ್ತಿನ ನಂತರ ಅದೇ ರಾಗ: ''ಯಪ್ಪಾ.. ತುಸಾ ನೀರು ನೀಡ್ರೀ..''

ಇಲ್ಲ.. ಇವಳಿಂದ ನನಗೆ ಬಿಡುಗಡೆಯೇ ಇಲ್ಲ. ಬೇಕಾಗಲಿ ಬೇಡವಾಗಲಿ, ಎರಡು ಮೂರು ದಿನಕ್ಕೊಮ್ಮೆ ಹೀಗೆಯೇ ಸೆಗಣಿ ತಂದು ರಾಶಿ ಹಾಕುವವಳೆ. 'ಯಪ್ಪಾ.. ತುಸಾ ನೀರು ನೀಡ್ರೀ..' ಅಂತ ರಾಗಾಲಾಪ ಮಾಡುತ್ತಾ ಗೇಟಿನ ಹೊರಗೆ ನಿಲ್ಲುತ್ತಾಳೆ. ನೀರನ್ನೇನೋ ನೀಡಬಹುದು. ಆದರೆ ತಂದು ರಾಶಿ ಹಾಕುವ ಸೆಗಣಿಯನ್ನೇನು ಮಾಡುವುದು? ಅಂಗಳ ಸಾರಿಸಲು ಸೆಗಣಿ ತರಿಸಿಕೊಳ್ಳುತ್ತಾ, ನೀರು ಕೊಟ್ಟು, ತಿಂಡಿ - ತಿನಿಸು ಕೊಟ್ಟು ಗೀತಾ ರೂಢಿ ಮಾಡಿಬಿಟ್ಟಿದ್ದಾಳೆ. ಈಗ ನಾನು ಎಷ್ಟು ಹೇಳಿದರೂ ಈ ಹುಡುಗಿ ಕೇಳುವವಳಲ್ಲ.

''ನೋಡು, ಬೇಕಾದರೆ ಪ್ರತಿದಿನಾ ನೀರು ನೀಡುತ್ತೇನೆ. ಸೆಗಣಿ ಮಾತ್ರ ಮನೆ ಎದುರು ರಾಶಿ ಹಾಕಬೇಡ, ತಿಳಿಯಿತಾ...?'' ನಿಡಿದಾಗಿ ಚಾಚಿದ, ಸೆಗಣಿ ಮೆತ್ತಿದ್ದ ಕೈಗಳಿಗೆ ನೀರು ಹಾಕುತ್ತಾ ಹೇಳಿದೆ.

'ಆಯಿತು, ಸೆಗಣಿ ತಂದು ರಾಶಿ ಹಾಕುವುದಿಲ್ಲ, ಎನ್ನಲಿಲ್ಲ ಹುಡುಗಿ. ಹಾಕುತ್ತೇನೆ' ಎನ್ನಲೂ ಇಲ್ಲ. ಉಜ್ಜಿ ಕೈ ತೊಳೆದುಕೊಂಡು.



''ಯಪ್ಪಾ, ಕುಡಿಯಾಕೆ ತುಸಾ ನೀರು ನೀಡ್ರಿ'' ಎಂದಿತು.

ಇನ್ನೇನು ನೀರು ಕುಡಿದು ಹೊರಡುತ್ತಾಳೆ, ಎಂದುಕೊಂಡೆ. ''ತಿಳಿಯಿತಲ್ಲಾ... ಇನ್ನು ನಿನ್ನ ಯವ್ವಾ ಬರುವವರೆಗೆ ಸೆಗಣಿ ತರಬೇಡ,'' ಎಚ್ಚರಿಸಿದೆ.

ಆದರೆ ಹುಡುಗಿ ಹೊರಡಲಿಲ್ಲ. ನನ್ನತ್ತ ನೋಡಲೂ ಇಲ್ಲ. ತಾನು ತಂದು ರಾಶಿ ಹಾಕಿದ್ದ ಸೆಗಣಿಯತ್ತ ನೋಡುತ್ತಾ, ''ಯಪ್ಪಾ ... ಒಂದ್ ಕೊಡಾ ನೀಡ್ರೀ ... ಒಂದ್ ಕಸಬರಿಗೆ ನೀಡ್ರಿ ... ಅಂಗಳಾ ಸಾರಿಸ್ತೇನೆ ...'' ಅಂದಳು.

ಇದೊಳ್ಳೆ ಗ್ರಹಚಾರ ಬಂತಲ್ಲಾ. ಅಂಗಳಾ ಸಾರಿಸುವ ನೆವ ಮಾಡಿ ... ಅದು ನೀಡ್ರಿ, ಇದು ನೀಡ್ರಿ, ಅಂತ ಪಿರಿಪಿರಿ ಹಚ್ಚಿ ನಿಂತರೆ ... ಅಂದುಕೊಂಡು,

''ನೀನು ಸಾರಿಸೋದೇ ಬೇಡ. ಸುಮ್ಮನೆ ನಡೆ. ರಗಳೆ ಮಾಡಬೇಡ,'' ಎಂದು ಬಿರುಸಾಗಿ ಅಂದವನು ಮತ್ತೆ ಅಲ್ಲಿ ನಿಲ್ಲದೆ ಸೀದಾ ಒಳಗೆ ಬಂದು ಬಾಗಿಲು ಹಾಕಿದ.

ಹುಡುಗಿಯಿಂದ 'ಯಪ್ಪಾ ..... ಕೊಡಾ ನೀಡ್ರೀ, ಕಸಬರಿಗೆ ನೀಡ್ರೀ ...' ಎನ್ನುವ ಬೇಡಿಕೆ ಪುನಃ ಬರಬಹುದು ಎಂದುಕೊಂಡಿದ್ದೆ. ಇಲ್ಲ ... ಅಂಥ ಬೇಡಿಕೆ ಬರಲಿಲ್ಲ. ಹುಡುಗಿ ಅಲ್ಲಿರಲಿಲ್ಲ. ಹೊರಟುಹೋಗಿದ್ದಳು.

ಮಾರನೆಯ ದಿನ ಬೆಳಿಗ್ಗೆ ಎದ್ದು ಬಾಗಿಲು ತೆರೆದಾಗ ಆಶ್ಚರ್ಯವೊಂದು ಕಾದಿತ್ತು. ಅಂಗಳ ವೆಲ್ಲಾ ಸೆಗಣಿಯಿಂದ ಸಾರಿಸಲ್ಪಟ್ಟಿತ್ತು.

ಬಹುಶಃ ಆ ಹುಡುಗಿಯದೇ ಈ ಕೆಲಸ. ಯಾರಿಂದ ಕೊಡ, ಕಸಬರಿಗೆ ಬೇಡಿ ತಂದಿದ್ದಳೋ ಏನೋ. ಅಂಗಳ ಸಾರಿಸಿದ್ದಳು. ಆದರೆ, ಹುಡುಗಿ ಅಲ್ಲಿರಲಿಲ್ಲ. ಅಂಗಳ ಸಾರಿಸಿ ಹೊರಟುಹೋಗಿದ್ದಳು.

ಆಫೀಸಿಗೆ ಹೊರಡಲು ತಯಾರಿ ನಡೆಸಿದ್ದೆ. ಹೊರಗಿನಿಂದ ಮತ್ತೆ ಅದೇರಾಗ: ''ಯಪ್ಪಾ... ತುಸು ನೀರು ನೀಡ್ರೀ ...''



ನೀರು ತೆಗೆದುಕೊಂಡು ಹೋದೆ. ಯಥಾ ಪ್ರಕಾರ ಸೆಗಣಿ ಮೆತ್ತಿದ್ದ ಕೈ. ಗೇಟಿನ ಒಳಗೆ ಬಲಬದಿಯಲ್ಲಿಯ ಒಂದು ಮೂಲೆಯಲ್ಲಿ ಸೆಗಣಿಯ ಪುಟ್ಟ ರಾಶಿ.

''ಅಂಗಳ ಸಾರಿಸು ಅಂದವರು ಯಾರು ನಿನಗೆ ...? ಮತ್ತೆ ಯಾಕೆ ಸೆಗಣಿ ತಂದೆ?''

ಹುಡುಗಿ ಮಾತನಾಡಲಿಲ್ಲ. ನನ್ನ ಕಡೆ ನೋಡಲೂ ಇಲ್ಲ. ಕೈಗಳನ್ನು ನಿಡಿದಾಗಿ ಚಾಚಿಕೊಂಡೇ ನಿಂತಿದ್ದಳು.

ನೀರು ಹಾಕಿದೆ. ಉಜ್ಜಿ ತೊಳೆದುಕೊಂಡಳು.

ಕೈ ತೊಳೆದುಕೊಂಡ ಮೇಲೆ ಮಾಮೂಲಿ ರಾಗ: ''ಯಪ್ಪಾ ... ಕುಡಿಯಾಕೆ ತುಸಾ ನೀರು ನೀಡ್ರೀ ...''

ನೀರು ತರಲು ಒಳಗೆ ಹೋದೆ.

ಪಾಪ ... ಬಡ ಹುಡುಗಿ ... ಕೊಡ, ಕಸಬರಿಗೆ ಕೊಡದಿದ್ದರೂ ಎಲ್ಲಿಂದಲೋ .... ಯಾರಿಂದಲೋ ಬೇಡಿ ತಂದು ಅಂಗಳ ಸಾರಿಸಿದ್ದಾಳೆ. ಬಯ್ದರೂ ತುಟಿ ಪಿಟಕ್ಕೆನ್ನುವುದಿಲ್ಲ .... ಪಾಪ ಎನ್ನಿಸಿತು.

ನೀರು ತಂದೆ. ಒಡ್ಡಿದ ಬೊಗಸೆಗೆ ಹಾಕಿದೆ. ನೀರು ಕುಡಿದ ಮೇಲೆ, 'ತಗೋ...' ಎಂದು ಎಂಟಾಣೆ ಕೈಗೆ ಹಾಕಿದೆ.

ಹುಡುಗಿ ತೆಗೆದುಕೊಂಡಳು.

''ಯಪ್ಪಾ ... ನೀವು ದಯಾಳುಗಳ್ರೀ ... ದಾನಿಗಳ್ರೀ ... ಯಪ್ಪಾ ತುಂಬಾ ಉಪಕಾರ

ಆತ್ರೀ ... ಯಪ್ಪಾ ... ನಮಸ್ಕಾರ ... ದೊಡ್ಡ ಘನಸ್ಸು ನಿಮ್ಮದು.'' ಎಂದೆಲ್ಲಾ ಹೊಗಳು ತ್ತಾಳೆ, ಕೃತಜ್ಞತೆ ಅರ್ಪಿಸುತ್ತಾಳೆ ಎಂದು ಭಾವಿಸಿದೆ. ಆದರೆ ಹುಡುಗಿ ಏನನ್ನೂ ಹೇಳಲಿಲ್ಲ. ಮುಖದಲ್ಲಿ ಕೃತಜ್ಞತೆಯ ಸುಳಿವೂ ಇಲ್ಲ. ತೀರಾ ... ತೀರಾ... ನಿರ್ಲಿಪ್ತತೆ.

ಕೊಟ್ಟಿದ್ದ ಎಂಟಾಣೆಯನ್ನು ಹಿಡಿದುಕೊಂಡು ತಲೆ ತಗ್ಗಿಸಿ ನಡೆದಳು ಹುಡುಗಿ.

ಹೋಗುತ್ತಿದ್ದ ಅವಳನ್ನೇ ನೋಡುತ್ತಾ ನಿಂತೆ.

ಎರಡು ಇಲ್ಲವೇ ಮೂರು ದಿನಗಳಿಗೊಮ್ಮೆ ಇದೇ ಘಟನೆಯ ಪುನರಾವರ್ತನೆ. ''ಯಪ್ಪಾ ... ತುಸಾ ನೀರು ನೀಡ್ರೀ ..'' ಎನ್ನುವ ಅದೇ ರಾಗಾಲಾಪ. ಕೈಗೆ ಮೆತ್ತಿದ ಸೆಗಣಿಯನ್ನು ತೊಳೆದುಕೊಂಡ ಮೇಲೆ 'ಕುಡಿಯಲು ನೀರು' ನೀಡಿ ಎನ್ನುವುದು ಹೀಗೆಯೆ ನಡೆಯತೊಡಗಿತು. ನಾನು ಎದ್ದು ಬಾಗಿಲು ತರೆಯುವ ಮೊದಲೇ, ವಾರಕ್ಕೊಂದೆರಡು ಬಾರಿ ಅಂಗಳ ಸಾರಿಸಿ ಹೋಗಿರುತ್ತಿದ್ದಳು. ಕೊಡ, ಕಸಬರಿಗೆಗಳನ್ನು ಮತ್ತೆ ನನ್ನ ಬಳಿ ಕೇಳಿರಲಿಲ್ಲ. ಅಂಗಳ ಸಾರಿಸಿದ ದಿನ ತಪ್ಪದೇ ಬರುತ್ತಿದ್ದಳು. ಅಂಗಳ ಸಾರಿಸಿದ ಮೊದಲ ದಿನ ಎಂಟಾಣೆ ಕೊಟ್ಟಿದ್ದೆ. ಎಂಟಾಣೆ ಈಗ ಹೇಗೆ ಸಾಕಾಗುತ್ತದೆ? ಎನ್ನಿಸಿತ್ತು. ಮತ್ತೊಮ್ಮೆ ಅಂಗಳ ಸಾರಿಸಿದಾಗ ಒಂದು ರೂಪಾಯಿ ಕೊಟ್ಟಿದ್ದೆ. ಇನ್ನೊಮ್ಮೆ ಒಂದೂವರೆ ಕೊಟ್ಟೆ. ಕೊಟ್ಟದ್ದು ಎಷ್ಟು, ಏನು ಎಂದು ನೋಡದೆ ತೆಗೆದುಕೊಂಡು ಸುಮ್ಮನೆ ಹೊರಟು ಹೋಗುತ್ತಿದ್ದಳು ಹುಡುಗಿ. ನೋಡೋಣ, ... ಇವಳನ್ನು ಪರೀಕ್ಷಿಸೋಣ ಎನ್ನಿಸಿ, ಅಂಗಳ ಸಾರಿಸಿದ ಮತ್ತೊಂದು ದಿನ ಏನನ್ನೂ ಕೊಡಲಿಲ್ಲ. ನಾನು ಹಣ ಕೊಡುತ್ತೇನೆ ಎಂದು ಹುಡುಗಿ ಕಾದು ನಿಲ್ಲಲೂ ಇಲ್ಲ. ಹಣ ಕೊಡಿ ಎಂದು ಕೇಳಲೂ ಇಲ್ಲ. ನೀರು ಕುಡಿದವಳೇ ಕೈಯನ್ನು ತನ್ನ ಹರಕು ಮಾಸಲು ಲಂಗಕ್ಕೆ ಒರೆಸಿಕೊಳ್ಳುತ್ತಾ ಹೊರಟುಹೋದಳು. ಪಾಪ, ಆ ಬಡ ಹುಡುಗಿಯನ್ನು ಬರಿಗೈಯಲ್ಲಿ ಕಳುಹಿಸಿದೆನಲ್ಲಾ ಎಂದು ನಾನೇ ಅಲವತ್ತುಕೊಂಡೆ.

ಮತ್ತೆರಡು ದಿನಗಳ ನಂತರ ಬಂದು, ಮಾಮೂಲಿನಂತೆ ನೀರು ಕೇಳಿ, ಕೈ ತೊಳೆದು, ನೀರು ಕುಡಿದ ಮೇಲೆ ''ಮೊನ್ನೆ ಅಂಗಳ ಸಾರಿಸಿದ್ದಕ್ಕೆ ಏನೂ ಕೊಟ್ಟಿರಲಿಲ್ಲ ತಗೋ,'' ಎಂದೆ. ಕೈ ಮುಂದೆ ಚಾಚಿದಳು. ಐದು ರೂಪಾಯಿ ನೋಟೊಂದನ್ನು ಕೈ ಮೇಲೆ ಹಾಕಿದೆ. ಹುಡುಗಿಗೆ ಆಶ್ಚರ್ಯವಾಗುತ್ತದೆ ಎಂದು ಭಾವಿಸಿದ್ದೆ.

ಇಲ್ಲ, ಎಂಟಾಣೆ ಕೊಟ್ಟಾಗ ಹೇಗೆ ತೆಗೆದುಕೊಂಡಿದ್ದಳೋ ... ಹಾಗೆಯೇ ಈಗ ಐದು ರೂಪಾಯಿ ಕೊಟ್ಟಾಗಲೂ ತೆಗೆದುಕೊಂಡು



ಹೊರಟಳು.

ಹೋಗುತ್ತಿದ್ದ ಹುಡುಗಿಯನ್ನು ನೋಡಿದೆ. ಹರಕು ಹರಕಾಗಿದ್ದ ಮಾಸಲು ಲಂಗ .. ಪಲಕ ... ಪಾಪ .. ಎನ್ನಿಸಿತು. ಹುಡುಗಿ ಇನ್ನೊಮ್ಮೆ ಬಂದಾಗ, ನನ್ನ ಮಗಳ ಹಳೆಯ ಲಂಗ, ಪಲಕ ಕೊಡಬೇಕು ಎಂದುಕೊಂಡೆ.

ಎರಡು ದಿನಗಳ ನಂತರ ಮತ್ತೆ ರಾಗ: ''ಯಪ್ಪಾ ... ತುಸಾ ನೀರು ನೀಡ್ರೀ ...''

ಕೈ ತೊಳೆಯಲು, ಕುಡಿಯಲು ನೀರು ನೀಡಿದ ನಂತರ, ''ಸ್ವಲ್ಪ ನಿಲ್ಲು ... ಬಂದೆ'' ... ಎಂದು ಒಳಗೆ ಬಂದೆ. ಮಗಳ ಹಳೆಯ ಲಂಗ, ಪಲಕ ಆರಿಸಿಕೊಂಡು ಹೊರಗೆ ಹೋದೆ.

ಹುಡುಗಿ ಗೇಟಿನ ಹೊರಗೆ ನಿಂತೇ ಇದ್ದಳು.

''ತಗೋ,'' ಲಂಗ, ಪಲಕ. ಆ ಹುಡುಗಿ ಯತ್ತ ಚಾಚಿದೆ ತೆಗೆದುಕೊಂಡಳು.

ಇಲ್ಲ ... ಕೃತಜ್ಞತೆಯ ಸಂತೋಷದ ಭಾವ ಮುಖದಲ್ಲಿ ಇಲ್ಲವೇ ಇಲ್ಲ. ಎಷ್ಟು ಯೋಚಿಸಿದರೂ ಏಕೆಂದು ಅರ್ಥವಾಗಲಿಲ್ಲ.

ಕೊಟ್ಟ ಲಂಗ ಪಲಕ ಹಿಡಿದುಕೊಂಡು ತಲೆ ತಗ್ಗಿಸಿ ನಡೆದಳು ಹುಡುಗಿ.

ಮಾರನೆಯ ದಿನ ಗೀತಾ ಮಕ್ಕಳೊಂದಿಗೆ ಮರಳಿದಳು. ಸೆಗಣಿ ತಂದು ಹಾಕಿ, ನೀರು ನೀಡ್ರೀ ಎನ್ನುತ್ತಿದ್ದ ಆ ಹುಡುಗಿಯ ವಿಚಾರವನ್ನು ಗೀತಾಳಿಗೆ ಹೇಳಬೇಕೆಂದುಕೊಂಡು. ''ಗೀತಾ, ದಿನಾ 'ಯವ್ವಾ, ತುಸಾ ನೀರು ನೀಡ್ರೀ...' ಅಂತ ಒದರುತ್ತಿದ್ದಳಲ್ಲಾ ... ಒಬ್ಬಳು ಹುಡುಗಿ ...' ಎನ್ನುತ್ತಿದ್ದಂತೆಯೇ ಗೀತಾ, ''ನಿಮಗೂ ಗೊತ್ತಾಯಿತಾ ... ಪಾಪ, ಹಾಗಾಗಬಾರದಿತ್ತು ....'' ಎಂದಳು.

''ಏನು? ಏನಾಯಿತು?'' ಎಂದು ಆತಂಕದಿಂದ ಕೇಳಿದೆ.

''ಪಾಪ, ಸೆಗಣಿ ಅರಸಿಕೊಳ್ಳುವುದಕ್ಕೆ ರಸ್ತೆಯಲ್ಲಿ ಓಡುತ್ತಿದ್ದಳೂಂತ ಕಾಣುತ್ತೆ, ಟ್ರಕ್ಕಿನಡಿ ಸಿಕ್ಕಿ ಪ್ರಾಣಬಿಟ್ಟಳು. ಅದೇ ಶಿವಾಜಿ ಚೌಕದ ಹತ್ತಿರ.''

''ಏನ್ .. ಏನ್ ಹೇಳ್‌ತಿದ್ದೀಯಾ ನೀನು?'' ಕುಮುಟಬಿದ್ದು ಕೇಳಿದೆ ನಾನು.

''ಹೌದ್ರಿ, ಬರೋವಾಗ ರಿಕ್ಷಾ ನಿಲ್ಲಿಸಿ ನಿಂತು ನೋಡಿಕೊಂಡು ಬಂದೆವಲ್ಲಾ ನಾವು ...''

''ಪಪ್ಪಾ, ನಾನು ಮೊದಲು ಹಾಕ್ಕೊಳ್‌ತಿದ್ದೆ ನೋಡು ... ನೀನು ಮಮ್ಮಿ ಪಾಂಡಿಚೇರಿಗೆ ಹೋಗಿದ್ದಾಗ ತಂದಿದ್ದ ಲಂಗ-ಪಲಕ, ಅದನ್ನೇ ತೊಟ್ಟುಕೊಂಡಿದ್ದಳು ಆ ಹುಡುಗಿ ... ಪಾಪ, ತೊಟ್ಟುಕೊಂಡಿದ್ದ ಲಂಗ-ಪಲಕ ಎಲ್ಲಾ ರಕ್ತವೋ ರಕ್ತ. ಮಮ್ಮಿ ಆ ಲಂಗ-ಪಲಕ ಅವಳಿಗೆ ಕೊಟ್ಟಿರಲಿಲ್ಲವಂತೆ ... ಪಪ್ಪಾ .. ನೀನು ಕೊಟ್ಟಿದ್ದೆಯಾ ಅವಳಿಗೆ ...?''

ಏನನ್ನು ಹೇಳಲೂ ನನ್ನಿಂದ ಸಾಧ್ಯವಾಗಲಿಲ್ಲ.

ಒಂದು ಬಗೆಯ ಸಂಕಟ ... ಏನೋ ಅವ್ಯಕ್ತ ವೇದನೆ. ●

---

*ನಿರಾಶಾವಾದಿಯೆಂದರೆ ಸುಸಂಧಿಗಳಲ್ಲಿ ತೊಡಕುಗಳನ್ನು ಕಾಣುವವನು. ಆಶಾವಾದಿಯೆಂದರೆ ತೊಡಕುಗಳಲ್ಲಿಯೂ ಸುಸಂಧಿಗಳನ್ನು ಕಂಡುಕೊಳ್ಳುವವನು.*

- ಎಡ್ಮಿರಲ್ ಮ್ಯಾನ್‌ಸೇಲ್

*ಇಂದು ಇಲ್ಲದ್ದು ನಾಳೆ ಇರಬಹುದು. ಆದ್ದರಿಂದ ಇಲ್ಲದುದಕ್ಕೆ ಚಿಂತಿಸದೆ ಜೀವನವನ್ನು ಸಾಗಿಸು.*

- ಬೇಂದ್ರೆ

ಸಂ. ಭೀಮಸೇನ ಪವಾರ

ಇತ್ತೀಚಿನ ದಿನಗಳಲ್ಲಿ ಅನೇಕ ಜನರು ಹೃದಯಾಘಾತಕ್ಕೆ ತುತ್ತಾಗುತ್ತಿದ್ದಾರೆ. ಅಲ್ಲದೆ ಅನೇಕ ಜನರಲ್ಲಿ ನಾನಾ ರೀತಿಯ ಹೃದಯದ ಬೇನೆ ಉಂಟಾಗುತ್ತಿದೆ. ಇದಕ್ಕೆ ಮುಖ್ಯ ಕಾರಣ ರಕ್ತದಲ್ಲಿರುವ ಕೊಲೆಸ್ಟರಾಲ್ ಪ್ರಮಾಣ ಎಂದು ಅನೇಕ ಸಂಶೋಧನೆಗಳಿಂದ ತಿಳಿದು ಬಂದಿದೆ.

ಸಸ್ಯಾಹಾರಿಗಳಿಗಿಂತ ಮಾಂಸಾಹಾರಿಗಳು ಹೃದಯರೋಗಕ್ಕೆ ತುತ್ತಾಗುವುದು ಹೆಚ್ಚು. ಆದರೆ ಅನೇಕ ಜೀವಸತ್ವಗಳು, ಸಸಾರಜನಕ ಘಟಕ ಮತ್ತು ಕ್ಯಾಲ್ಸಿಯಮ್ ಲವಣದಿಂದ ಕೂಡಿದ ಮೀನನ್ನು (ಮಾಂಸಾಹಾರಿಗಳಿಗೆ) ಒಂದು ಉತ್ತಮ ಪೌಷ್ಟಿಕ ಆಹಾರ ಎಂದು ಪರಿಗಣಿಸಬಹುದು. ಈಗ ಎರಡು ದಶಕಗಳಿಂದ ಮೀನಿನಲ್ಲಿರುವ ಕೊಬ್ಬಿನ ಬಗ್ಗೆ ತೀವ್ರವಾದ ಸಂಶೋಧನೆ ನಡೆಯುತ್ತಿದೆ. ಮೀನನ್ನು ಆಹಾರವನ್ನಾಗಿ ಉಪಯೋಗಿಸುವವರಲ್ಲಿ ಹೃದಯರೋಗ ಅಷ್ಟಾಗಿ ಬರುವುದಿಲ್ಲ; ಅಲ್ಲದೆ ಅವರು ಹೃದಯಾಘಾತಕ್ಕೆ ತುತ್ತಾಗುವ ಸಂಭವ ಕಡಿಮೆ ಎಂದು ಅನೇಕ ಸಂಶೋಧನೆಗಳಿಂದ ತಿಳಿದುಬಂದಿದೆ.

ಮೀನಿನ ಎಣ್ಣೆ-ಆದರಲ್ಲೂ ಮೀನಿನ ಕೊಬ್ಬಿನಲ್ಲಿರುವ ಅಸಂತೃಪ್ತ ಮೇದೋ ಆಮ್ಲಗಳು ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣವನ್ನು ನಿಯಂತ್ರಿಸುತ್ತವೆ ಎಂದು ಇಂಗ್ಲಂಡ್ - ಅಮೇರಿಕಗಳಲ್ಲಿ ನಡೆದ ಇತ್ತೀಚಿನ ಸಂಶೋಧನೆಗಳಿಂದ ವ್ಯಕ್ತವಾಗಿದೆ. ಈ ರೀತಿಯ ಮೇದೋ ಆಮ್ಲಗಳಿಗೆ ($W_3$ fatty acids) ಒಮೆಗ 3 ಮೇದೋ ಆಮ್ಲಗಳು ಎಂದು ಕರೆಯಲಾಗಿದೆ. ಎಲ್ಲ ಜಾತಿಯ ಮೀನುಗಳಲ್ಲೂ ಮೇದೋ ಆಮ್ಲದ ಪ್ರಮಾಣ ಒಂದೇ ಇಲ್ಲ. ಸಾರ್ಡಿನ್ಸ್, ಮ್ಯಾಕರಲ್, ಟ್ಯೂನಾ, ಸಾಲಮನ್ ಜಾತಿಯ ಮೀನುಗಳಲ್ಲಿ ಈ ಆಮ್ಲಗಳು ಹೆಚ್ಚಿನ ಪ್ರಮಾ



ಣದಲ್ಲಿರುತ್ತದೆ. ಈ ಮೀನುಗಳು ಸಮುದ್ರದಲ್ಲಿ ಮಾತ್ರ ದೊರೆಯುತ್ತದೆ ಎಂಬುದು ಗಮನಿಸಬೇಕಾದ ಅಂಶ. ಸಿಹಿನೀರಿನಲ್ಲಿ, ಅಂದರೆ ಕೆರೆ, ನದಿ, ಕಾಲುವೆ ಮುಂತಾದ ಕಡೆ ದೊರೆಯುವ ಮೀನುಗಳಲ್ಲಿ $W_3$ ಮೇದೋ ಆಮ್ಲಗಳ ಪ್ರಮಾಣ ಕಡಿಮೆ.



# ಮೀನಿನಿಂದ ಹೃದಯರೋಗ ನಿವಾರಣೆ

ಬಿ. ಆರ್. ಶ್ರೀನಿವಾಸ

ಆಹಾರದಲ್ಲಿ ಮೀನನ್ನು ಉಪಯೋಗಿಸುವವರು ಹೃದಯಾಘಾತಕ್ಕೆ ತುತ್ತಾಗುವುದು ವಿರಳ. ಅಲ್ಲದೆ ಹೃದಯದ ರೋಗವಿರುವವರು ಇದನ್ನು ನಿತ್ಯ ಸೇವಿಸಿದರೆ ರೋಗ ನಿವಾರಣೆಯಾಗುತ್ತದೆ ಎಂದು ಡಾ. ಬಿ.ಎಲ್.ಬೂರ್ ಎಂಬ ಪ್ರಖ್ಯಾತ ಬ್ರಿಟಿಶ್ ವಿಜ್ಞಾನಿಗಳು ತಿಳಿಸಿದ್ದಾರೆ. ಅಮೇರಿಕದ ಹಾವರ್ಡ್ ವಿಶ್ವವಿದ್ಯಾನಿಲಯದ ಡಾ. ಲೀಫ್ ಅನೇಕ ಪ್ರಯೋಗಗಳಿಂದ ಇದೇ ನಿರ್ಧಾರಕ್ಕೆ ಬಂದಿದ್ದಾರೆ.

ಹೃದಯರೋಗಕ್ಕೆ ತುತ್ತಾಗುವ ಅನೇಕ ಜನರ ದೇಹದಲ್ಲಿ ಕೊಬ್ಬಿನ ಅಂಶ ಹೆಚ್ಚು ಪ್ರಮಾಣದಲ್ಲಿ ಇರುತ್ತದೆ. ರಕ್ತದಲ್ಲಿ ಕೊಲೆಸ್ಟರಾಲ್ ಅಂಶವೂ ಹೆಚ್ಚಾಗಿರುತ್ತದೆ. ದೇಹದ ದೈನಂದಿನ ಕಾರ್ಯಕ್ಕೆ ಕೊಲೆಸ್ಟರಾಲ್ ಅತ್ಯವಶ್ಯಕ. ಆದರೆ ಇದರ ಪ್ರಮಾಣ ದೇಹದ ಬಳಕೆಗಿಂತ ಹೆಚ್ಚಾದಾಗ ರಕ್ತದಲ್ಲಿ ಇದು ಸಂಗ್ರಹಗೊಳ್ಳುವುದು. ಇದಕ್ಕೆ ನಾವು ಸೇವಿಸುವ ಸಂತೃಪ್ತ ಮೇದೋ ಆಮ್ಲಗಳು ಪೂರಕವಾಗಿವೆ. ಅಂದರೆ ನಾವು ಸೇವಿಸುವ ಆಹಾರದಲ್ಲಿ ಅಸಂತೃಪ್ತ ಮೇದೋ ಆಮ್ಲಗಳ ಪ್ರಮಾಣ ಸಂತೃಪ್ತ ಮೇದೋ ಆಮ್ಲದ ಪ್ರಮಾಣಕ್ಕಿಂತ ಕಡಿಮೆಯಾದರೆ ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ ಹೆಚ್ಚಾಗುವುದು. ಇದರಿಂದಾಗಿ ಕಾಲಕ್ರಮೇಣ ಅಪಧಮನಿಗಳ ಗೋಡೆಗಳ ಒಳಪಾರ್ಶ್ವದ ಮೇಲೆ ಕೊಲೆಸ್ಟರಾಲ್ ಸಣ್ಣ ಮುದ್ದೆಗಳಂತೆ ಕೂಡಿಬೀಳುವುದು. ಸ್ವಲ್ಪ ಸಮಯದ ನಂತರ ರಕ್ತನಾಳಗಳು ಮೃದುತ್ವವನ್ನು ಕಳೆದುಕೊಂಡು ಗಟ್ಟಿಯಾಗಿ ಎಥೆರೋಸ್ಕ್ಲೆರೋಸಿಸ್ ಎಂಬ ರೋಗ ಉಂಟಾಗುವುದು. ಇದು ಕಾಲಕ್ರಮೇಣ ಅನೇಕ ರೀತಿಯ ಹೃದಯ ರೋಗಗಳಿಗೆ ಕಾರಣವಾಗುವುದು. ಇದನ್ನು ನಾವು ಸೇವಿಸುವ ಆಹಾರದಿಂದ ನಿಯಂತ್ರಿಸಬಹುದು.

ಮೀನಿನ ಎಣ್ಣೆಯಲ್ಲಿದೆ ಪೂರ್ಣಕಾ

ಎಣ್ಣೆ ಕುಸುಬೆ ಎಣ್ಣೆ, ಮತ್ತು ಸೋಯಾಬೀನಿನ ಎಣ್ಣೆಗಳು ಸಹ ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣವನ್ನು ನಿಯಂತ್ರಿಸುತ್ತವೆ. ಆದರೆ ಒಂದು ಮುಖ್ಯವಾದ ಅಂಶವೆಂದರೆ ಕೊಲೆಸ್ಟರಾಲನ್ನು ನಿಯಂತ್ರಿಸುವ 3 ಮೇದೋ ಆಮ್ಲದ ಪ್ರಮಾಣ ಎಲ್ಲ ಆಹಾರ ಪದಾರ್ಥಗಳಿಗಿಂತ ಮೀನಿನ ಎಣ್ಣೆಯಲ್ಲಿ ಗಣನೀಯ ಪ್ರಮಾಣದಲ್ಲಿ ಇರುತ್ತದೆ ಎಂಬುದು.

ಕೊಬ್ಬರಿ ಎಣ್ಣೆ, ಬೆಣ್ಣೆ, ತುಪ್ಪ, ಕಡಲೆಕಾಯಿ ಎಣ್ಣೆ, ಎಳ್ಳು, ಕೊಬ್ಬರಿಗಳಂತಹ ಆಹಾರ ಪದಾರ್ಥದಲ್ಲಿ ಸಂತೃಪ್ತ ಮೇದೋ ಆಮ್ಲಗಳ ಪ್ರಮಾಣ ಹೆಚ್ಚಾಗಿದ್ದು, ಅವುಗಳನ್ನು ಅತಿಯಾಗಿ ಸೇವಿಸಿದರೆ ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ ಹೆಚ್ಚಾಗುವುದು.

ನಮ್ಮ ದೈನಂದಿನ ಚಟುವಟಿಕೆಗೆ ಮೇದಸ್ಸು ಅತ್ಯವಶ್ಯಕ. ಇದು ನಮ್ಮ ದೇಹಕ್ಕೆ ಅವಶ್ಯವಾದ ಕ್ಯಾಲರಿ, ಅಂದರೆ ಶಕ್ತಿಯನ್ನು ನೀಡಲು ನೆರವಾಗುತ್ತದೆ. ಅಲ್ಲದೇ ಇದು ಜೀವಕೋಶಗಳ ಮತ್ತು ಚರ್ಮದ ಅವಿಭಾಜ್ಯ ಅಂಶ. ಶ್ರಮಜೀವಿಗಳಿಗೆ ಮತ್ತು ಕ್ರಿಡಾಪಟುಗಳಿಗೆ ಇದು ಹೆಚ್ಚು ಪ್ರಮಾಣದಲ್ಲಿ ಬೇಕಾಗುತ್ತದೆ. ಕಚೇರಿಗಳಲ್ಲಿ ಕೆಲಸ ಮಾಡುವವರಿಗೆ, ವ್ಯಾಯಾಮ ಮಾಡಲು ಸಮಯವಿಲ್ಲದ ಕಾರಣ ದೇಹದಲ್ಲಿ ಕೊಬ್ಬಿನ ಅಂಶ ಹೆಚ್ಚಾಗಿ ಬೊಜ್ಜು ಬೆಳೆಯುವುದು ಸ್ವಾಭಾವಿಕ. ಅಂಥವರು ಆಹಾರದಲ್ಲಿ ಸೇವಿಸುವ ಮೇದಸ್ಸನ್ನು ನಿಯಂತ್ರಿಸಬೇಕು. ಆದ್ದರಿಂದ ದೇಹದ ರಚನೆ, ತೂಕ ಮತ್ತು ನಾವು ದೈನಂದಿನ ಜೀವನದಲ್ಲಿ ಮಾಡುವ ದೈಹಿಕ ಶ್ರಮದ ಮೇಲೆ ನಾವು ಎಷ್ಟು ಪ್ರಮಾಣದಲ್ಲಿ ಮೇದಸ್ಸನ್ನು ಸೇವಿಸಬೇಕು ಎಂಬುದು ಅವಲಂಬಿಸಿರುತ್ತದೆ. ಬೊಜ್ಜನ್ನು ಕರಗಿಸಿಕೊಳ್ಳಲು ಕಠಿಣವಾದ ಪಥ್ಯವನ್ನು ಮಾಡಿದರೆ ಬೇರೆ ರೀತಿಯ ರೋಗಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆ. ಹೃದಯರೋಗಕ್ಕೆ ಮಿತಿಮೀರಿ ಮದ್ಯಪಾನ ಮತ್ತು ಮಿತಿಮೀರಿ ಸಿಗರೇಟ್ ಸೇದುವುದು ಪೂರಕ ಎಂದು ತಿಳಿದುಬಂದಿದೆ. ನಮ್ಮ ಆಹಾರ ವಿಹಾರದಲ್ಲಿ ಸಂಯಮವಿದ್ದರೆ ಆರೋಗ್ಯ ಉತ್ತಮವಾಗಿರುತ್ತದೆ.

ಕೊಲೆಸ್ಟರಾಲ್ ಬಿಳುಪಾದ ಮೇಣದಂತಹ ವಸ್ತು. ಇದು ಕೊಬ್ಬಿನೊಂದಿಗೆ ಸುಲಭವಾಗಿ ಬೆರೆಯುತ್ತದೆ. ಆದರೆ ಇದು ರಾಸಾಯನಿಕವಾಗಿಯೂ ಕಾರ್ಯನಿರ್ವಹಣೆಯ ದೃಷ್ಟಿಯಿಂದಲೂ ಮೇದಸ್ಸಿಗಿಂತ ವಿಭಿನ್ನವಾದದ್ದು. ಇದು ನಮ್ಮ ದೇಹದಲ್ಲಿ ಅನೇಕ ಜೀವಕಣದಲ್ಲಿ ಸಂಯೋಜಿಸಲ್ಪಡುತ್ತದೆ. ಹೇರಳವಾಗಿ ಯಕೃತ್ತಿನಲ್ಲಿ ಸಂಯೋಜನೆಯಾಗುತ್ತದೆ. ಈ ಜೈವಿಕ ಘನವಸ್ತು ಜೀವಕೋಶಗಳಲ್ಲಿ ಸತತವಾಗಿ ಸಂಯೋಜನೆ ಹೊಂದಿ ಅನೇಕ ಬದಲಾವಣೆಗಳನ್ನು ಹೊಂದುತ್ತದೆ. ಮಾನವ ದೇಹದಲ್ಲಿ ಉತ್ಪತ್ತಿಯಾಗುವ ಚೋದಕ ಸ್ರಾವಗಳಿಗೆ (Sex hormones) ಇದು ಪೂರ್ವಗಾಮಿ. ದೇಹದ ರಚನೆಯನ್ನು ಹೊಂದಿಕೊಂಡು ಗಂಡಸರಲ್ಲಿ ಅಂಡ್ರೋಜನ್ ಮತ್ತು ಸ್ತ್ರೀಯರಲ್ಲಿ ಎಸ್ಟ್ರೋಜನ್ ಎಂಬ ಚೋದಕ ಸ್ರಾವವಾಗಿ ಪರಿವರ್ತನೆಹೊಂದುವುದು. ಮಿದುಳು ಮತ್ತು ಮಿದುಳು ಬಳ್ಳಿಯ ಹಾಗೂ ನರಮಂಡಲದ ಅವಿಭಾಜ್ಯ ಅಂಗ ಕೊಲೆಸ್ಟರಾಲ್. ನರಮಂಡಲದಲ್ಲಿ ಹರಿಯುವ ತರಂಗವಾಹಿನಿಗೆ ಇದು ಪೂರಕ. ಅಲ್ಲದೆ ನರಮಂಡಲದಲ್ಲಿ ವಿದ್ಯುತ್‌ವಾಹಕದಂತೆ ಹಾಗೂ ವಿಷಯಗ್ರಾಹಿಯಂತೆ ಕಾರ್ಯನಿರ್ವಹಿಸುತ್ತದೆ. ಅಂದಮೇಲೆ ಜೀವಕಣಗಳ ಆರೋಗ್ಯಕ್ಕೆ ಮತ್ತು ದೈನಂದಿನ ಕಾರ್ಯಚಟುವಟಿಕೆಗೆ ಇದು ಅತ್ಯಂತ ಅಮೂಲ್ಯವಾದದ್ದು ಘಟಕ. ಇಂತಹ ಗುಣಗಳಿರುವ ವಸ್ತು ಹಲವು ಸಂದರ್ಭದಲ್ಲಿ ಮಾರಕವಾಗುವುದು ಆಶ್ಚರ್ಯಕರವೆ. ಇದರ ರೂಪರೇಷೆಗಳನ್ನು ತೂಲಂಕುಷವಾಗಿ ಅರಿಯಲು ವಿಜ್ಞಾನಿಗಳು ಸಂಶೋಧನೆ ನಡೆಸುತ್ತಿದ್ದಾರೆ.

ಒಬ್ಬ ಸಾಮಾನ್ಯ ಆರೋಗ್ಯವಂತ ವ್ಯಕ್ತಿಯ ದೇಹದಲ್ಲಿ ಕೊಲೆಸ್ಟರಾಲಿನ ಪ್ರಮಾಣ, ದೇಹದ ಪ್ರತಿ ಕಿಲೋಗ್ರಾಮ್ ತೂಕದಲ್ಲಿ 1.5 ಗ್ರಾಮನ್ನು ಮೀರಬಾರದು. ಅದರಂತೆಯೇ ರಕ್ತ

ದಲ್ಲಿ ಇದರ ಗರಿಷ್ಠ ಪ್ರಮಾಣ ಒಂದು ಮಿಲಿ ಮೀಟರಿಗೆ 280 ಮಿ.ಲಿ. ಗ್ರಾಂ ಮೀರಬಾರದು. ಹಾಗೆಯೆ ಇದರ ಕನಿಷ್ಠ ಪ್ರಮಾಣ ಮಿಲಿಮೀಟರಿಗೆ 150 ಮಿಲಿಗ್ರಾಮುಗಳಷ್ಟು. ರಕ್ತದಲ್ಲಿ ಕೊಲೆಸ್ಟರಾಲ್ ಗರಿಷ್ಠ ಪ್ರಮಾಣವನ್ನು ಮೀರಿದಾಗ ಹೆಚ್ಚಿನ ಕೊಲೆಸ್ಟರಾಲ್ ರಕ್ತನಾಳದ ಅಪಧಮನಿಗಳಲ್ಲಿ ಶೇಖರಿಸಲ್ಪಡುತ್ತದೆ. ಇದರಿಂದಾಗಿ ರಕ್ತನಾಳಗಳು ಪೆಡಸಾಗಿ ರಕ್ತದ ಒತ್ತಡ ಹೆಚ್ಚಾಗುತ್ತದೆ. ಇದರಿಂದ ಹೃದಯ ಹೆಚ್ಚು ಕೆಲಸ ಮಾಡಬೇಕಾಗುವುದು. ಕೊಲೆಸ್ಟರಾಲಿನ ಸಂಗ್ರಹ ಅತಿಯಾದಾಗ ರಕ್ತನಾಳ ಪೂರ್ತಿಯಾಗಿ ಮುಚ್ಚಿ ಹೃದಯಸ್ತಂಭನಕ್ಕೆ ಕಾರಣವಾಗುವುದು.

ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ ಹೆಚ್ಚಾದಾಗ ಗ್ಲಿಸರಾಲ್ ಪ್ರಮಾಣವೂ ಅಧಿಕವಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಸಂತೃಪ್ತ ಮೇದೋ ಆಮ್ಲವನ್ನು ಹೊಂದಿದ ಮೇದಸ್ಸಿನ (ಉದಾ: ಕೊಬ್ಬರಿ ಎಣ್ಣೆ, ಕಡಲೇಕಾಯಿ ಎಣ್ಣೆ, ಬೆಣ್ಣೆ, ತುಪ್ಪ, ಹಾಲು, ಮೊಸರು) ಸೇವನೆಯನ್ನು ವರ್ಜಿಸಬೇಕು. ಅಲ್ಲದೆ ಅಸಂತೃಪ್ತ ಮೇದೋ ಆಮ್ಲಗಳಿರುವ ಮೇದಸ್ಸನ್ನು ಹೆಚ್ಚು ಸೇವಿಸುವುದರಿಂದ ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ ಕ್ರಮೇಣವಾಗಿ ನಿಯಂತ್ರಿಸಲ್ಪಡುತ್ತದೆ. (ಉದಾ: ಮೀನು ಅಥವಾ ಮೀನಿನ ಯಕೃತ್ತಿನ ಎಣ್ಣೆ, ಸೂರ್ಯಕಾಂತಿ ಎಣ್ಣೆ, ಸೋಯಾ ಎಣ್ಣೆ ಇತ್ಯಾದಿ). ಅಸಂತೃಪ್ತ ಮೇದೋ ಆಮ್ಲಗಳಿರುವ ಮೇದಸ್ಸು ರಕ್ತದಲ್ಲಿರುವ ಕೊಲೆಸ್ಟರಾಲ್ ಜೊತೆ ಸಂಯೋಜನಗೊಂಡು ರಕ್ತದಿಂದ ಬೇರೆಯಾಗಲು ನೆರವಾಗುತ್ತದೆ. ಈ ಕಾರ್ಯದಲ್ಲಿ ಮೀನಿನ ಎಣ್ಣೆ ಅತ್ಯಂತ ಫಲದಾಯಕವಾಗಿದೆಯೆಂದು ಇತ್ತೀಚಿನ ಸಂಶೋಧನೆಗಳು ಹೇಳುತ್ತವೆ.

ಹೃದಯರೋಗ ಪ್ರಥಮ ಹಂತದಲ್ಲಿರುವ ರೋಗಿಗಳು ಮೀನನ್ನು ದೈನಂದಿನ ಆಹಾರದಲ್ಲಿ ಸೇವಿಸಿದರೆ ರೋಗ ನಿವಾರಣೆಯಾಗುತ್ತದೆ ಎಂದು ಡಾ. ಬಿ.ಎಲ್.ಬೂರ್ ಎಂಬ ಇಂಗ್ಲಂಡಿನ ಪ್ರಖ್ಯಾತ ಜೀವರಸಾಯನ ತಜ್ಞರು ಹೇಳುತ್ತಾರೆ. ಅಮೇರಿಕದ ಹಾವರ್ಡ್ ವಿಶ್ವವಿದ್ಯಾನಿಲಯದ ಡಾ. ಲೀಫ್, ಅನೇಕ ರೀತಿಯ ಪ್ರಯೋಗಗಳ ಫಲಿತಾಂಶದಿಂದ ಇದೇ ನಿರ್ಧಾರಕ್ಕೆ ಬಂದಿದ್ದಾರೆ. 'ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ' ಎಂಬ ಗಾದೆಯ ಮಾತಿಗೆ ಮೀನು ತಿನ್ನುವವನಿಗೆ ಹೃದಯರೋಗವೂ ಇಲ್ಲ ಎನ್ನುವುದನ್ನೂ ಸೇರಿಸಿದರೆ ಸರಿಯಾದೀತೇನೋ! ■



*ತನ್ನ ಗಂಡ ನಲವತ್ತೆರಡು ಬಾರಿ ಮೀನು ಹಿಡಿಯಲು ಹೋದವ ಎರಡೇ ಮೀನುಗಳನ್ನು ಹಿಡಿದು ಮನೆಗೆ ಮರಳಿದನೆಂಬ ಕಾರಣದಿಂದ ನಾಕ್ಸ್‌ವಿಲೆ ಟೆನೆಸೆಯ ಬೆಸ್ಸಿ ಕಾಪ್ಸ್ ಎಂಬಾಕೆ ವಿಚ್ಛೇದನ ಕೋರಿ ದಾವೆ ಹೂಡಿದಳು.*

*ಬೆಳಗಿನ ನಾಲ್ಕು ಗಂಟೆಗೆ ಪ್ರೊಫೆಸರ್ ಸಾಹೇಬರ ಟೆಲಿಫೋನು ಬಾರಿಸತೊಡಗಿತು. ಗಾಢ ನಿದ್ದೆಯಲ್ಲಿದ್ದ ಅವರು ಎದ್ದು ಅದನ್ನೆತ್ತಿಕೊಂಡು 'ಹಲೋ' ಎಂದು ತಮ್ಮ ಹೆಸರು ಹೇಳಿದರು. ಆಚೆಯಿಂದ ಮಾತಾಡುತ್ತಿದ್ದಾಕೆ ಕೋಪದಿಂದ,*

*"ನಿಮ್ಮ ನಾಯಿಯ ಬೊಗಳುವಿಕೆಯಿಂದ ನನಗೆ ರಾತ್ರಿಯಿಡಿ ನಿದ್ರೆಯಿಲ್ಲ ತಿಳೀತಾ?" ಎಂದಳು.*

*"ಹೌದಾ, ಸಾರಿ. ನಿಮ್ಮ ಹೆಸರು ಹೇಳ್ತೀರಾ? ಅಂಥಾಗೆ ನಿಮ್ಮ ಟೆಲಿಫೋನ್ ನಂಬರು?" ವಿನಯದಿಂದ ಕೇಳಿ ಬರೆದುಕೊಂಡು ಫೋನಿಟ್ಟು ಮಲಗಿದರು.*

*ಮರುದಿನ ಮತ್ತೆ ಬೆಳಿಗ್ಗೆ ನಾಲ್ಕು ಗಂಟೆಯ ಹೊತ್ತಿಗೆ ಆಕೆಯ ಫೋನ್ ಬಾರಿಸಿಕೊಂಡಿತು. ಆಕೆ ಎತ್ತಿಕೊಂಡಳು.*

*"ಹಲೋ, ನಾನು ಪ್ರೊಫೆಸರ್ ಮಾತಾಡ್ತಿರೋದು. ನೀವು ಹೇಳಿದ್ಮೇಲೆ ಬಹಳ ಹುಡುಕಿವೆ. ಆದ್ರೆ ನಾವು ನಾಯಿಯನ್ನ ಸಾಕಿಯೇ ಇಲ್ಲ; ಅಂತ ನನ್ನಾಕೆ ಹೇಳಿದಳಲ್ಲ...."*

*ಪಿ. ಆರ್. ತಿಪ್ಪೇಸ್ವಾಮಿ*



# ಕಲೆಯಲ್ಲಿಯೆ ಪ್ರಾಣಿಗಳನ್ನು ಸೆರೆಹಿಡಿಯುವ ಸೂಫಿ ಅವರು

ಮೃಗ - ಪಕ್ಷಿಗಳ ಚಿತ್ರ ರಚನೆಯಲ್ಲಿ ಸಿದ್ಧಹಸ್ತರೆನಿಸಿದ್ದವರಲ್ಲಿ ಮೈಸೂರಿನ ಎಫ್.ಎಂ.ಸೂಫಿ ಅವರ ಹೆಸರು ಕನ್ನಡ ನಾಡಿನಲ್ಲಿಯೆ ಏಕೆ, ಭಾರತದಲ್ಲೇ ದೊಡ್ಡ ಹೆಸರು. ಎಫ್.ಎಂ.ಸೂಫಿ ಎಂದೇ ಹೆಸರಾದ ಫಕೀರ್ ಮಹಮ್ಮದ್ ಸೂಫಿಯವರು 1988ರ ಜೂನ್ 13ರಂದು ಮೈಸೂರಿನಲ್ಲಿ ತಮ್ಮ 71ನೇ ವಯಸ್ಸಿನಲ್ಲಿ ವಿಧಿವಶರಾದಾಗ ಕಲಾಪ್ರಪಂಚ ಒಂದು ದೊಡ್ಡ ಆಸ್ತಿಯನ್ನೇ ಕಳೆದುಕೊಂಡಂತಾಯಿತು. ಕರ್ನಾಟಕ ರಾಜ್ಯ ಪ್ರಶಸ್ತಿ, ಲಲಿತಕಲಾ ಅಕಾಡೆಮಿ ಪ್ರಶಸ್ತಿ, 1985ರಲ್ಲಿ ದೆಹಲಿಯ ಫೈನ್ ಆರ್ಟ್ಸ್ ಸೊಸಾಯಿಟಿ ಪ್ರಶಸ್ತಿ ಗಳಿಸಿದ್ದ ಸೂಫಿ ಅವರು ತೈಲವರ್ಣ, ಜಲವರ್ಣ ಹಾಗೂ ರೇಖಾ ವಿನ್ಯಾಸಗಳಲ್ಲಿ ತಮ್ಮದೇ ಆದ ಶೈಲಿ

ಯನ್ನು ಪ್ರದರ್ಶಿಸುತ್ತಾ ಬಂದಿದ್ದರು. ಸಂಯೋಜನ ಚಿತ್ರ, ನಿಸರ್ಗಚಿತ್ರ, ರಚನೆಯಲ್ಲಿ ಎಷ್ಟು ಪ್ರಾವೀಣ್ಯವನ್ನು ಗಳಿಸಿದ್ದರೋ ಅದಕ್ಕೂ ಹೆಚ್ಚು ಪ್ರಾವೀಣ್ಯವನ್ನು ರೇಖಾಚಿತ್ರದಲ್ಲೂ ಗಳಿಸಿದ್ದರು. ಬಡತನದಲ್ಲಿ ಹುಟ್ಟಿದರೂ ಕಲಾವಂತಿಕೆಯಿಂದ ತುಳುಕುತ್ತಿದ್ದ ಶ್ರೀಮಂತ ಹೃದಯಗಳ ಪೋಷಣೆಯಲ್ಲಿ ಬೆಳೆದರು. ತಂದೆ ಫಜಲ್ ಅಲಿ, ತಾಯಿ ಅಯಾತ್‌ಬಿ. ತಂದೆ ತಾಯಿಗಳಂತೆ ಇವರೂ ದೈವ ಭಕ್ತರು, ಸಾಧುಸಂಪನ್ನರು. ತಂದೆ ರಚಿಸುತ್ತಿದ್ದ ಕೆಲವು ಬಳ್ಳಿವರಸೆಯ ಚಿತ್ರಗಳಿಂದ ಸೂಫಿ ಅವರ ಎಳೆಯ ಮನಸ್ಸು ಆಕರ್ಷಿತವಾಯಿತು. ಚಿತ್ರಕಲೆಯಲ್ಲಿ ಆಸೆ ಆಕಾಂಕ್ಷೆ ಮೂಡಿತು. ಹೆಚ್ಚಿನ ಸ್ಫೂರ್ತಿ ನೀಡಿದವರು ಮೈಸೂರಿನ ಅರಮನೆಯ ಚಿತ್ರಕಲಾವಿದರಾಗಿದ್ದು ಸೇವೆ ಸಲ್ಲಿಸಿ ನಂತರ ಕಾಬೂಲಿನಲ್ಲಿ ಕಲಾಶಾಲೆ ತೆರೆದ ದಿ. ಅಬ್ದುಲ್ ಅಜೀಜ್. ಅವರ ಗರಡಿಯಲ್ಲಿ ತಯಾರಾದ ಸೂಫಿ ಅವರು ಮೈಸೂರಿನ ಚಾಮರಾಜೇಂದ್ರ ಕರಕುಶಲ ಕಲಾಶಾಲೆಯನ್ನು ಸೇರಿದರು. ಇಲ್ಲಿ ದಿ. ಕೇಶವಯ್ಯ, ದಿ. ಎನ್.ಜಿ.ಟಂಕಸಾಲೆ., ದಿ. ವೇಣುಗೋಪಾಲ ನಾಯ್ಡು ಇವರುಗಳ ಮಾರ್ಗದರ್ಶನ ದೊರೆಯಿತು. ನಾಲ್ಕು ವರ್ಷಗಳಲ್ಲಿ ಕಲಾಭ್ಯಾಸ ಮುಗಿಸಿ ಕಲಾಶಾಲೆಯಿಂದ ಹೊರಬಂದರು.

ಪ್ರಕೃತಿದೇವಿಯ ಪ್ರಫುಲ್ಲ ದೃಶ್ಯಗಳನ್ನೂ ಸ್ವ-ಕಲ್ಪಿತ ಚಿತ್ರಗಳನ್ನು ತಾವು ಅಭ್ಯಸಿಸಿದ ಪ್ರಾಣಿಗಳನ್ನು ಬಹು ಹೃದಯಂಗಮವಾಗಿ ಚಿತ್ರಿಸುತ್ತಾ ಬಂದರು. ಮೈಸೂರಿನ ಮೃಗಾಲಯವನ್ನು ಮನೆಯಂತೆ ಭಾವಿಸಿ ಅಲ್ಲಿನ ಎಲ್ಲ ಬಗೆಯ ಮೃಗ, ಪ್ರಾಣಿ, ಪಕ್ಷಿಗಳನ್ನು ಚಿತ್ರಿಸುವ ಮರ್ಮವನ್ನು ಎರಡು ವರ್ಷಗಳ ಕಾಲ ವಿದ್ಯಾರ್ಥಿಯಂತೆ ಅಭ್ಯಸಿಸಿದರು. ವನ್ಯ ಜೀವಿಗಳ ಬಗ್ಗೆ ಹಾವ, ಭಾವ, ಬೆಡಗುಗಳನ್ನು ಕರಗತ ಮಾಡಿಕೊಂಡು ಅವುಗಳತ್ತ ಕಲೆಯಲ್ಲಿ ಅಭಿವ್ಯಕ್ತಿಸಲು ಇವರು ಹಗಲಿರುಳು ಶ್ರಮಿಸಿದರು.

ಹೆಚ್ಚಿನ ಕಲಾಭ್ಯಾಸಕ್ಕಾಗಿ ಮುಂಬಯಿಗೆ ಹೋಗಿ ಅಲ್ಲಿ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಸೇರಲು ಪ್ರಯತ್ನಿಸಿದಾಗ ಸುಲಭವಾಗಿ ಅವಕಾಶ ದೊರಕಲಿಲ್ಲ. ಬ್ರಿಟಿಷ್ ಇಂಡಿಯಾ ಪ್ರೆಸ್ಸಿನಲ್ಲಿ ರೇಖಾಚಿತ್ರಗಳನ್ನು ರಚಿಸಿಕೊಡುವ ಉದ್ಯಮಕ್ಕೆ ಸೇರಿ ಕೈ ಕುದುರಿಸಿಕೊಂಡರು. ನಂತರ ಮೈಸೂರು ಸರ್ಕಾರದ ವಿದ್ಯಾರ್ಥಿ ವೇತನ ದೊರೆತು, ತಮ್ಮ ಆಸೆಯಂತೆ 1936ರಲ್ಲಿ



ಕಲಾಶಾಲೆ ಸೇರಿದರು. ಅಲ್ಲಿ ನಾಲ್ಕನೆಯ ವರ್ಷದ ತರಗತಿಯಲ್ಲಿ ಪ್ರಥಮ ಬಹುಮಾನ ಗಳಿಸಿದರು. ಸೂಫಿಯವರಲ್ಲಿನ ಕಲೆ ಅಲ್ಲಿ ನಿರ್ದೇಶಕರಾಗಿದ್ದ ಜೆ.ಡಿ.ಜರಾಲ್ಡರ್ ಮತ್ತು ಕಲಾಧ್ಯಾಪಕರಾಗಿದ್ದ ಭೋಸ್ಲೆ ಅವರ ದೃಷ್ಟಿಗೆ ಬಿದ್ದು ಹೆಚ್ಚಿನ ಪ್ರೀತಿಗೆ ಪಾತ್ರರಾದರು. ಬಿಡುವಿನ ವೇಳೆಯಲ್ಲಿ ಮುಂಬಯಿಯ ಸುಪ್ರಸಿದ್ಧ ಚಿತ್ರಕಾರ ಸರ್ದಾರ್ ಸಿಂಗ್ ಅವರಲ್ಲಿ ಕಲಾಭ್ಯಾಸ ನಡೆಸುತ್ತಾ ಬಂದರು. ಸೂಫಿಯವರು ಎಂದೂ ಒಂದು ಗಳಿಗೆಯನ್ನೂ ವ್ಯರ್ಥವಾಗಿ ಕಳೆದವರಲ್ಲ.

ಸಂಜೆಯ ವೇಳೆ ಸಮುದ್ರದ ತೀರದಲ್ಲೋ ಹತ್ತಿರದ ಮಸೀದೆಯ ಮೂಲೆಯಲ್ಲೋ ಕುಳಿತು ರೇಖಾಚಿತ್ರಗಳನ್ನು ಬಿಡಿಸುತ್ತಾ ತಮ್ಮ ಕೆಲಸದಲ್ಲಿ ತಲ್ಲೀನರಾಗಿರುತ್ತಿದ್ದರು. 1936ರಲ್ಲಿ ಕಲಾಶಾಲೆಯಿಂದ ಅಜಂತಾ ಎಲ್ಲೋರಾ ಕಲಾಕೇಂದ್ರಗಳಿಗೆ ಪ್ರವಾಸ ಹೋಗಿ ಕಲಾಭ್ಯಾಸ ಮಾಡಿ ಬರುವ ಅವಕಾಶವೂ ದೊರೆಯಿತು. ಅಲ್ಲಿನ ಭಾರತೀಯ ಚಿತ್ರ - ಶಿಲ್ಪ ಕಲೆ ಪಾಶ್ಚಿಮಾತ್ಯರ ಕಲೆಗಿಂತ ಹಿರಿದಾದುದು ಎಂಬುದು



ಅವರಿಗೆ ಮನದಟ್ಟಾಯಿತು.

ಸೂಫಿ ಅವರು ಅವಿಶ್ರಾಂತವಾಗಿ ಅಭ್ಯಸಿಸಿ ಜೆ.ಡಿ. ಪದವಿಯನ್ನು ಪಡೆದು ಮೈಸೂರಿಗೆ ಹಿಂತಿರುಗಿದರು. ತಾವು ಕಲಿತ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಕಲಾಧ್ಯಾಪಕರಾಗುವ ಅವಕಾಶ ದೊರೆಯಿತು. ಇಲ್ಲಿ ಹಿರಿಯ ಕಲಾವಿದರೂ ಸಹೋದ್ಯೋಗಿಗಳೂ ಆಗಿದ್ದ ವೈ.ಸುಬ್ರಹ್ಮಣ್ಯ ರಾಜು, ಹಾಗೂ ದಿ. ಎಸ್.ನಂಜುಂಡಸ್ವಾಮಿ ಜೊತೆ ಪಿ.ಎಸ್.ಪುಣಚಿತ್ತಾಯ, ಜಿ.ಎಸ್. ಶೆಣೈ, ಕೆ.ವಿಠಲ ಭಂಡಾರಿಯವರಂತಹ ನೂರಾರು ವಿದ್ಯಾರ್ಥಿಗಳಿಗೆ ತಾವು ಕಲಿತ ಕಲೆಯನ್ನು ಧಾರೆಯೆರೆದರು.

ಪ್ರಾಣಿ - ಪಕ್ಷಿಗಳ ಚಿತ್ರರಚನೆಯಲ್ಲಿ ಸಿದ್ಧ







ಹಸ್ತರೆಂದು ಹೆಸರುಗಳಿಸಿದ್ದ ಸೂಫಿ ಅವರು ಕಲೆಯಲ್ಲಿ ಹೊಸದನ್ನು ಬಯಸುತ್ತಿದ್ದರು. ಮೂಢನಂಬಿಕೆಗಳ ವಿರೋಧಿ. ಜನರ ಸುಖ, ದುಃಖ, ಸತ್ಯ, ಸೌಂದರ್ಯ ಜೀವನದ ಘಟನೆಗಳಲ್ಲಿ ಆಸಕ್ತಿ ತೋರಿ ಅಂತಹ ನೋಟಗಳನ್ನು ಕಲೆಯ ಮೂಲಕ ಅಭಿವ್ಯಕ್ತಿಗೊಳಿಸಲು ಹಾತೊರೆಯುತ್ತಿದ್ದರು. ಅವರು ಬಡತನದಲ್ಲಿ ಬೆಂದರೂ ಯಾವ ರೀತಿಯ ಆಸೆ ಆಮಿಷಗಳಿಗೂ ಮಾರುಹೋಗುತ್ತಿರಲಿಲ್ಲ. ಶಾಂತಚಿತ್ತರೂ, ದೈವಭಕ್ತರೂ ಆದ ಅವರು ಸದಾ ಹಸನ್ಮುಖಿಗಳಾಗಿ ಸರಳ ಉಡುಪಿನಿಂದ ಎದ್ದು ಕಾಣುತ್ತಿದ್ದರು.

ಸೂಫಿ ಅವರದು ದೊಡ್ಡ ಸಂಸಾರ. ಮನೆ ತುಂಬ ಮಕ್ಕಳು ಇಬ್ಬರು ಕಲಾವಿದರು. ಕಲಾಶಾಲೆಯಿಂದ ನಿವೃತ್ತರಾದ ಮೇಲೆ ಇದ್ದ ಒಂದು ಪುಟ್ಟ ಮನೆಯೂ ಭೋಗ್ಯಕ್ಕೆ ತುತ್ತಾಯಿತು. ಈಗ ಬಾಡಿಗೆ ಮನೆಯೆ ಅವರಿಗೆ ಆಶ್ರಯ ಸ್ಥಾನ. ಅಲ್ಲೇ ಕಲಾಶಾಲೆ. ಅವರಿದ್ದ ಮನೆ ಬಿಡುವಂತೆ ಮಾಲಿಕನಿಂದ ಒತ್ತಾಯ. ಬೇರೆ ಮನೆ ಹಿಡಿಯಲು ದುಡ್ಡಿಲ್ಲ. ಒಂದು ತಿಂಗಳ ಅವಧಿ ಪಡೆದರು. ಆ ಅವಧಿಗೆ ಸರಿಯಾಗಿ ಮನೆಯನ್ನು ಬಿಟ್ಟರು. ಬಿಡುವಾಗ ಮನೆಯ ಬಾಗಿಲಿಗೆ ಒಂದು ಚೀಟಿಯನ್ನು ಅಂಟಿಸಿದರು, ''ನಿಮಗೆ ತಿಳಿಸಿದಂತೆ ಈ ದಿನ ಮನೆ ಖಾಲಿ ಮಾಡಿದ್ದೇನೆ. ನೀವು ಸುಖವಾಗಿ ಬಾಳಿ, ವಂದನೆಗಳು.'' ಇವರ ಸಜ್ಜನಿಕೆಯ ಸ್ವಭಾವಕ್ಕೆ ಬೇರೆ ಉದಾಹರಣೆ ಬೇಕೆ? ಇದನ್ನು ನೋಡಿದ ಮಾಲಿಕನಿಗೆ ಪಶ್ಚಾತ್ತಾಪವಾಯಿತು. ಸೂಫಿ ಮತ್ತು ಮಾಲಿಕನ ಹೃದಯಗಳು ಒಂದಾದವು.

ಸೂಫಿ ಅವರು ವರ್ಣಗಳಲ್ಲಿ ಸಹತೆಯನ್ನು ಮೆರೆಯುವುದರ ಜೊತೆಗೆ ಕೇವಲ ರೇಖೆಗಳಲ್ಲೂ ಅದನ್ನೂ ತರುತ್ತಿದ್ದರು. ಆಯಾ ಪ್ರಾಣಿ ಪಕ್ಷಿಗಳಲ್ಲಿ ಕಂಡುಬರುವ ಗುಣಗಳನ್ನು ಕೇವಲ ಕೆಲವೆ ರೇಖೆಗಳಲ್ಲಿ ಮೂಡಿಸುತ್ತಿದ್ದರು. ಸೂಫಿಯವರು ಅಧ್ಯಾಪಕ ವೃತ್ತಿಯಿಂದ ನಿವೃತ್ತರಾದ ಮೇಲೆ ಇನ್‌ಲೇ ಕಲೆಗೆ ಇವರ ರೇಖಾಚಿತ್ರ ಕಲೆ ಜೀವ ತುಂಬುತ್ತಾ ಬಂದಿತು. ಅನ್ಯರನ್ನು ನಂಬಿ ಕಲಾಶಾಲೆ ತೆರೆಯಲು ಹೋಗಿ ಕೈ ಸುಟ್ಟುಕೊಂಡು, ಮನಸ್ಸು ಮುದುಡಿಕೊಂಡರು. ಕೊನೆಗಾಲದಲ್ಲವರು ಮೃಗಪಕ್ಷಿಗಳ ರೇಖಾಚಿತ್ರ

ರಚಿಸುತ್ತಾ ಬಂದರು. ಆ ಪೈಕಿ ಕೆಲವು ಪ್ರಕಟಣೆ ಕಾಣದೆ ಅನ್ಯರ ಮನೆ ಸೇರಿರುವುದು ಸಂಕಟದ ವಿಚಾರ.

ಅವರ ಚಿತ್ರಗಳು ಮೈಸೂರಿನ ಜಗನ್ಮೋಹನ ಅರಮನೆ, ಕರ್ನಾಟಕ ಲಲಿತಕಲಾ ಅಕಾಡೆಮಿಗಳಲ್ಲಲ್ಲದೆ ದೇಶ-ವಿದೇಶಗಳಲ್ಲೂ ರಾರಾಜಿಸುತ್ತಿವೆ. ಇವರಿಗೆ ಹೆಸರು ತಂದ ಚಿತ್ರಗಳೆಂದರೆ 'ಜಿಪ್ಸಿ ಕುಕ್ಕರ್' 'ದಿ ರೆಸ್ಟ್' 'ಆನ್ ದಿ ಅಲರ್ಟ್' 'ಬ್ಲೂ ಪೀಕಾಕ್' ಮೊದಲಾದವು. ವರ್ಣವಿನ್ಯಾಸ ಬೆಳಕು ಕತ್ತಲು ಗಾಳಿ ವಾತಾವರಣ ದಿಗಂತ ಸ್ವಚ್ಛ ಛಾಯೆ ಎಲ್ಲ ದೃಷ್ಟಿಯಲ್ಲೂ ಇವುಗಳು ಶ್ರೇಷ್ಠವಾಗಿವೆ.

'ದಿ ರೆಸ್ಟ್' ಎಂಬುದರಲ್ಲಿ ಒಂದು ಜೊತೆ ಬಿಳಿ ನವಿಲುಗಳು ತಮ್ಮ ಪುಕ್ಕಗಳನ್ನು ಕೆದರಿಕೊಂಡು ಲವಲವಿಕೆಯಿಂದ ವಿಶ್ರಾಂತಿ ಪಡೆಯುವುದೋ ಎನ್ನುವಂತಹ ತೈಲವರ್ಣ ಚಿತ್ರ. ಇಲ್ಲಿ ಈ ನವಿಲುಗಳು ಒಂದು ಇನ್ನೊಂದನ್ನು ಪ್ರೇಮ ದೃಷ್ಟಿಯಿಂದ ನೋಡುತ್ತಿವೆ.

ಉದ್ಯಾನವನದಲ್ಲಿ ಕಂಡುಬರುವ ಮರ, ಬಳ್ಳಿ, ಪೊದೆ, ಪುಷ್ಪ, ರೆಂಬೆ, ಕೊಂಬೆ, ಎಲೆ, ಗರಿ, ಹಣ್ಣು, ಹಸುರು, ಹುಲ್ಲು ಎಲ್ಲವೂ ಅವರ ಚಿತ್ರಗಳಲ್ಲಿ ಬಹು ಸ್ವಾಭಾವಿಕವಾಗಿ ನಿಸರ್ಗದ ರಚನೆಯಂತೆ ಇವೆ. ಚಿತ್ರ ಎಷ್ಟಾದರೂ ಕೃತಕ ನಿಜ. ಆದರೆ ಇಲ್ಲಿ ನವಿಲುಗಳ ಸೃಷ್ಟಿ ನಿಜವಾಗಿಯೂ ಅಪ್ರತಿಮ. ಇದೇ ತೆರನಾದ ಮೂರು ಬಿಳಿಯ ನವಿಲುಗಳು ಹುಲ್ಲು ಹಾಸಿನ ಮೇಲೆ ಉಲ್ಲಾಸವಾಗಿ ಪ್ರಕೃತಿಯ ಬೆಡಗಿಗೆ ಮನ ಸೋತಂತೆ ಹರ್ಷಪೂರ್ಣವಾದ ನೋಟವನ್ನೂ ಬೀರುವ ಬಗೆ ಯಾರನ್ನಾದರೂ ಮುಗ್ಧಗೊಳಿಸುವಂತಿದೆ.

ಇನ್ನೊಂದು ಚಿತ್ರದಲ್ಲಿ ವನರಾಣಿಯೊಬ್ಬಳು ನವಿಲೊಂದನ್ನು ಹಿಡಿದುಕೊಂಡು ಮರದ ನೆರಳನ್ನಾಶ್ರಯಿಸಿ ನಿಂತಿರುವ ಗಂಭೀರ ರೀವಿಯನ್ನು ಚಿತ್ರಿಸುವಲ್ಲಿ ಸೂಫಿ ತಮ್ಮ ಕಲಾಪ್ರೌಢಿಮೆಯನ್ನು ವ್ಯಕ್ತಪಡಿಸಿದ್ದಾರೆ. ಅವಳ ಮುಖ ಭಾವ ಉಡಿಗೆತೊಡಿಗೆ ಮೈಬಣ್ಣ ಸನ್ನಿವೇಶಕ್ಕೆ ತಕ್ಕಂತೆ ಚಿತ್ರಿತವಾಗಿರುವ ಮಾಟದ ಶರೀರ ಮುಂತಾದವುಗಳಲ್ಲಿ ಸೂಫಿ ಅವರ ಕೈಚಳಕ ವ್ಯಕ್ತವಾಗುತ್ತದೆ. ನಿಬಿಡವಾದ ಕಾನನದ ಸಂದಿಯಿಂದ ತೂರಿಬಂದ ಹೊಂಗಿರಣಗಳು ಆಕೆಯ ಶರೀರ ಕಾಂತಿಯನ್ನೂ ಹೆಚ್ಚಿಸುವಂತಿವೆ.

'ದಿ ಅಲರ್ಟ್' ಎಂಬುದು ಭಯಂಕರ ಸನ್ನಿವೇಶವನ್ನು ತೋರಿಸುವ ಚಿತ್ರವಾದರೂ ಒಂದು ರಮ್ಯವಾದ ಅಗಾಧತೆ ಇದೆ ಅದರಲ್ಲಿ. ಕಗ್ಗತ್ತಲೆಯ ದಟ್ಟಕಾಡಿನಲ್ಲಿ ಸೂರ್ಯ ಕಿರಣಗಳು ಯಾವ ಸಂದಿಯಿಂದಲೊ ತೂರಿ ಬಂದು, ನೀಳವಾಗಿ ನಿಂತ ನೀರಿನ ಮೇಲೂ ದಾಹದ ಬಾಧೆಯಿಂದ ಬಳಲಿ ನೀರು ಕುಡಿಯಲು ಬಂದ ಚಿರತೆಯ ಕಾತರಭಾವ ಮುಖದ ಮೇಲೂ ಮೂಡಿದೆ. ಚಿರತೆಯ ಪ್ರತಿಬಿಂಬವು ನಿಂತ ನೀರಿನಲ್ಲಿ ಅಚ್ಚಳಿಯದೆ ಕಾಣುವ ಸ್ವರೂಪ ಸ್ವಾಭಾವಿಕವಾಗಿದೆ. ಆ ಚಿತ್ರವಿಂದು ಹೈದರಾಬಾದಿನ ಶ್ರೀಮಂತರೊಬ್ಬರ ಮನೆಯಲ್ಲಿ ಶೋಭಿಸುತ್ತಿದೆ.

ಅವರ ಮೃದು-ಮಧುರವಾಣಿಯಂತೆಯೇ ಅವರ ಕಲಾಕೃತಿಗಳೂ ಮನಸ್ಸಿಗೆ ಮುದವನ್ನು ತರುವಂಥವುಗಳೆ. ನಿಜವಾದ ಅರ್ಥದಲ್ಲಿ ಗುರುಗಳಾಗಿದ್ದರು, ಹಿರಿಯ ಕಲಾವಿದರಾಗಿದ್ದರು ಎಫ್.ಎಂ.ಸೂಫಿ.

---

*ಹಣವೆ ಸರ್ವಸ್ವವಲ್ಲ. ಈ ಬೆಲೆಯೇರಿಕೆಯ ದಿನಗಳನ್ನು ನೋಡಿದರೆ ಮುಂದೊಮ್ಮೆ ಹಣ 'ಏನೂ ಅಲ್ಲ'' ಎನ್ನುವಂತಾಗಬಹುದು.*

*ಕಾರ್ಯತತ್ಪರತೆ ಜೀವನವಾಗಿದ್ದರೆ ಪ್ರಶಂಸೆಯೂ, ಸೋಮಾರಿಯಾಗಿದ್ದರೆ ಪ್ರಹಾರವೂ ಸ್ವತಃ ಸಿದ್ಧ.*

# ಮಣ್ಣೇ ನಿನ್ನಯ ಗುಣ.........

ಕೆ.ವೆಂಕಣ್ಣಾಚಾರ್

ಸಾನ್ ಪೆಡ್ರೊ ಡೆಲ್ ಪಿನಾಟರ ಎಂಬುದು ಉತ್ತರ ಸ್ಪೇನಿನ ಮೈನರ್ ಸಮುದ್ರದ ತೀರದಲ್ಲಿರುವ ಒಂದು ಗ್ರಾಮ. ಈಚೆಗೆ ಈ ಸಣ್ಣ ಗ್ರಾಮಕ್ಕೆ ಬರುವ ವರ ಸಂಖ್ಯೆ ಹೆಚ್ಚುತ್ತಿದೆ. ಆಳವಿಲ್ಲದ ಇಲ್ಲಿನ ಖಾರಿಯ ತಳದ ಮಣ್ಣಿಗೆ ಸಂಧಿವಾತ, ಕೀಲುಬಾಧೆ ಮೊದಲಾದ ಮೂಳೆ ಸಂಬಂಧಿ ರೋಗಗಳನ್ನು ಪರಿಹರಿಸುವ ಗುಣ ಇದೆಯೆಂಬ ಸುದ್ದಿ ಹರಡಿದ್ದೇ ಜನರ ಈ ಬರುವಿಕೆಗೆ ಕಾರಣ.

ರೋಮನ್ ಸಾಮ್ರಾಜ್ಯದ ಕಾಲದಲ್ಲಿ ಇಲ್ಲಿನ ಖಾರಿಗಳ ನೀರನ್ನು ತೀರದ ತೊಟ್ಟಿಗಳಿಗೆ ಹಾಯಿಸಿ ಸೂರ್ಯನ ಶಾಖದಿಂದ ಆವಿಯಾಗಿಸಿ ಉಪ್ಪನ್ನು ತಯಾರಿಸುವ ಕಾಯಕ ನಡೆಯುತ್ತಿತ್ತು. ಈ ಶತಮಾನದ ಆದಿಯಲ್ಲಿ ಇಂಥ ತೊಟ್ಟಿಗಳ ಅಡಿಯಲ್ಲಿ ಸಂಗ್ರಹವಾಗುತ್ತಿದ್ದ ಮಡ್ಡಿಮಣ್ಣಿನ ರೋಗನಿವಾರಕ ಗುಣವು ವಿಚಿತ್ರ ರೀತಿಯಲ್ಲಿ ಪ್ರಕಟವಾಯಿತು.

ಈ ಸ್ಥಳದಲ್ಲಿ ಉಪ್ಪನ್ನು ತಯಾರಿಸುವ ಕೆಲಸ ಮಾಡುತ್ತಿದ್ದ ಕಾರ್ಮಿಕನೊಬ್ಬನಿಗೆ ತೀವ್ರವಾದ ಸಂಧಿವಾತವಿತ್ತು. ವೈದ್ಯರು ಅದು ವಾಸಿಯಾಗದ ರೋಗವೆಂದು ಸಾರಿದ್ದರು. ಆತನು ಒಂದುದಿನ ಇಲ್ಲಿನ ಮಡ್ಡಿಮಣ್ಣಿನಲ್ಲಿ ಬಹುಕಾಲ ನಿಂತು ಕೆಲಸ ಮಾಡ ಬೇಕಾಯಿತು. ಕೆಲಸವಾದಾಗ ಸಂಧಿವಾತವು ತಹಬಂದಿಗೆ ಬಂದುದು ಅವನಿಗೆ ಅನುಭವವಾಯಿತು. ಇದರಿಂದ ಪ್ರೇರಿತನಾದ ಆ ಕಾರ್ಮಿಕ ಅನೇಕ ದಿನಗಳ ಕಾಲ ಇದೇ ಮಡ್ಡಿಯಲ್ಲಿ ಕಂಠಮಟ್ಟ ಬರುವಂತೆ ನಿಂತ. ಇದರ ಪರಿಣಾಮವಾಗಿ ಏನೇನೋ ಮಾಡಿದರೂ ವಾಸಿಯಾಗದಿದ್ದ ಅವನ ಸಂಧಿತವಾತ ಹೇಳಹೆಸರಿಲ್ಲದಂತೆ ಗುಣವಾಯಿತು. ಈ ವಿಚಾರ ತಿಳಿದ ಸಂಧಿವಾತರೋಗಿಗಳು ತಾವೂ ಅದೇ ರೀತಿ ಮಾಡಿ ಸಂಕಟಕಾರಿ ಸಂಧಿವಾತದಿಂದ ಪಾರಾದರು. ಕ್ರಮೇಣ ಸಾನ್ ಪೆಡ್ರೊ ಸಂಧಿವಾತರೋಗಿಗಳಿಗೆ ಯಾತ್ರಾಸ್ಥಳದಂತಾಯಿತು. ಅನೇಕ ಹೆಸರಾಂತ ಡಾಕ್ಟರುಗಳು ಕೈಮೀರಿದ ರೋಗಿಗಳಿಗೆ ಸಾನ್ ಪೆಡ್ರೊದಲ್ಲಿ ಮಡ್ಡಿಮಣ್ಣು ಚಿಕಿತ್ಸೆ ಪಡೆಯಲು ಸಲಹೆ ಮಾಡುವಂತಾಯಿತು.

ಸ್ಪೇನಿನ ರಾಜಧಾನಿ ಮಡ್ರಿಡ್‌ನ ಖ್ಯಾತ ಸಂಧಿವಾತ ತಜ್ಞ ಡಾ. ಆಗಸ್ಟೋಮಾಸರು "ಸಾನ್ ಪೆಡ್ರೋದ ಮಡ್ಡಿ ಮಣ್ಣಿನ ಚಿಕಿತ್ಸೆಯಿಂದ ಕೀಲುರೋಗ ಹಾಗೂ ಸಂಧಿವಾತ ಖಂಡಿತವಾಗಿ ವಾಸಿಯಾಗುತ್ತಿರುವಾಗ

(ಸಾಧಾರ)

ಬೇರೆ ಚಿಕಿತ್ಸೆ ಏಕೆ ಬೇಕು ?' ಎಂದು ಕೇಳುತ್ತಾರೆ.

ಲಾಮಂಚ ಎಂಬ ಹಳ್ಳಿಯ ಬೇಸಾಯಗಾರ ಅಂಟೋನಿಯಾ ಬೆಲ್ಲಾ "ನಾನು ಪ್ರತಿವರ್ಷವೂ ಸುಮಾರು ಎರಡು ವಾರಗಳಷ್ಟು ಕಾಲ ಇಲ್ಲಿದ್ದು ದಿನವೂ ಹಲವಾರು ಗಂಟೆಗಳಷ್ಟು ಸಮಯ ಇಲ್ಲಿನ ಮಡ್ಡಿಯ ರಾಡಿಯಲ್ಲಿ ನಿಲ್ಲುತ್ತೇನೆ. ಇದರಿಂದ ವರ್ಷದಲ್ಲಿ ಉಳಿದಕಾಲ ಸಂಧಿತವಾತ ನನ್ನ ಸನಿಹದಲ್ಲೂ ಸುಳಿಯುವುದಿಲ್ಲ" ಎನ್ನುತ್ತಾನೆ.

ಉದ್ಯಮವೊಂದರ ಕಾರ್ಯದರ್ಶಿನಿ ಎಲೆನಾ ಸಂಜುವಾನಾ ಸಾನು "ಆಗಾಗ ಸಾನ್ ಪೆಡ್ರೊಗೆ ಬಂದು ದೇಹದ ಎಲ್ಲಾ ಭಾಗಗಳಿಗೂ ಇಲ್ಲಿನ ಮಡ್ಡಿ ಮಣ್ಣನ್ನು ಬಳಿದುಕೊಳ್ಳುತ್ತೇನೆ. ಅದರಿಂದ ನನ್ನ ಚರ್ಮವು ವಿಶಿಷ್ಟ ಕಾಂತಿಯನ್ನೂ ಅಂದವನ್ನೂ ಪಡೆಯುತ್ತದೆ. ಇಲ್ಲಿನ ಖಾರಿಯ ಕೆಲ ಪ್ರದೇಶಗಳಲ್ಲಿ ನೀರು ಬಿಸಿಯಾಗಿದ್ದು ಕ್ಷಾರಯುಕ್ತವಾಗಿರುತ್ತದೆ. ಅದರಲ್ಲಿ ಅರ್ಧತಾಸು ನಿಲ್ಲುತ್ತೇನೆ. ಆಗ ನನ್ನ ಮೈಯೆಲ್ಲಾ ಚುಚ್ಚಿದಂತಾಗಿ ಜರ್ರನೆ ಬೆವರು ಹರಿಯುತ್ತದೆ. ಈ ಉಪಚಾರದಿಂದ ನನ್ನ ಆರೋಗ್ಯ ಸುಧಾರಿಸುತ್ತದೆ. ದೇಹದ ಲವಲವಿಕೆ ಹೆಚ್ಚುತ್ತದೆ" ಎನ್ನುತ್ತಾರೆ.

ಈ ಪ್ರದೇಶದ ನೀರು ಹಾಗೂ ಮಡ್ಡಿ ಮಣ್ಣುಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿರುವ ಸ್ಪೇನಿನ ಸ್ಪಾನಿಷ್ ಸಾಗರ ಸಂಶೋಧನಾ ಸಂಸ್ಥೆಯು ವರದಿಯೊಂದನ್ನು ಪ್ರಕಟಿಸಿದೆ. ಅದರ ಪ್ರಕಾರ ಇಲ್ಲಿನ ನೀರು ಹಾಗೂ ಮಣ್ಣುಗಳಲ್ಲಿ ಸೇಂದ್ರಿಯ ವಸ್ತುಗಳು ಹಾಗೂ ಗಂಧಕ ಅಧಿಕ ಪ್ರಮಾಣದಲ್ಲಿರುವುದು ಗೊತ್ತಾಗುತ್ತದೆ. ಈ ವಸ್ತುಗಳು ದೇಹದ ಸಂಪರ್ಕಕ್ಕೆ ಬಂದಾಗ ಚರ್ಮ ಹಾಗೂ ಅದರ ಆಸುಪಾಸಿನ ಅಂಗಾಂಗಗಳು ಶುಷ್ಕವಾಗುವುದರಿಂದ ಸಂಧಿವಾತ ಹಾಗೂ ಕೀಲು ನೋವು ಇಲ್ಲವಾಗುತ್ತವೆ. ಬಿಸಿಯಾಗಿರುವ ಹಾಗೂ ಕ್ಷಾರಯುಕ್ತ ನೀರು ಸ್ವೇದಗ್ರಂಥಿಗಳನ್ನು ಪ್ರಚೋದಿಸುತ್ತವೆ. ಅದರಿಂದಾಗಿ ಬೆವರು ಹರಿದು ದೇಹದಲ್ಲಿ ಸೇರಿರುವ ಕಶ್ಮಲಗಳು ಹೊರಕ್ಕೆ ಸಾಗಿ ಶರೀರವು ಲಘುವಾಗುತ್ತದೆ.

ಸಾನ್ ಪೆಡ್ರೋಕ್ಕೆ ಇನ್ನೂ ಒಂದು ಆಕರ್ಷಣೆಯಿದೆ. ಇಲ್ಲಿ ಚಿಕಿತ್ಸೆ ಪಡೆಯಲು ಬಲು ಕಡಿಮೆ ಖರ್ಚು ತಗಲುತ್ತದೆ. ಊಟ, ವಸತಿ ಮೊದಲಾದವು ಮಿತವ್ಯಯದಲ್ಲಿ ಲಭ್ಯವಾಗುತ್ತವೆ. ರೋಗವು ಬಹುಮಟ್ಟಿಗೆ ವಾಸಿಯಾಗುತ್ತದೆ. ಆದ್ದರಿಂದ ಬಡವರಿಗೂ ಇಲ್ಲಿ ಚಿಕಿತ್ಸೆ ಲಭ್ಯ.







"ಜನಸೇವೆ ಮಾಡಬೇಕಿದ್ರೆ ಮೊದಲು ನನ್ನ ಆರೋಗ್ಯ ಉತ್ತಮವಾಗಿರಬೇಕು. ಅದಕ್ಕೇ ಒಮ್ಮೆ ವಿದೇಶ ಪ್ರವಾಸ ಮಾಡಿ ಬರ್ತೇನೆ."

# ಆಟೋಕ್ಯಾಡ್: ಏನಿದರ ವಿಶೇಷ?

***ವೆಂಕಟೇಶ ದೊಡ್ಮನೆ***

ನೀವೊಂದು ಮನೆ ಕಟ್ಟಬೇಕಾಗಿದೆ. ಅದು ಹೀಗಿರಬೇಕು, ಹಾಗಿರಬೇಕು ಎಂದೇನೋ ಮನಸ್ಸಿನಲ್ಲೇ ಕಲ್ಪಿಸಿಕೊಳ್ಳುತ್ತಾ ವಾಸ್ತುಶಿಲ್ಪಿಗಳ ಬಳಿ ಹೊರಡುತ್ತೀರಿ. ಆಗ ದಾರಿಯಲ್ಲೇ ಒಂದು ಕಟ್ಟಡದ ಮುಂದೆ, ''ಇಲ್ಲಿ ಅತಿ ಶೀಘ್ರವಾಗಿ ಮತ್ತು ಅಂದವಾಗಿ ನಕ್ಷೆ ಹಾಕಿ ಕೊಡಲಾಗುತ್ತದೆ'' ಎಂಬ ಬರಹವನ್ನು ನೋಡಿ ಆ ಕಟ್ಟಡದ ಹೊಸ್ತಿಲು ದಾಟುತ್ತೀರಿ. ಅಲ್ಲಿ ಒಬ್ಬರು ನೇರ ದೃಷ್ಟಿಯಿಂದೊಮ್ಮೆ ನೋಡಿ, ನಂತರ ನಮ್ರವಾಗಿ ಸ್ವಾಗತಿಸುವರು. ನೀವು ನಿಮ್ಮ ಜಾಗದ ನಕ್ಷೆಯನ್ನು ಮೇಜಿನ ಮೇಲೆ ಹರಡಿ, ಮನೆಯ ಅಗತ್ಯಗಳನ್ನು ಹೇಳಿ, ಅವರ ಸಲಹೆಯನ್ನು ಕೇಳುತ್ತೀರಿ. ಆಗ ಅವರು ಕೆಲವು ಸಲಹೆಗಳನ್ನು ಕೊಟ್ಟು, ನಂತರ ಒಳಗಿನ ವಾತಾನುಕೂಲಿತ ಕೋಣೆಯೊಳಕ್ಕೆ ಕರೆದೊಯ್ಯುತ್ತಾರೆ. ''ಆ್ಞ- ಯಾಕೆ?'' ಎನ್ನುವಿರಾ? ಅದು ಗಣಕಯಂತ್ರ ಇರುವ ಕೋಣೆ ಎಂದು ಆ ಕೋಣೆಯನ್ನು ಹೊಕ್ಕ ಕೂಡಲೇ ನಿಮಗೇ ಗೊತ್ತಾಗುತ್ತದೆ. ಅಲ್ಲಿ ಅವರು ಒಂದು ಗಣಕಯಂತ್ರದ ಹತ್ತಿರ ಕುಳಿತು ನಾಲ್ಕಾರು ಗುಂಡಿಗಳನ್ನು ಒತ್ತುತ್ತಾರೆ. ಫಳಕ್ - ಫಳಕ್ ಎಂದು ಒಂದು ಮನೆಯ ಚಿತ್ರ ಕಿರುತೆರೆಯ ಮೇಲೆ ಮೂಡಿಬಿಡುತ್ತದೆ! ನೀವು ವಿಸ್ಮಿತರಾಗಿ ನೋಡುತ್ತಾ ಕುಳಿತಂತೆಯೇ, ಆತ ಇನ್ನೂ ಕೆಲವು ರೀತಿಯ ಮನೆಗಳ ಚಿತ್ರವನ್ನು ಕಿರುತೆರೆಯ ಮೇಲೆ ಮೂಡಿಸುತ್ತಾನೆ. ನೀವು ಯಾವುದೋ ಒಂದು ಆಕಾರದ ಮನೆಯನ್ನು ಆಯ್ದುಕೊಂಡಾಗ ಅವನು ಆ ಮನೆಯ ಒಳಭಾಗಕ್ಕೆ ನಿಮ್ಮನ್ನು 'ಕರೆದೊಯ್ಯುತ್ತಾನೆ!' ಅಂದರೆ ಆ ಮನೆಯ ಮಲಗುವ ಕೋಣೆ, ಅಡುಗೆ ಮನೆ, ಸ್ನಾನದ ಮನೆ, ದೇವರ ಮನೆ ಹೀಗೆ ಎಲ್ಲವನ್ನೂ ರೇಖಾಚಿತ್ರದ ಮೂಲಕ ತೋರಿಸುತ್ತಾ, ''ನೋಡಿ ಸಾರ್, ಇದು ಡೈನಿಂಗ್ ಹಾಲ್. ಇಲ್ಲಿ 15 ಕುರ್ಚಿಗಳಿಗಾಗುವಂತಹ ಡೈನಿಂಗ್ ಟೇಬಲ್ಲನ್ನು ಇಡಬಹುದು ಇದು ಬೆಡ್‌ರೂಮು, 2 ಡಬಲ್ ಕಾಟನ್ನು ಹಾಕಬಹುದು. ಇದು ಹಾಲ್,'' ಎನ್ನುತ್ತಾ ಅಲ್ಲಿ ಜೋಡಿಸಿಟ್ಟಿರುವ ಮೇಜು-ಕುರ್ಚಿ ಮುಂತಾದವುಗಳನ್ನು ತೋರಿಸಿದಾಗ ನೀವು ಮೂಕವಿಸ್ಮಿತರಾಗುವುದರಲ್ಲಿ ಸಂದೇಹವೇ ಇಲ್ಲ. ಮನೆಯ ಎಲ್ಲ ಜಾಗಗಳನ್ನು ನೋಡಿದ ಮೇಲೆ ನಿಮಗೆ ಅದೇ ಮನೆ ಇಷ್ಟವಾಯಿತೆಂದರೆ ಇನ್ನೊಂದೆರಡು ನಿಮಿಷಗಳಲ್ಲಿ ಇಡೀ ಮನೆಯನ್ನು ಕಟ್ಟಿಸಲು ಬೇಕಾಗುವ ಸಂಪೂರ್ಣ ಅಂದಾಜುಪತ್ರದ

ಕಾಗದಪತ್ರಗಳೂ ನಿಮ್ಮ ಕೈಸೇರುತ್ತವೆ. ಆದರೆ ಈಗ ಅವರು ಕೊಡುವ ರಸೀತಿ ಮಾತ್ರ ಕೊಂಚ ಜಾಸ್ತಿ ಎನಿಸಬಹುದು! ಆದರೆ ಇಷ್ಟು ಬೇಗ ಕೆಲಸವಾಯಿತಲ್ಲ! ಎಂದುಕೊಳ್ಳುತ್ತಾ ಸಮಾಧಾನದಿಂದ ನೀವು ಮನೆಯ ಹಾದಿ ತುಳಿಯುತ್ತೀರಿ.

ಇಂದು ದೊಡ್ಡ-ದೊಡ್ಡ ನಗರಗಳಲ್ಲಿ ನಡೆಯುವ ದಿನನಿತ್ಯದ ಚಟುವಟಿಕೆ ಇದು. ಕೆಲವೇ ವರ್ಷಗಳ ಹಿಂದೆ ಇದನ್ನು ಯಾರ ಇದಿರಲ್ಲಾದರೂ ಹೇಳಿದ್ದರೆ, ಡ್ರಾಯಿಂಗ್ ಬೋರ್ಡು, ಪೆನ್ನು, ಪೆನ್ಸಿಲ್ಲು ಮುಂತಾದ ಸಲಕರಣೆಗಳಿಲ್ಲದೆ ರೇಖಾಚಿತ್ರ ತಯಾರಿಸಲು ಸಾಧ್ಯವೆ? ಇದು ಯಾವತ್ತು ಬಿದ್ದ ಕನಸು ಎಂದು ಕೇಳಿದಿರುತ್ತಿರಲಿಲ್ಲ.

ಇದೆಲ್ಲ ಸಾಧ್ಯವಾದದ್ದು ಆಟೋಕ್ಯಾಡ್ ನಿಂದ.

ಹಾಗಾದರೆ ಆಟೋಕ್ಯಾಡ್ ಎಂದರೆ ಏನು?

ಇದೊಂದು ಆಂಗ್ಲ ಮೂಲದ ಪದ. ಇದರ ವಿಸ್ತರಣೆ ''ಆಟೋಮ್ಯಾಟಿಕ್ ಕಂಪ್ಯೂಟರ್ ಏಯ್ಡೆಡ್ ಡ್ರ್ಯಾಫ್ಟಿಂಗ್'' ಎಂದು. ಈಗಿನ ಬಳಕೆಯ ಪ್ರಕಾರ ಯಾವುದೇ ತಾಂತ್ರಿಕ ರೇಖಾಚಿತ್ರವನ್ನು ಗಣಕಯಂತ್ರದ ಮೂಲಕ ಚಿತ್ರಿಸುವ ಅಥವಾ ತಯಾರಿಸುವ ವಿಧಾನವನ್ನೆ 'ಆಟೋಕ್ಯಾಡ್' ಎನ್ನುತ್ತೇವೆ. 'ಆಟೋಕ್ಯಾಡ್' ಎನ್ನುವುದು 'ಆಟೋ ಡೆಸ್ಕ್ ಇಂಟರ್‌ನಾಶನಲ್ ಸಂಸ್ಥೆ'ಯ ಟ್ರೇಡ್ ಮಾರ್ಕ್. ಇದಕ್ಕೆ ಈ ವಿಧಾನವನ್ನು ಮೊದಲು ಅಮೇರಿಕದಲ್ಲಿ ಬಳಕೆಗೆ




1. ಕಿರುತೆರೆ (ಮಾನಿಟರ್) ಔಟ್‌ಪುಟ್ ಯೂನಿಟ್

2. ಗಣಕಯಂತ್ರದ ಮೆದುಳು ಅಥವಾ ಮಧ್ಯಭಾಗ (ಸೆಂಟ್ರಲ್ ಪ್ರೊಸೆಸಿಂಗ್ ಯೂನಿಟ್)

3. ಒತ್ತು ಗುಂಡಿಗಳ ಮಣೆ (ಕೀ ಬೋರ್ಡ್) ಇನ್‌ಪುಟ್ ಯೂನಿಟ್

4. ಮೌಸ್-ಇನ್‌ಪುಟ್ ಯೂನಿಟ್‌ಗೆ ಸೇರಿದ ಒಂದು ಉಪಕರಣ

ತಂದರು. (ಕೆಲವು ಸಂಸ್ಥೆಗಳು ಇದಕ್ಕೆ ಬೇರೆ ಹೆಸರನ್ನು ಕೂಡ ಇಟ್ಟುಕೊಂಡಿವೆ.)

ಇದನ್ನು ರೇಖಾಚಿತ್ರವನ್ನು ಬರೆಯಲು ಹೆಚ್ಚು ಸಹಕಾರಿಯಾಗುವಂತೆ ತಯಾರಿಸಲಾಗಿದೆ. ಡಿಸ್ಕ್ ಅಥವಾ ಡಿಸ್ಕೆಟ್ ಅಂದರೆ ಟೇಪ್ ರೆಕಾರ್ಡರ್ ಅಥವಾ ಗ್ರಾಮ್‌ಫೋನಿನ ಕ್ಯಾಸೆಟ್ಟನ್ನು ಹೋಲುವ ಗಣಕಯಂತ್ರದಲ್ಲಿ ಉಪಯೋಗಿಸಲ್ಪಡುವ ಒಂದು ರೀತಿಯ ಕ್ಯಾಸೆಟ್ಟು. ಯಾವುದೇ ಒಂದು 'ಸಾಫ್ಟ್‌ವೇರ್ ಪ್ಯಾಕೇಜು' ಡಿಸ್ಕ್‌ಗಳಲ್ಲಿರುತ್ತದೆ. ಆಟೋ ಕ್ಯಾಡ್‌ಗೆ ಇಂತಹ ಕನಿಷ್ಠ ನಾಲ್ಕು ಕ್ಯಾಸೆಟ್ಟುಗಳ ಅಗತ್ಯವಿದೆ. ಇವೆಲ್ಲವುಗಳಲ್ಲಿ ನಾಲ್ಕು ರೀತಿಯ ಫೈಲುಗಳೂ ಇರುತ್ತವೆ. ಅವು ಯಾವುವೆಂದರೆ

1. ಪರಿಣಾಮವನ್ನು ಹೊರಹೊಮ್ಮಿಸುವ ಕಡತ **ಎಕ್ಸಿಕ್ಯೂಟಬಲ್ ಫೈಲು**
2. ಕಂತೆಗಳ ವ್ಯವಸ್ಥೆಯ ಕಡತ **ಓವರ್‌ಲೇ ಫೈಲು**
3. ಚಾಲನಾ ವ್ಯವಸ್ಥೆಯ ಕಡತ **ಡ್ರೈವರ್ ಫೈಲು**
4. ಆಧಾರ ಮತ್ತು ರೇಖಾಚಿತ್ರಗಳ ಕಡತ **ಸಪೋರ್ಟಿಂಗ್ ಮತ್ತು ಡ್ರಾಯಿಂಗ್ ಫೈಲುಗಳು**

ಅಂದರೆ ಇವೆಲ್ಲಾ ಮೊದಲೇ ತಯಾರಿಸಿಟ್ಟ **ಪ್ರೀ ರೆಕಾರ್ಡೆಡ್** ಕಾರ್ಯಕ್ರಮಗಳು. ಇವುಗಳಲ್ಲಿ ರೇಖಾಚಿತ್ರವನ್ನು ರಚಿಸಲು ಬೇಕಾಗುವಂತಹ ಸೌಲಭ್ಯಗಳಿರುತ್ತವೆ. ಸೂಕ್ತವಾದ ಆಜ್ಞೆಯನ್ನು ಕೊಟ್ಟು ಬೇಕಾದ ರೀತಿಯಲ್ಲಿ ನಕ್ಷೆಯನ್ನು ತಯಾರಿಸಲು ಸಾಧ್ಯ. ಇಲ್ಲಿ ಒಂದು 'ಆಜ್ಞೆ' ಎಂದರೆ ನಿರ್ದಿಷ್ಟವಾದ ಕೆಲಸ ಸಾಧಿಸಲು ಬೇಕಾಗುವ ಒಂದು ಆದೇಶ ಸೂಚಿ ಪದ. ಈ ಆಜ್ಞೆಯನ್ನು ನಮ್ಮ ಅವಶ್ಯಕತೆಗೆ ತಕ್ಕಂತೆ ಬಳಸುತ್ತಾ ನಮಗೆ ಬೇಕಾದ ರೇಖಾಚಿತ್ರವನ್ನು ಬರೆಯಬಹುದು. ಯಾವ ಆಜ್ಞೆಯನ್ನು ಎಷ್ಟು ಸಾರಿ ಬೇಕಾದರೂ ಉಪಯೋಗಿಸಬಹುದು.

ಆಜ್ಞೆಗಳ ಪಟ್ಟಿ ಸ್ವಲ್ಪ ದೊಡ್ಡದು. ಇನ್ನೂರಕ್ಕೂ ಹೆಚ್ಚಿರುವ ಈ ಪಟ್ಟಿಯಲ್ಲಿ ಮುಖ್ಯವಾಗಿ ಬಳಸಲ್ಪಡುವುದು 80-90 ಮಾತ್ರ. ಈ ಕೆಳಗೆ ಕೆಲವು 'ಆಜ್ಞೆ'ಗಳ ಬಗ್ಗೆ ಉದಾಹರಣೆ ಸಹಿತ ವಿವರಿಸಲಾಗಿದೆ.

ಈಗ ಗಣಕಯಂತ್ರದ ಕಿರುತೆರೆಯನ್ನೇ ಡ್ರಾಯಿಂಗ್ ಶೀಟೆಂದು ಭಾವಿಸಿ. ದೊಡ್ಡ ದೊಡ್ಡ ಡ್ರಾಯಿಂಗ್ ಶೀಟುಗಳಲ್ಲಿ ಮಾಡಲ್ಪಡುವ ನಕ್ಷೆಗಳನ್ನು ಇಷ್ಟು ಚಿಕ್ಕ ಪರದೆಯ ಮೇಲೆ ಹೇಗೆ ಮೂಡಿಸಲು ಸಾಧ್ಯ? ಎಂದು ನೀವು ಕೇಳಬಹುದು. ಆದರೆ ಆಟೋಕ್ಯಾಡಿನಲ್ಲಿ ರೇಖಾಚಿತ್ರದ ಹಾಳೆಗೆ ಅಳತೆಯ ಪ್ರಶ್ನೆಯೇ ಇಲ್ಲ! ನಮ್ಮ ಅಗತ್ಯಕ್ಕೆ ತಕ್ಕ ರೇಖಾಚಿತ್ರವನ್ನು ರಚಿಸಬಹುದು!!

ಅಲ್ಲದೆ 'PAN' ಎನ್ನುವ ಆಜ್ಞೆಯನ್ನು ಬಳಸಿ ಇಡೀ ರೇಖಾಚಿತ್ರದ ಹಾಳೆಯನ್ನೇ ಪಕ್ಕಕ್ಕೆ ಸರಿಸಬಹುದು. ಅಂದರೆ ರೇಖಾಚಿತ್ರವನ್ನು ಯಾವುದೇ ದಿಕ್ಕಿಗೆ ಸ್ಥಾನಪಲ್ಲಟ ಮಾಡಬಹುದು. ರೇಖೆಗಳನ್ನು ರಚಿಸುವಾಗ ತಪ್ಪಾದರೆ 'ERASE' ಆಜ್ಞೆಯನ್ನು ಬಳಸಿ ಇಡಿ ರೇಖಾಚಿತ್ರವನ್ನಾಗಲಿ ರೇಖಾಚಿತ್ರದ ಯಾವುದೇ ಭಾಗವನ್ನಾಗಲಿ ಅಳಿಸಬಹುದು. 'OOPS' ಆಜ್ಞೆಯನ್ನು ಬಳಸಿ ಅಳಿಸಿದ್ದನ್ನು ಮತ್ತೆ ಮೂಡಿಸಬಹುದು. 'ZOOM' ಆಜ್ಞೆಯನ್ನು ಬಳಸಿ ರೇಖಾಚಿತ್ರದ ಯಾವುದೇ ಭಾಗವನ್ನು ದೊಡ್ಡದು ಅಥವಾ ಚಿಕ್ಕದನ್ನಾಗಿ ಮಾಡಬಹುದು. ಇಷ್ಟೆಲ್ಲ ಮಾಡಲು ಕೆಲವೆ ನಿಮಿಷಗಳು ಸಾಕು. ಈಗ ಇರುವ ರೇಖಾಚಿತ್ರದ ಪಕ್ಕದಲ್ಲೇ ಆಜ್ಞೆಯ ಪಟ್ಟಿ ಇರುತ್ತದೆ. ನಮಗೆ ಆಜ್ಞೆಯ ನೆನಪು ತಕ್ಷಣ ಆಗದಿದ್ದರೆ ಪಕ್ಕದಲ್ಲೆ ಇರುವ ಪಟ್ಟಿಯಿಂದ ಆಜ್ಞೆಯನ್ನು ನೆನಪಿಸಿಕೊಂಡು ಆಯ್ದುಕೊಳ್ಳಬಹುದು. ಈಗ ನೀವು ಯಾವುದೋ ಆಜ್ಞೆಯನ್ನು ಬಳಸುವಾಗ ತಪ್ಪು ಮಾಡಿದ್ದೀರೆಂದುಕೊಳ್ಳಿ. ಆಗ ಗಣಕಯಂತ್ರವೇ ನೀವು ತಪ್ಪು ಮಾಡಿದ್ದೀರೆಂದು ಸೂಚಿಸುತ್ತದೆ. ಮತ್ತು ''ಸಹಾಯಕ್ಕಾಗಿ 'HELP' ಆಜ್ಞೆಯನ್ನು ಬಳಸಿ'' ಎನ್ನುತ್ತದೆ! 'HELP'ನ್ನು ಬಳಸಿದರೆ ಅದು ಪ್ರತಿಯೊಂದು ಆಜ್ಞೆಯ ಬಗ್ಗೆ, ಅದನ್ನು ಬಳಸುವ ವಿಧಾನ ಕುರಿತು ಸರಿಯಾದ ತಿಳುವಳಿಕೆ ನೀಡು

ತ್ತದೆ. 'LAYER' ಆಜ್ಞೆಯ ಮೂಲಕ ಬಣ್ಣದ ರೇಖಾಚಿತ್ರವನ್ನೂ ರಚಿಸಬಹುದು (ಇದು ಬಣ್ಣದ ಕಿರುತೆರೆಯಲ್ಲಿ ಮಾತ್ರ ಸಾಧ್ಯ) 'TEXT' ಆಜ್ಞೆಯನ್ನು ಬಳಸಿ ಬೇರೆ ಬೇರೆ ರೀತಿಯಲ್ಲಿ ಅಕ್ಷರಗಳನ್ನೂ ಬರೆಯಬಹುದು.

ಇನ್ನೊಂದು ಸ್ವಾರಸ್ಯಕರವಾದ ಆಜ್ಞೆ ಎಂದರೆ **'ARRAY'**. ಇದರ ಮೂಲಕ ಒಂದು ಚಿತ್ರದ ಸುತ್ತಲೂ ಆಯತಾಕಾರವಾಗಿ ಅಥವಾ ವೃತ್ತಾಕಾರವಾಗಿ ಅದೇ ಪಡಿಯಚ್ಚಿನ ಎಷ್ಟು ಚಿತ್ರಗಳನ್ನು ಬೇಕಾದರೂ ರಚಿಸಬಹುದು.

ಈ ಆಜ್ಞೆಯ ಪಟ್ಟಿಯಲ್ಲಿ ಯಾವುದೇ ತಾಂತ್ರಿಕ ಕ್ಷೇತ್ರಕ್ಕೆ ಸಂಬಂಧಪಟ್ಟ ರೇಖಾಚಿತ್ರವನ್ನು ನಿರ್ಮಿಸಲು ಬೇಕಾಗುವ ಎಲ್ಲ ಆಜ್ಞೆಗಳೂ ಇರುತ್ತವೆ. ಇದನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳಬೇಕು ಅಷ್ಟೆ.

ಆಟೋಕ್ಯಾಡಿಗೆ ಕೆಲವು ಸಲಕರಣೆಗಳು (ಹಾರ್ಡ್‌ವೇರ್) ಮುಖ್ಯವಾಗಿ ಬೇಕಾಗುತ್ತವೆ. ಇದಕ್ಕೆ ಕಡಿಮೆ ಅಂದರೆ '640 KB RAM' ಹೊಂದಿರುವ (KB ಎನ್ನುವುದು ಗಣಕ ಯಂತ್ರದ ಸಾಮರ್ಥ್ಯವನ್ನಳೆಯುವ ಒಂದು 'ಮಾನ') ಒಂದು ಸಂಪೂರ್ಣ ಗಣಕಯಂತ್ರ, ಒಂದು ಮೌಸ್ ಅಥವಾ ಡಿಜಿಟೈಸರ್ ಮತ್ತು ಬಣ್ಣದ ಕಿರುತೆರೆ ಇದ್ದರೆ ಉತ್ತಮ. ಇದಕ್ಕೆ ಹೊಂದಿಕೊಂಡಂತೆ ಪ್ರತಿಯನ್ನು ತಯಾರಿಸಲು ಬಣ್ಣದ ಅಚ್ಚುಯಂತ್ರ (ಪ್ರಿಂಟರ್ ಅಥವಾ ಪ್ಲಾಟರ್) ಬೇಕಾಗುತ್ತದೆ.

ಈಗ ಇವುಗಳ ಬಗ್ಗೆ ಕೆಲವೇ ವಿವರಗಳನ್ನು ತಿಳಿಯೋಣ.

1) **ಗಣಕಯಂತ್ರ:** ಗಣಕಯಂತ್ರದ ಸಲಕರಣೆ (ಹಾರ್ಡ್‌ವೇರ್)ಗಳಲ್ಲಿ ಮೂರು ವಿಭಾಗಗಳಿರುತ್ತವೆ.

(ಅ) ದಾಖಲೆಯನ್ನು ಒಳಕ್ಕೆ ಸೇರಿಸುವ ವಿಭಾಗ

(ಬ) ದಾಖಲೆಯನ್ನು ಪರಿಶೀಲಿಸಿ ಕಾರ್ಯಗತಗೊಳಿಸುವ ಕೇಂದ್ರ ವಿಭಾಗ




"ನೋಡಿ ಸಾರ್, ಕಳೆದ ಬಾರಿ ನಮಗೆ ಕೈಕೊಟ್ಟು ಪರಾರಿಯಾದ ವ್ಯಕ್ತಿ ಇವನೇ ಇರ್ಬೇಕು ಸಾರ್."

(ಕ) ಪರಿಶೀಲನೆಗೊಂಡ ದಾಖಲೆಯನ್ನು ಹೊರಹೊಮ್ಮಿಸುವ ವಿಭಾಗ

ಕೀಬೋರ್ಡ್, ಮೌಸ್ ಮತ್ತು ಡಿಜಿಟೈಸರ್‌ಗಳು ದಾಖಲೆಯನ್ನು ಒಳಕ್ಕೆ ಸೇರಿಸುವ ವಿಭಾಗಕ್ಕೆ ಸೇರುತ್ತವೆ.

ಕೇಂದ್ರ ವಿಭಾಗದಲ್ಲಿ ಒಳಕ್ಕೆ ತೆಗೆದುಕೊಂಡ ದಾಖಲೆಯನ್ನು ಪರಿಶೀಲಿಸಿ ಅದನ್ನು ಹೊರಹೊಮ್ಮಿಸಲು ಸಹಾಯವಾಗುವಂತಹ 'ಎಲೆಕ್ಟ್ರೋಮೆಕ್ಯಾನಿಕಲ್' ಉಪಕರಣಗಳಿರುತ್ತವೆ.

ದೂರದರ್ಶನದ (ಟಿ.ವಿ.) ಪರದೆಯನ್ನು ಹೋಲುವ ಕಿರುತೆರೆಯು ದಾಖಲೆಯನ್ನು ಹೊರಹೊಮ್ಮಿಸುವ ವಿಭಾಗಕ್ಕೆ ಸೇರುತ್ತದೆ. ಬಣ್ಣದ ಮತ್ತು ಕಪ್ಪು-ಬಿಳುಪು ಟೆಲಿವಿಜನ್ನಿನ ಹಾಗೆ ಇದರಲ್ಲಿ ಬಣ್ಣದ ಮತ್ತು ತಿಳಿ ಹಸಿರು ಬಣ್ಣದ ಕಿರು ತೆರೆ ಇರುತ್ತದೆ. ಸರಿಯಾಗಿ ಕಾರ್ಯನಿರ್ವಹಿಸಲು ಇದು ವಾತಾನುಕೂಲಿತ ಕೋಣೆಯಲ್ಲಿರುವುದು ಅವಶ್ಯ.

**2) ಮೌಸ್ ಮತ್ತು ಡಿಜಿಟೈಸರ್:** ಮೌಸ್ ಎಂಬುದು ಟ್ರಾನ್ಸಿಸ್ಟರ್ ಗಾತ್ರದ ಪುಟ್ಟ ಉಪಕರಣ. ಇದನ್ನು ಉಪಯೋಗಿಸುವಾಗ ಕಿರುತೆರೆಯಲ್ಲಿ ಒಂದು ಚುಕ್ಕೆ ಮೂಡುತ್ತದೆ. ಇದನ್ನು ಹಿಂದೆ ಮುಂದೆ, ಅಕ್ಕಪಕ್ಕ, ಯಾವ ದಿಕ್ಕಿಗೆ ಸರಿಸಿದರೂ ಅದಕ್ಕೆ ತಕ್ಕಹಾಗೆ ಆ 'ಚುಕ್ಕೆ'ಯೂ ಅಕ್ಷಾಂಶ ಮತ್ತು ರೇಖಾಂಶಗಳ ದಿಕ್ಕಿಗೆ ಚಲಿಸುತ್ತದೆ! ಇದರಿಂದ ಕೈ ಬರಹದ ರೇಖಾಚಿತ್ರವನ್ನು ರಚಿಸಬಹುದು.

**ಡಿಜಿಟೈಸರ್:** ಎನ್ನುವುದು ಎಲೆಕ್ಟ್ರಾನಿಕ್ ಉಪಕರಣ. ಇದರ ಜೊತೆಯಲ್ಲಿ ಲೇಖನಿಯ ಮಾದರಿಯ 'ಲೈಟ್ ಪೆನ್' ಎಂಬುದಿರುತ್ತದೆ. ನಾವು ಲೇಖನಿಯಿಂದ ಕಾಗದದ ಮೇಲೆ ಬರೆಯುವುದಿಲ್ಲವೇ? ಹಾಗೆ ಅದನ್ನು ಈ ಡಿಜಿಟೈಸರ್‌ನ ಮೇಲೆ ಆಡಿಸಿದಾಗ ಕಿರುತೆರೆಯ ಮೇಲೆ ಮೂಡಿರುವ ಚುಕ್ಕೆಯೂ ಕೂಡ ಇದನ್ನನುಸರಿಸಿ ರೇಖೆಯನ್ನು ರಚಿಸುತ್ತದೆ.

**3) ಪ್ರಿಂಟರ್ ಮತ್ತು ಪ್ಲಾಟರ್:** ಈ ಅಚ್ಚುಹಾಕುವ ಯಂತ್ರದಿಂದ ರೇಖಾಚಿತ್ರದ ಪ್ರತಿಗಳನ್ನು ತಯಾರಿಸಬಹುದು. ಇವುಗಳಿಂದ ಬಣ್ಣದ ರೇಖಾಚಿತ್ರಗಳನ್ನು ಕೂಡ ಪಡೆಯಬಹುದು. ಪ್ರಿಂಟರ್‌ಗಿಂತ ಪ್ಲಾಟರ್‌ನಲ್ಲಿ ಬಹಳ ಚುರುಕಾಗಿ ಮತ್ತು ಉತ್ತಮವಾದ ರೇಖಾಚಿತ್ರದ ಪ್ರತಿಯನ್ನು ಪಡೆಯಬಹುದು.

ನಮ್ಮ ದೇಶದಲ್ಲೂ ಈ ರೀತಿಯಲ್ಲಿ ರೇಖಾಚಿತ್ರಗಳನ್ನು ರಚಿಸುವುದು ಈಗೀಗ ಹೆಚ್ಚುತ್ತಿದೆ. ಮಧ್ಯಮ ಮತ್ತು ದೊಡ್ಡ ಪ್ರಮಾಣದ ತಾಂತ್ರಿಕ ಸಂಸ್ಥೆಗಳಲ್ಲಿ ಇದು ಸಾಮಾನ್ಯವಾಗಿದೆ. ಇತ್ತೀಚಿನ ಸಂಶೋಧನೆಗಳಿಂದ ರೇಖಾಚಿತ್ರವನ್ನು ಮೂರು ಆಯಾಮಗಳ ಚಿತ್ರವನ್ನಾಗಿ ಮಾಡಲು ಸಾಧ್ಯ ಎಂದು ಗೊತ್ತಾಗಿದೆ. ಈಗೀಗಂತೂ ಮುಂದುವರೆದ ದೇಶಗಳಲ್ಲಿ ರೇಖಾಚಿತ್ರದಿಂದ ಹಿಡಿದು ಅದರ ನಿಜವಾದ ಸ್ವರೂಪ ತಯಾರಿಸುವವರೆಗೂ ಇದರ ಬಳಕೆ ನಡೆಯುತ್ತಿದೆ. ದಿನದಿಂದ ದಿನಕ್ಕೆ ಹೊಸ ಹೊಸ ಅಟೋಕ್ಯಾಡ್ ನಮೂನೆಗಳು ಬರುತ್ತಿವೆ.

ಯಾಂತ್ರಿಕ ಕ್ಷೇತ್ರದಲ್ಲೂ ಇದರ ಉಪಯೋಗವಿದೆ. ಉದಾಹರಣೆಗೆ ಯಂತ್ರದಲ್ಲಿ ಬಳಸುವಂತಹ ಒಂದು 'ಕ್ರ್ಯಾಂಕ್ ಶಾಫ್ಟ್' (ಅಂಕುಡೊಂಕಾದ ದಂಡ) ತಯಾರಿಸಬೇಕು ಎಂದಿಟ್ಟುಕೊಳ್ಳಿ. ಮೊದಲು ಗಣಕಯಂತ್ರಕ್ಕೆ ಕೆಲವು ತಾಂತ್ರಿಕ ವಿವರಗಳನ್ನು ಒದಗಿಸಿದರೆ, ಅದರ ಕನಿಷ್ಠ ಗಟ್ಟಿಮುಟ್ಟುತನ, ಬಳಸಬೇಕಾದ ಲೋಹ, ತಾಪವನ್ನು ಸಹಿಸುವ ಶಕ್ತಿ, ಅದರ ಒಟ್ಟು ತೂಕ, ಮುಂತಾದ ವಿವರಗಳನ್ನು ಅಟೋಕ್ಯಾಡ್ ನಿರ್ಧರಿಸಿ ನಮಗೆ ತಿಳಿಸುತ್ತದೆ. ಮತ್ತೆ ಅದಕ್ಕೆ ಆದೇಶ ನೀಡಿದರೆ, ಅದರ ರೇಖಾಚಿತ್ರವನ್ನು ತಯಾರಿಸಿ, ಹೀಗೆ ತಯಾರಿಸಿದ ಸಂಪೂರ್ಣ ವಿವರಗಳನ್ನು ಮತ್ತೊಂದು ಯಂತ್ರಕ್ಕೆ ರವಾನಿಸುತ್ತದೆ. ಆ ಯಂತ್ರ ಕಚ್ಚಾ ವಸ್ತುಗಳನ್ನು ಬಳಸಿ ಅತಿ ನಿಖರವಾದ ಉತ್ತಮ ಗುಣಮಟ್ಟದ ಕ್ರ್ಯಾಂಕ್‌ಶಾಫ್ಟನ್ನು ತಯಾರಿಸುತ್ತದೆ. ಇದೆಲ್ಲಾ ಕ್ಯಾಡ್/ಕ್ಯಾಮ್ ಗಣಕ ಯಂತ್ರ ವ್ಯವಸ್ಥೆಯಲ್ಲಿ ಮಾತ್ರ ಸಾಧ್ಯ.

ಕ್ಯಾಡ್/ಕ್ಯಾಮ್ ಎಂಬುದರ ವಿಸ್ತರಣೆ

''ಕಂಪ್ಯೂಟರ್ ಏಯ್ಡೆಡ್ ಡಿಸೈನ್ ಎಂಡ್ ಕಂಪ್ಯೂಟರ್ ಏಯ್ಡೆಡ್ ಮ್ಯಾನು ಫ್ಯಾಕ್ಚರಿಂಗ್'' ಎಂದು. ಅಂದರೆ ಗಣಕಯಂತ್ರದ ಸಹಾಯ ದಿಂದ ವಿನ್ಯಾಸ ಮತ್ತು ಉತ್ಪಾದನೆ ಎಂದರ್ಥ. ಈ ರೀತಿಯ ಯಂತ್ರಗಳು ಇಂದು ವಿದೇಶ ಗಳಲ್ಲಿ ಹೆಚ್ಚು ಬಳಕೆಯಲ್ಲಿವೆ. ಭಾರತದಲ್ಲೂ ಇದು ಬಳಕೆಯಲ್ಲಿದ್ದರೂ ಬಹುಶಃ ದೊಡ್ಡ ಪ್ರಮಾಣದ ಕಾರ್ಖಾನೆಗಳಲ್ಲಿ ಮಾತ್ರ!

ಈ ರೇಖಾಚಿತ್ರ ರಚಿಸುವ ಗಣಕ ಯಂತ್ರದ ಬಳಕೆಯಿಂದ ಅನುಕೂಲ ಮತ್ತು ಅನಾನುಕೂಲ ಗಳೆರಡೂ ಇವೆ.

ಇದರಿಂದ ಬಹಳ ಬೇಗ, ನಿಖರವಾದ ತಾಂತ್ರಿಕ ಗುಣಗಳುಳ್ಳ ರೇಖಾಚಿತ್ರವನ್ನು ರಚಿಸ ಬಹುದು.

ನಮಗೆ ಬೇಕಾದ ರೇಖಾಚಿತ್ರವನ್ನು ಶೇಖರಿ ಸಿಟ್ಟಿರುವ ಕಡತಗಳಿಂದ ಕೆಲವೇ ಕ್ಷಣಗಳಲ್ಲಿ ತರಿಸಿಕೊಳ್ಳಬಹುದು.

ಇದಕ್ಕೆ ಬೇಕಾಗುವ ಜಾಗ ತುಂಬಾ ಕಡಿಮೆ ಮತ್ತು ನೂರಾರು ರೇಖಾಚಿತ್ರಗಳನ್ನು ಒಂದೇ ಡಿಸ್ಕೆಟ್‌ನಲ್ಲಿ ಶೇಖರಿಸಿಡಬಹುದು.

ದೊಡ್ಡ ಪ್ರಮಾಣದಲ್ಲಿ ಹೋಲಿಸಿ ನೋಡಿ ದಾಗ ಇದರ ವೆಚ್ಚ ಕಡಿಮೆ.

ಇದರಿಂದ ಉಂಟಾಗುವ ಅನಾನುಕೂಲಗಳೆಂದರೆ ಈಗೀಗ ಇದಕ್ಕೆ ತಗಲುವ ಹಾನಿಕರ ವೈರಸ್ಸಿನಿಂದಾಗಿ ಸಂಗ್ರಹಿಸಿಟ್ಟ ಎಲ್ಲಾ ದಾಖಲೆ ಗಳೂ ಹಾಳಾಗಬಹುದು.

ನೂರಾರು ರೇಖಾಚಿತ್ರಗಳನ್ನು ಒಂದೇ ಡಿಸ್ಕೆಟ್‌ನಲ್ಲಿ ನಕಲು ಮಾಡಬಹುದಾದ್ದರಿಂದ ಅಮೂಲ್ಯ ದಾಖಲೆಗಳು ಸುಲಭವಾಗಿ ಕಳು ವಾಗಬಹುದು.

ದುಬಾರಿಯಾದುದರಿಂದ ಜನಸಾಮಾನ್ಯರು ಇದನ್ನು ಬಳಸುವಂತಿಲ್ಲ.

ಗಣಕಯಂತ್ರದಿಂದಾಗಿ ಉದ್ಯೋಗಾವಕಾಶ ಗಳು ಕಡಿಮೆಯಾಗುತ್ತವೆ.

ಇಂದು ಅಟೋಕ್ಯಾಡನ್ನು ಹೇಳಿಕೊಡಲು ಅಥವಾ ಅದರ ಬಗ್ಗೆ ತರಬೇತಿ ನೀಡಲು ಬೆಂಗ ಳೂರಿನಂತಹ ನಗರಗಳಲ್ಲಿ ಸಾಕಷ್ಟು ಸಂಸ್ಥೆಗಳು ತಲೆಯೆತ್ತಿವೆ.

ಇದನ್ನು ಕಲಿಯುವುದು ಕಷ್ಟವೇನಲ್ಲ. ಒಂದು ತಿಂಗಳಿಂದ ಹಿಡಿದು 6 ತಿಂಗಳ ಅವಧಿ ಯಲ್ಲಿ ಇದನ್ನು ಕಲಿಯಬಹುದು.

ಯಾವುದೇ ಕೆಲಸಕ್ಕೆ ಶ್ರದ್ಧೆ ಮುಖ್ಯ. ಅಂತೆಯೇ ಹೆಚ್ಚು ಅಭ್ಯಾಸ, ಶ್ರಮದಿಂದ ಯಾರು ಬೇಕಾದರೂ ಇದರಲ್ಲಿ ಪ್ರವೀಣರಾಗಬ ಹುದು. ಮತ್ತು ಪ್ರವೀಣರಾದರೆ ಮಾತ್ರ ವೇಗ ವಾಗಿ ರೇಖಾಚಿತ್ರ ರಚಿಸಬಹುದು.

ಮಾನವನಿಗಿಂತಲೂ ಚುರುಕಾಗಿರುವ ಯಂತ್ರವನ್ನು ಬಳಸಿಕೊಳ್ಳುವವರು ಅದನ್ನು ತಮ್ಮ ಅವಶ್ಯಕತೆಗೆ ತಕ್ಕಂತೆ ಪಳಗಿಸುವಷ್ಟು ಬುದ್ಧಿವಂತರಾಗಿರುವುದೂ ಅಷ್ಟೆ ಅವಶ್ಯವಷ್ಟೆ?

**(ನೋಡಿ: 1989ರ ಅಕ್ಟೋಬರ್ ಸಂಚಿಕೆಯಲ್ಲಿ ಪುಟ 76ರ ಪ್ರಕಟವಾದ 'ಬಂದಿದೆ ಕಂಪ್ಯೂಟರಿಗೂ ರೋಗ')**

---

*ವ್ಯಾಂಕೂವರ್ ದ್ವೀಪದ ಸಿವಾಶ್ ಜನಾಂಗದಲ್ಲಿ ಮಗುವಿನ ಜನನ ಸಂದರ್ಭಕ್ಕೆ ಸಂಬಂಧಿಸಿದಂತೆ ಒಂದು ವಿಚಿತ್ರ ಸಂಪ್ರದಾಯವನ್ನು ಅನುಸರಿಸಲಾಗುತ್ತದೆ.*

*ಗರ್ಭಿಣಿ ತನ್ನ ಹೆರಿಗೆಯ ಗಳಿಗೆ ಸಮೀಪಿಸುತ್ತಿದೆ ಎನಿಸಿದಾಗ ಆಕೆ ತನ್ನ ಗಂಡನೊಂದಿಗೆ ಸಮೀಪದ ಹೊಳೆಗೊ ಹಳ್ಳಕ್ಕೊ ಅಥವಾ ಜಲಾಶಯಕ್ಕೊ ಹೋಗುತ್ತಾಳೆ. ಇಬ್ಬರೂ ನೀರಿಗಿಳಿದು ಈಜತೊಡಗುತ್ತಾರೆ. ಅವಶ್ಯಕ ಕ್ಷಣದಲ್ಲಿ ಆಕೆ ನೀರಿನಿಂದ ಹೊರಬಂದು ಸಮೀಪದ ಕಂಟಿಗಳಲ್ಲಿ ಮೊದಲೇ ನಿರ್ಮಿಸಿದ ಗೂಡೊಂದಕ್ಕೆ ಹೋಗುತ್ತಾಳೆ. ಆಕೆ ಹೆರುವವರೆಗೂ, ಕೂಸಿನ ಅಳು ತನಗೆ ಕೇಳುವವರೆಗೂ, ಆತ ಈಜುತ್ತಲೇ ಇರುತ್ತಾನೆ.*

*ತಾಯಿ ನವಜಾತ ಶಿಶುವನ್ನು ನೀರಿನ ಬಳಿ ತಂದಾಗ ತಂದೆ ದಡದೆಡೆ ಈಜಿ ಬರುತ್ತಾನೆ. ಇಬ್ಬರೂ ನೇರಿ ಕೂಸಿನ ಮೈ ತೊಳೆಯುತ್ತಾರೆ. ಆಕೆಯೂ ಸ್ನಾನ ಮುಗಿಸಿದ ಮೇಲೆ ಆ ದಂಪತಿ ಹೆಮ್ಮೆಯಿಂದ ಹಸುಗೂಸಿನೊಂದಿಗೆ ಹಟ್ಟಿಯನ್ನು ಸೇರಿಕೊಳ್ಳುತ್ತಾರೆ.*

ಜೀವನದರ್ಶನ

32

ಕೆ.ಟಿ. ಪಾಂಡುರಂಗಿ

# ಮೇಲು-ಕೀಳು

ಭಾರತೀಯ ಸಮಾಜದಲ್ಲಿ ಅನೇಕ ವಿಧವಾದ ಮೇಲು ಕೀಳುಗಳೆಂಬ ಭಾವನೆಗಳಿದ್ದು ಸಾಮಾಜಿಕ ಭ್ರಾತೃಭಾವವು ಸಮತೋಲದಿಂದ ಉಂಟಾಗುವುದು ಕಠಿಣವಾಗಿದೆ ಎಂಬುದನ್ನು ಪೂರ್ಣವಾಗಿ ಅಲ್ಲಗಳೆಯಲು ಬರುವುದಿಲ್ಲ. ಒಂದಿಲ್ಲ ಒಂದು ರೀತಿಯಿಂದ ಮೇಲು ಕೀಳು ಭಾವನೆಗಳಿಗೆ ಅವಕಾಶವಿಲ್ಲದ ಸಮಾಜ ಅಥವಾ ರಾಷ್ಟ್ರವೇ ಇಲ್ಲ. ಇದನ್ನು ಸಂಪೂರ್ಣವಾಗಿ ಅಳಿಸಿಹಾಕುವುದು ಕಷ್ಟಸಾಧ್ಯವಾದರೂ ಇದರ ಪ್ರಮಾಣವನ್ನು ಕಡಿಮೆ ಮಾಡುವ ಮೂಲಕ ಮನಸ್ಸಿನ ಉದ್ವೇಗ ಮತ್ತು ಸಂಘರ್ಷವನ್ನು ಕಡಿಮೆ ಮಾಡುವುದು ಸಾಧ್ಯ.

ಮೇಲು ಕೀಳು ಭಾವನೆಗಳಿಗೆ ಅವಕಾಶ ಕೊಡುವ ವಿಷಯಗಳಲ್ಲಿ ಆರ್ಥಿಕ ವೈಷಮ್ಯ, ವಿದ್ಯೆ - ಜ್ಞಾನಗಳಲ್ಲಿಯ ಅಂತರ, ಅವರವರ ವೃತ್ತಿಗಳು ಬುದ್ಧಿಯಿಂದ ಕಾರ್ಯ ಮಾಡುವಂಥವೋ ಕೈ ಕೆಲಸದಿಂದ ಮಾಡುವಂಥವೋ ಎಂಬ ತಾರತಮ್ಯ, ಆಹಾರ - ಸ್ವಚ್ಛತೆ ಮೊದಲಾದ ವೈಯಕ್ತಿಕ ನಡೆನುಡಿಗಳು, ಗತಕಾಲದಿಂದ ನಡೆದುಕೊಂಡು ಬಂದ ಸಾಮಾಜಿಕ ತಾರತಮ್ಯಗಳು, ಅಧಿಕಾರ ಅಥವಾ ಪ್ರತಿಷ್ಠೆಯ ಸ್ಥಾನ ಇರುವುದು ಇಲ್ಲದೆ ಇರುವುದು ಹೀಗೆ ಜೀವನದ ವೈವಿಧ್ಯಗಳನ್ನವಲಂಬಿಸಿ ಮೇಲು ಕೀಳು ಭಾವನೆಗಳು ಬೆಳೆಯುತ್ತವೆ. ಈ ವೈವಿಧ್ಯಗಳನ್ನು ಸಂಪೂರ್ಣವಾಗಿ ಅಳಿಸಿಹಾಕುವುದು ಸಾಧ್ಯವಾಗಲಾರದು. ನಾಗರಿಕತೆಯು ಬೆಳೆದಂತೆ ಈ ತಾರತಮ್ಯಗಳು ಶಿಥಿಲವಾಗುತ್ತ ಹೋಗುವವು. ಮುಖ್ಯವಾಗಿ ಆರ್ಥಿಕ ವೈಷಮ್ಯ ಕಡಿಮೆಯಾದಂತೆ ಇತರ ಅಂತರಗಳು ತಾವಾಗಿಯೇ ಶಿಥಿಲವಾಗುತ್ತ ಹೋಗುವವು.

ಆದರೆ ಈ ಕಾರಣಗಳಿಗಿಂತ ಹೆಚ್ಚಾಗಿ ಮೇಲು ಕೀಳು ಭಾವನೆಗಳ ಮೂಲಗಳು ಅವರವರ ಮನೋಭೂಮಿಕೆಯಲ್ಲಿಯೇ ಅಡಗಿವೆ. ತಮ್ಮ ತಮ್ಮ ವೃತ್ತಿಯ ಅಭಿಮಾನ, ನಿಷ್ಠೆಗಳು ಇರುವವರಿಗೆ ವೃತ್ತಿಯ ಕಾರಣದಿಂದ ತಾವು ಬೇರೆಯವರಿಗಿಂತ ಕೀಳು ಎಂಬ ಭಾವನೆಯೇ ಉಂಟಾಗುವುದಿಲ್ಲ. ಒಂದು ವೃತ್ತಿಗೆ ಸಂಭಾವನೆ ಕಡಿಮೆ ಇರಬಹುದು. ವಿರಾಮ ಕಡಿಮೆ ಇರಬಹುದು. ವೃತ್ತಿಯಿಂದಾಗಿ ಮೈ ಕೈ ಅಸ್ವಚ್ಛವಾಗಬಹುದು. ಆದರೆ ಆ ವೃತ್ತಿಯೇ ಕೀಳಲ್ಲ. ಆ ವೃತ್ತಿಯು ಬೇಡವಾದರೆ ಅದನ್ನು ಬದಲಿಸಬಹುದು. ಆದರೆ ಆ ವೃತ್ತಿಯಲ್ಲಿಯೇ ಇದ್ದು ಅದನ್ನು ಕೀಳೆಂದು ಮಾನಸಿಕವಾಗಿ ಒಪ್ಪಿಕೊಳ್ಳುವವರು ಆ ವೃತ್ತಿಗೇ ಅಪಚಾರ ಮಾಡಿದಂತಾಗುವುದು.

ಇದರಂತೆ ಸಾಮಾಜಿಕ ತಾರತಮ್ಯದ ಕಲ್ಪನೆಯೂ ಕಾಲ್ಪನಿಕವೇ. ಸಮಾಜದ ಯಾವದೋ ಒಂದು ಅಂಗದವರು ತಾವು ಶ್ರೇಷ್ಠರು ಎಂದು ಭಾವಿಸಿಕೊಂಡರೆ ಇತರರು ಅದನ್ನು ಒಪ್ಪಿಕೊಳ್ಳುವ ಅಗತ್ಯವಿಲ್ಲ. ಅವರ ನಡೆನುಡಿಗಳಲ್ಲಿಯ ಗ್ರಾಹ್ಯವಾದ ಅಂಶಗಳನ್ನು ತೆಗೆದುಕೊಳ್ಳಬಹುದು. ಆದರೆ ತಮ್ಮ ನಡೆನುಡಿಗಳು ಕೀಳೆಂದು ಭಾವಿಸುವ ಅಗತ್ಯವಿಲ್ಲ. ಹೀಗೆಯೇ ವಿಶ್ಲೇಷಿಸುತ್ತ ಹೋದರೆ ಮೇಲು ಕೀಳು ಎಂಬುದು ಅನೇಕ ಅಂಶಗಳಲ್ಲಿ ಕಾಲ್ಪನಿಕವಾಗಿದ್ದು ಆರ್ಥಿಕ, ಶೈಕ್ಷಣಿಕ ಸಮತೆಯಿಂದ ಈ ಭಾವನೆಯನ್ನು ಶಿಥಿಲಗೊಳಿಸಬಹುದು ಎಂಬುದು ಮನವರಿಕೆಯಾಗುವುದು. ●

ಮಾನಸಿಕ ರೋಗದ

ಒಂದು ನಮೂನೆ

# ಜನರೇಕೆ ಓಡಿಹೋಗುತ್ತಾರೆ?

*ತ.ಸದಾನಂದರಾವ್*

ಇಲ್ಲಿ ಕೊಡಲಾಗುವ ಎರಡು ಘಟನೆಗಳೂ ನನ್ನ ಸ್ವಂತ ಅನುಭವದ ಪರಿಧಿಯೊಳಗೆ ಬಂದವುಗಳು. ಬಹಳ ಹಿಂದೆ ಶಾಲಾ ಅಧ್ಯಾಪಕನಾಗಿ ಮಂಗಳೂರಿನ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ನನ್ನ ಸಹೋದ್ಯೋಗಿಗಳಲ್ಲಿ ಒಬ್ಬರು ಆಟೋಟಗಳ ಅಧ್ಯಾಪಕರು, ಅವರ ಹೆಸರು ಕಾಮತ್ ಎಂದಂದುಕೊಳ್ಳೋಣ. ಬಹಳ ಚಟುವಟಿಕೆಯ ಯುವ ಅಧ್ಯಾಪಕರು. ಸಂಬಳಕ್ಕೆ ತಕ್ಕ ಸೇವೆ ಸಲ್ಲಿಸುವವರಲ್ಲ, ಬದಲಿಗೆ ವಿದ್ಯಾರ್ಥಿಗಳನ್ನು ಒಲಿಸಲು ದಿನವೊಂದಕ್ಕೆ ಹೊಸತೊಂದು ಚಟುವಟಿಕೆಯಲ್ಲಿ ನಿರತರಾಗಿದ್ದ ಶ್ರದ್ಧಾವಂತ ಅಧ್ಯಾಪಕರು. ಅವರಿಗೆ ಆಗತಾನೆ ಮದುವೆಯಾಗಿ ಬಂದಿದ್ದ ಪತ್ನಿ ಅದೇ ಆಡಳಿತಯಡಿಯಲ್ಲಿದ್ದ ಮತ್ತೊಂದು ಶಾಲೆಯಲ್ಲಿ ಅಧ್ಯಾಪಕಳು. ಈ ನನ್ನ ಸಹೋದ್ಯೋಗಿಗೆ ಏನು ತೋರಿತೋ, ನೃತ್ಯ ಕಲಿಯಲು ತೊಡಗಿದರು. ಮಾತ್ರವಲ್ಲದೆ ಶಾಲಾ ವರ್ಧ್ಯಂತ್ಯುತ್ಸವದಲ್ಲಿ ನೃತ್ಯ ಮಾಡಿಯೂ ತೋರಿಸಿದರು. ಹೀಗೆ ಎಲ್ಲವೂ ಸುಗಮವಾಗಿ ನಡೆಯುತ್ತಿದೆಯೆಂದು ನಮಗೆ ಕಾಣುತ್ತಿದ್ದಂತೆಯೆ ಒಂದು ದಿನ ಬೆಳಗ್ಗೆ ಅವರು ಇದ್ದಕ್ಕಿದ್ದಂತೆ ನಾಪತ್ತೆಯಾದರೆಂಬುದನ್ನು ಕೇಳಿದಾಗ ನಮಗಾದ ಆಶ್ಚರ್ಯಕ್ಕೆ ಎಣೆಯಿಲ್ಲ. ಆ ರೀತಿ ನಾಪತ್ತೆಯಾದ ನನ್ನ ಸಹೋದ್ಯೋಗಿ ಮನೆಗೆ ಹಿಂದಿರುಗುವುದಿರಲಿ, ಈ ಮೂವತ್ತೈದು ವರ್ಷಗಳಲ್ಲಿ ಅವರ ಬಗ್ಗೆ ಒಂದಿಷ್ಟೂ ಸಮಾಚಾರ ಅವರ ಮನೆಯವರಿಗಾಗಲಿ ನಮಗಾಗಲಿ ಸಿಕ್ಕಿಲ್ಲ.

ಇದೇ ರೀತಿ ನಡೆದ ಇನ್ನೊಂದು ಘಟನೆಯೂ ಇಷ್ಟೇ ಸೋಜಿಗದ್ದು. ಇದು ನಡೆದದ್ದು ದಿಲ್ಲಿಯಲ್ಲಿ - ಸುಮಾರು ಇಪ್ಪತ್ತು ವರ್ಷಗಳ ಹಿಂದೆ. ನಾನು ಕೆಲಸ ಮಾಡುತ್ತಿದ್ದ ಸಂಸ್ಥೆಯಲ್ಲಿ ನನ್ನ ಒಂದು ವೈಯಕ್ತಿಕ ಸಮಸ್ಯೆಯ ಬಗ್ಗೆ ಸಲಹೆಗಾಗಿ ಅದೇ ಸಂಸ್ಥೆಯಲ್ಲಿ ಇನ್ನೊಂದು ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಉಚ್ಚ ಅಧಿಕಾರಿಯ ಬಳಿ ಆಗಾಗ ಹೋಗುವುದು ಅಗತ್ಯವಾಗುತ್ತಿತ್ತು. ಅವರೂ ಕನ್ನಡಿಗರೇ ಆದ್ದರಿಂದ ನಮ್ಮಿಬ್ಬರೊಳಗೆ ಆತ್ಮೀಯತೆ ಬೆಳೆದು ಬಂದಿತ್ತು. ಅವರು ಭಾರತ ಸರಕಾರದ ಸ್ಥಾಯೀ ಅಧಿಕಾರಿಗಳಾಗಿದ್ದುದರಿಂದ ಬಹು ಚೆನ್ನಾದ ಸರಕಾರೀ ಮನೆಯಲ್ಲಿ ಇದ್ದರು. ಅಲ್ಲದೆ ಸುಖಸಂಸಾರ ನಡೆಸಿಕೊಂಡು ಬರುವಂತೆ ಕಾಣುತ್ತಿತ್ತು. ಅವರು ಶ್ರದ್ಧೆಯಿಂದ ಆ ವಿಭಾಗವನ್ನು

ನಡೆಸಿಕೊಂಡು ಬರುತ್ತಿದ್ದರೆಂಬುದಕ್ಕೆ ಆ ವಿಭಾಗದ ಅಂದಿನ ಪ್ರಕಾಶನಗಳು ಇಂದಿಗೂ ಸಾಕ್ಷಿಯಾಗಿ ನಿಂತಿವೆ. ಎಷ್ಟೋ ಬಾರಿ ನಾನು ಅವರನ್ನು ಭೇಟಿಯಾಗಲು ಹೋಗಿದ್ದಾಗ ತಾವು ಅತಿ ಉಚ್ಚ ಅಧಿಕಾರಿಯಾಗಿದ್ದರೂ ಪುಸ್ತಕದ ಡಮ್ಮಿಯನ್ನು ಸ್ವತಃ ತಯಾರಿಸುತ್ತಿದ್ದುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಆದರೆ ಒಂದು ದಿನ ಕಾರ್ಯಾಲಯಕ್ಕೆ ಹೋದಾಗ, ಅವರು ಇದ್ದಕ್ಕಿದ್ದಂತೆ ಹೆಂಡತಿ ಮಕ್ಕಳನ್ನು ಬಿಟ್ಟು ಎಲ್ಲೋ ಹೋದ ಸಮಾಚಾರ ತಿಳಿದು ನನಗೆ ಅತೀವ ದುಃಖವಾಯಿತು. ಹಾಗೆ ಹೋದವರು ಇಂದಿಗೂ ಹಿಂದೆ ಬಂದಿಲ್ಲವೆಂದು ತಿಳಿಯುತ್ತೇನೆ.

ಹೀಗೆ ಊರು ಮನೆ ಬಿಟ್ಟು ಓಡಿ ಹೋಗುವ ಘಟನೆಗಳು ನಿತ್ಯವೂ ಎಲ್ಲೆಡೆಯೂ ನಡೆಯುತ್ತವೆ. ಹೀಗೆ ಕಣ್ಮರೆಯಾಗುವ ಜನರಲ್ಲಿ ಎಳೆಯರು ಇದ್ದಾರೆ, ಪ್ರಾಯ ಸಂದವರೂ ಇದ್ದಾರೆ. ಅನೇಕ ವೇಳೆ ಹೀಗೆ ಕಣ್ಮರೆಯಾಗುವವರಲ್ಲಿ ಹಲವರು ಒಮ್ಮಿಂದೊಮ್ಮೆಗೆ ಕಾಣಿಸಿಕೊಳ್ಳುವುದೂ ಇದೆ. ಆದರೆ ಕೆಲವರಂತೂ ಎಂದೆಂದಿಗೂ ಹಿಂದಿರುಗದೆ, ಅವರ ಆಶೆಯನ್ನೇ ಬಿಟ್ಟು ಬಿಡುವಂತಾಗಿರುವುದೂ ಉಂಟು.

ಪ್ರಾಯವಾದವರು ಹೀಗೆ ಊರು ಮನೆ ಬಿಟ್ಟು ಹೋಗುವಾಗ, ಏನೋ ಸಂಸಾರದ ತಾಪತ್ರಯದಿಂದ ವಿರಕ್ತಿ ಹುಟ್ಟಿ ಸಂನ್ಯಾಸಿಯಾಗಿ ಜೀವನ ನಡೆಸುತ್ತಿರಬೇಕೆಂದು ನಾವು ಊಹಿಸಿ ಸುಮ್ಮನಾಗುತ್ತೇವೆ. ಅದಲ್ಲವಾದರೆ ಏನೋ ಸಂಸಾರದ ಅಂತಃಕಲಹದಿಂದಲೋ, ವ್ಯವಹಾರದಲ್ಲಿ ಉಂಟಾದ ಅವಾಂತರದಿಂದಲೋ, ನ್ಯಾಯದ ಬಲೆಯಿಂದ ತಪ್ಪಿಸಿಕೊಳ್ಳಲೆಂದೋ ಓಡಿ ಹೋಗಿರಬೇಕೆಂದು ನಾವೆಂದುಕೊಳ್ಳುತ್ತೇವೆ.

ಮೇಲಿನವುಗಳೆರಡೂ ಅಸಹಜವೇನಲ್ಲ. ಆದರೆ ಇಂತಹ ಹಲವಾರು ಘಟನೆಗಳು ಮನೋವಿಕಾರದ ಒಂದು ವರ್ಗಕ್ಕೆ ಸೇರಿದ ವ್ಯಕ್ತಿಗಳಿಗೆ ಸಂಬಂಧಿಸಿದವುಗಳಾಗಿವೆಯೆನ್ನು-

ವುದೂ ಅಷ್ಟೇ ನಿಜ. ಮನೋವಿಕೃತ ರೋಗಗಳಲ್ಲಿ ಅತ್ಯಂತ ಸಾಮಾನ್ಯವಾಗಿ ಕಾಣಲು ಸಿಕ್ಕುವ ರೋಗಗಳ ಒಂದು ವರ್ಗವೇ ಹಿಸ್ಟೀರಿಯಾ. ತನ್ನ ''ಅವಶ್ಯಕತೆ''ಗಳನ್ನು ತೃಪ್ತಿಕರವಾಗಿ ಪೂರೈಸಿಕೊಳ್ಳುವುದರೊಂದಿಗೆ ಯಾವುದೇ ಒತ್ತಡದಿಂದ ತಪ್ಪಿಸಿಕೊಳ್ಳುವುದು ಹಿಸ್ಟೀರಿಯಾದ ಮುಖ್ಯ ಗುಣ. ಹಿಸ್ಟೀರಿಯದ ಕೆಲವು ವೈಖರಿಗಳು, ಎಲ್ಲವನ್ನೂ ಮರೆತು ಹಾಕುವುದು (amnesia), ಬಹುಮುಖಿ ವ್ಯಕ್ತಿತ್ವ (multiple personality) ಹಾಗೂ ಓಡಿ ಹೋಗುವುದು (fugue).

ಮಾನಸಿಕ ಒತ್ತಡವನ್ನು ಉಂಟುಮಾಡುವ ಸಂದರ್ಭಗಳು ಹಿಸ್ಟೀರಿಕ್ಕೆ ಕಾರಣವಾಗುತ್ತವೆ. ಉದ್ಯಮದಲ್ಲಿ ನಷ್ಟ ಹೆಚ್ಚುತ್ತ ಹೋದಂತೆ ಸಾಲದ ಹೊರೆಯೂ ಹೆಚ್ಚುತ್ತದೆ. ಸಾಲ ತೀರಿಸದಿದ್ದರೆ ಮರ್ಯಾದೆ ಹೋಗುವ ವಿಚಾರ. ಉದ್ಯಮದ ಚರ, ಸ್ಥಿರ ಸೊತ್ತನ್ನು ಮಾರಿ ಸಾಲ ತೀರಿಸುವುದೋ, ದಿವಾಳಿಯೆಂದು ಘೋಷಿಸಿಕೊಳ್ಳುವುದೊ, ಯಾವ ರಸ್ತೆಯನ್ನು ಕೈಗೊಂಡರೂ ಮರ್ಯಾದೆಗೆ ಧಕ್ಕೆ ತಟ್ಟುವುದು ತಪ್ಪಿದ್ದಲ್ಲ. ಅಥವಾ, ಎಲ್ಲರೂ ಹೊಗಳುತ್ತಿದ್ದ, ಎಲ್ಲರ ದೃಷ್ಟಿ ತಗಲುವಂತಹ ದಾಂಪತ್ಯ ಜೀವನದಲ್ಲಿ ಪತ್ನಿಯ ಅನೈತಿಕ ಸಂಬಂಧದಿಂದ ಒಮ್ಮೆಗೇ ಆಘಾತ. ಆಕೆ ವ್ಯಭಿಚಾರಿಣಿಯೆಂದು ಘೋಷಿಸಲೊ, ಹಲವಾರು ವರ್ಷ ಸುಖ ಸಂಸಾರ ನಡೆಸಿ ಬಂದ ಹೆಂಡತಿಯನ್ನು ಪರಿತ್ಯಜಿಸಲೊ ಅಥವಾ ಅನಭಿಜ್ಞನ ಸೋಗು ಹಾಕಲೊ? ಮಾನಸಿಕವಾಗಿ ಮೊದಲೇ ದುರ್ಬಲನಾದ ಮನುಷ್ಯ ಈ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದಾಗ ಹಸಿದ ಬೆಕ್ಕಿನಂತೆ - ಹಾಲಿಗೆ ಬಾಯಿ ಹಾಕಿದರೆ ವಿದ್ಯುತ್ ಸ್ಪರ್ಶಾಘಾತ, ಬಿಟ್ಟರೆ, ತಡೆಯಲಾಗದ ಹಸಿವೆ! ಇದೇ ಹಿಸ್ಟೀರಿಯಾ ತಲೆಹಾಕಲು ಯೋಗ್ಯ ಸಂದರ್ಭ.

ಇಂತಹ ಜಟಿಲ ಸಮಸ್ಯೆಗಳನ್ನೆದುರಿಸಲಾಗದೆ ಇರುವಾಗ ಕೆಲವು ವ್ಯಕ್ತಿಗಳಿಗೆ ತೋರುವ ಒಂದೇ ಒಂದು ದಾರಿಯೆಂದರೆ ಸಮಸ್ಯೆಯಿಂದ ದೂರ

ಸರಿಯುವುದು. ಸಮಸ್ಯೆಯಿಂದ ದೂರ ಹೋಗಲು ಪ್ರಾಕೃತಿಕವಾಗಿಯೂ ದೂರ ಹೋಗಬೇಕು. ಇಲ್ಲಿ ಮನಸ್ಸು ವ್ಯಕ್ತಿಯ ಕೆಲಸ ವನ್ನು ಹಗುರವಾಗಿಸುವ ರೀತಿ ನಿಜಕ್ಕೂ ಶ್ಲಾಘ ನೀಯ. ಮನೆ ಸಮಾಜದಿಂದ ದೂರ ಹೋದರೆ ನೆನಪು ಮನಸ್ಸನ್ನು ಕಾಡುವುದು ನಿಂತೀತೆ? ಮನೆಯಿಂದ ಸಾವಿರಾರು ಮೈಲು ದೂರ ಹೋಗಿಯೂ ಸದಾ ಯಾವ ಸಮಸ್ಯೆಯಿಂದ ದೂರವಿರಬೇಕೆಂದು ಹೋದುದೋ ಅದೇ ಸಮಸ್ಯೆಯನ್ನು ಮನಸ್ಸಿನಲ್ಲಿ ಚರ್ವಿತಚರ್ವಣ ಮಾಡಿದರೆ ಮನದ ದುಗುಡ ಹೇಗೆ ತಾನೆ ಕಡಿಮೆ ಯಾದೀತು? ಇದಕ್ಕೆ ಪರಿಹಾರವೆಂದರೆ ಎಲ್ಲ ವನ್ನೂ ಮರೆತುಬಿಡುವುದು (Psychogenic amnesia) ದೂರ ಸರಿದ ಮನುಷ್ಯನ ಸ್ಮೃತಿ ಸಂಗ್ರ ಹದ ಚೇತನಾವಸ್ಥೆಯ ಭಾಗದಿಂದ ಆ ಸಮ ಸ್ಯೆಗೆ, ಪರಿಸ್ಥಿತಿಗೆ ಸಂಬಂಧಿಸಿದ ಎಲ್ಲಾ ಅಂಶ ಗಳೂ ತಾತ್ಕಾಲಿಕವಾಗಿ ಲುಪ್ತವಾಗುತ್ತವೆ. ತನ್ನ ಹೆಸರನ್ನೂ ಮರೆತ ವ್ಯಕ್ತಿ ಎಲ್ಲೋ ಹೋಗಿ ಹೊಸ ಹೆಸರನ್ನು ಹಾಕಿಕೊಂಡು ಹೊಸದಾಗಿ ಜೀವನವನ್ನು ಆರಂಭಿಸುತ್ತಾನೆ. ಈ ಹೊಸ ಜೀವನದಲ್ಲಿ ಹಿಂದಿನ ಯಾವ ಅಂಶವೂ ನೆನಪಿಗೆ ಬಾರದಂತೆ ವ್ಯಕ್ತಿಯ ಸುಪ್ತ ಮನಸ್ಸು ಹೇಗೆ ಪ್ರಯತ್ನ ಮಾಡುವುದೆಂಬುದಕ್ಕೆ ಬರ್ನಿಸಳ ಒಂದು ಉದಾಹರಣೆ ಸಾಕು.



"ನಾನು ನಿನ್ನನ್ನ ವರದಕ್ಷಿಣೆ ತೆಗೆದುಕೊಳ್ಳದೇ ಮದುವೆ ಯಾದೆ ಅಂದ್ರೆ, ಯಾರೂ ನಂಬೋದೆ ಇಲ್ಲ ಸುಜಾತಾ..."

ನಲವತ್ತೆರಡು ವರ್ಷದ ಬರ್ನಿಸ್ ತನ್ನ ಸಂಸಾರ ಬಿಟ್ಟು ನಗರದಿಂದ ಒಂದು ಸಾವಿರ ಮೈಲುಗಳಗಿಂತಲೂ ದೂರದ ಊರಿಗೆ ಓಡಿ ಹೋಗಿ ತನ್ನ ಕಾಲೇಜು ಸಹಪಾಠಿಯ ಹೆಸರನ್ನು ಹಾಕಿಕೊಂಡು ಜೀವನ ನಡೆಸುತ್ತಿದ್ದಳು. ಈ ಎರಡನೆ ಜೀವನದಲ್ಲಿ ಅವಳಿಗೆ ಪೂರ್ವಾಶ್ರ ಮದ ಯಾವ ವಿಚಾರವೂ ನೆನಪಿನಲ್ಲಿ ಇಲ್ಲ ಮಾತ್ರವಲ್ಲ, ನಾಲ್ಕೈದು ವರ್ಷ ಹೀಗೆ ನಡೆದು ಕೊಂಡು ಬಂದ ಮೇಲೆ ಒಂದು ದಿನ ಅವಳ ಬಾಲ್ಯ ಸ್ನೇಹಿತೆಯೊಬ್ಬಳು ದಾರಿಯಲ್ಲಿ ಸಿಕ್ಕಿ ದಾಗ ಅವಳ ಗುರುತು ಹಿಡಿದು ಅವಳ ಗಂಡನಿ ರುವ ಶಿಕಾಗೋ ನಗರಕ್ಕೆ ಬರ್ನಿಸಳನ್ನು ಕರೆತಂ ದಾಗ ಆಕೆ ತನ್ನವರ ಸಂಬಂಧವನ್ನೇ ಅಲ್ಲಗಳೆ ದಳು. ಆದರೆ ಇಂತಹ ಎಲ್ಲಾ ಪ್ರಕರಣಗಳಲ್ಲಿ ಮನೋವಿಶ್ಲೇಷಣೆ ಅಥವಾ ಸಮ್ಮೋಹಿನಿಯ ಮೂಲಕ ಸುಪ್ತಚೇತನದಿಂದ ನೆನಪು ಮರುಕಳಿ ಸುವಂತೆ ಮಾಡುವುದು ಸಾಧ್ಯವಾಗುತ್ತದೆ. ಈ ರೀತಿ ಬರ್ನಿಸಳನ್ನು ಸಮ್ಮೋಹಿನಿಗೆ ಒಳಪಡಿಸಿ ದಾಗ ಅವಳ ಹಿಂದಿನ ಜೀವನದ ನೆನಪಾಗಿ ಆಕೆ ಗಂಡ - ಮಕ್ಕಳೊಡನೆ ಕಡಿದ ಸಂಸಾರವನ್ನು ಪುನಃ ಜೋಡಿಸಬಲ್ಲವಳಾದಳು.

ಬರ್ನಿಸ್ ಓಡಿಹೋಗಲು ಕಾರಣವೇನು? ಕಟ್ಟಾ ಧರ್ಮಾವಲಂಬಿ ತಂದೆತಾಯಿಂದಿರ ಎರ ಡನೆ ಮಗಳಾದ ಬರ್ನಿಸಳಿಗೆ ಹೆತ್ತವರ ವರ್ತನೆ ಯಲ್ಲಿ ಕಂಡುಬಂದ ವಿರೋಧಾಭಾಸ ಜುಗುಪ್ಸೆ ಯನ್ನುಂಟು ಮಾಡಿತ್ತು. ಧರ್ಮಪರಾಯಣ ರೆನಿಸಿಕೊಳ್ಳುವ [illegible] ಒಂದೆಡೆ, ನಿತ್ಯ ಗಂಡ-ಹೆಂಡತಿ ಪರಸ್ಪರರನ್ನು ಚಾರಿತ್ರ್ಯದ ಬಗ್ಗೆ ಸಂಶಯದ ದೃಷ್ಟಿಯಿಂದ ನೋಡುವುದು ಇನ್ನೊಂದೆಡೆ. ಇದರಿಂದ ತನ್ನ ಮೂಲದ ಬಗ್ಗೆಯೇ ಸಂಶಯ ಬರುವಂತಾಯಿತು ಬರ್ನಿಸ ಳಿಗೆ ಅವಳ ಏಕಮಾತ್ರ ಆಧಾರವಾಗಿದ್ದ ಹಿಂ

ಯಕ್ಕ ತೀರಿಕೊಂಡಾಗ ಬರ್ನಿಸ್ ನಿಜಕ್ಕೂ ಪ್ರೀತಿ ಕಾಣದ ತಬ್ಬಲಿಯಂತಾದಳು. ಆ ಮೇಲೆ ಕಾಲೇಜು ಸಹಪಾಠಿ ರೋಸಳ ಮಧುರ ಸಂಬಂಧ. ಹೀಗಿರುತ್ತ ರೋಸಳಿಗೆ ಮದುವೆ ನಿಶ್ಚಯವಾಗುತ್ತದೆ. ರೋಸಳ ಭಾವೀಪತಿ ಯಲ್ಲಿ ಬರ್ನಿಸಳೀಗ ಆಸಕ್ತಳಾಗುತ್ತಾಳೆ. ಇದರ ಬಗ್ಗೆ ಎಳ್ಳಷ್ಟೂ ಸಂಶಯವಿಲ್ಲದ ಭಾವೀಪತಿ ರೋಸಳ ವಿವಾಹ ಜರುಗಿದಾಗ ಬರ್ನಿಸಳಿಗೆ ಯಾರೂ ತನ್ನವರಿಲ್ಲವೆಂಬ ಭಾವನೆ ಬರುತ್ತದೆ. ಹಿಂದಿನದೆಲ್ಲವೂ ಕಲ್ಪನೆ, ನಿಜವಲ್ಲ, ಎಂಬ ಭ್ರಮೆಯಾಗುತ್ತದೆ. ಇದೇ ಎಲ್ಲವನ್ನೂ ಅಲ್ಲಗಳೆದು ದೂರ ಓಡಿಹೋಗಲು ಕಾರಣವಾಗುತ್ತದೆ.

ಅವರು ಹೊಸ ಜೀವನವನ್ನು ನಡೆಸುತ್ತಿರುವಾಗ ತಮ್ಮಲ್ಲಿ ಏನೋ ವಿಚಿತ್ರವಿದೆಯೆಂದು ನಾಲ್ಕು ಜನರಿಗೆ ಕಾಣದ ಹಾಗೆ ಸಾಮಾನ್ಯ ಜೀವನವನ್ನು ನಡೆಸಿಕೊಂಡು ಹೋಗುವುದು ಈ ರೀತಿ ಓಡಿಹೋಗುವವರ ಒಂದು ವೈಶಿಷ್ಟ್ಯ. ಇನ್ನೊಂದು ವೈಶಿಷ್ಟ್ಯವೆಂದರೆ, ತನ್ನವರನ್ನಷ್ಟೆ ಅಲ್ಲ, ತನ್ನ ಹೆಸರನ್ನೇ ಮರೆತರೂ ಜೀವನ ಅಭ್ಯಾಸಗಳನ್ನು ಇವರು ಎಂದಿಗೂ ಮರೆಯುವುದಿಲ್ಲ. ಅಷ್ಟೆ ಅಲ್ಲ, ನೈತಿಕವಾಗಿ 'ಪೂರ್ವಾಶ್ರಮ'ದ ಕಟ್ಟಳೆಗಳಿಗೆ ವಿರೋಧವಿರುವ ಯಾವುದನ್ನೂ ಇವರು ಮಾಡುವುದಿಲ್ಲ. ಇದಕ್ಕೆ ಕಾರಣವೆಂದರೆ ಹಿಂದಿನ ಆಶ್ರಮದ ಅನುಭವಗಳು ನೆನಪಿನಾಳದಲ್ಲಿ ಹುದುಗಿರುತ್ತವೆಯೇ ಹೊರತು ನಷ್ಟಗೊಂಡಿರುವುದಿಲ್ಲ. ಆದ್ದರಿಂದಲೇ ಈ ಮರೆವನ್ನು ಮಾನಸಿಕ ಕಾರಣಜನ್ಯ (Psychogenic) ಎಂದು ವರ್ಣಿಸಲಾಗುತ್ತದೆ. ಸೂಕ್ತ ಸಮಯ, ಪರಿಸ್ಥಿತಿ ಒದಗಿ ಬಂದರೆ ಆ ಅನುಭವಗಳ ನೆನಪು ಚೇತನಾವಸ್ಥೆಗೆ ಬರಲು ಸಾಧ್ಯವಿದೆ.

ಹಾಗೆ ಬಂದಾಗ, ತಾನೆಲ್ಲಿ ಏಕೆ ಇದ್ದೇನೆಂದು ಒಮ್ಮಿಂದೊಮ್ಮೆಗೇ ಗಾಬರಿಗೊಂಡು, ಪುನಃ ಹಿಂದೆ ಬಿಟ್ಟು ಬಂದ ಊರಿನಲ್ಲೋ ಮನೆಯಲ್ಲೋ ಥಕ್ಕನೆ ಕಾಣಿಸಿಕೊಳ್ಳುವುದೂ ಉಂಟು. ಆಗ ಮನೆಯವರಿಗೂ ಸ್ನೇಹಿತರಿಗೂ ಆಶ್ಚರ್ಯವಾಗಿ, "ಎಲ್ಲಿ ಹೋಗಿದ್ದೀ?" ಎಂದು ಕೇಳಿದರೆ ವ್ಯಕ್ತಿಯು ಏನನ್ನೂ ಹೇಳುವ ಸ್ಥಿತಿಯಲ್ಲಿ ಇರುವುದಿಲ್ಲ.

ಮಾನಸಿಕ ವಿಕಾರಗಳಿಗೊಳಗಾಗಿ ಊರು, ಮನೆಯಿಂದ ಪಲಾಯನಗೈಯುವವರ ಸಂಖ್ಯೆ ಕಡಿಮೆಯಲ್ಲ. ಇವರಲ್ಲಿ ಹೆಚ್ಚಿನಂಶ ಜನರ 'ನಾಪತ್ತೆಯ ಅವಸ್ಥೆ' ಕೆಲವು ಗಂಟೆಗಳಿಂದ ಕೆಲವು ದಿನಗಳವರೆಗೆ ಮಾತ್ರ ಇರುತ್ತವೆ. ಆದರೆ ಇವರಲ್ಲಿ ಸ್ವಲ್ಪಾಂಶ ತಲೆಮರೆತು ಹೋದವರು ವರ್ಷಗಟ್ಟಳೆ ಹಿಂದೆ ಬರುವುದಿಲ್ಲ. ಆದರೆ ಸಂಬಂಧಿಕರಲ್ಲಿ, ಸ್ನೇಹಿತರಲ್ಲಿ ಯಾರಿಗೂ ವ್ಯಕ್ತಿಯ ಮಾನಸಿಕ ಸ್ಥಿತಿಯ ಬಗ್ಗೆ ಏನೇನೂ ತಿಳುವಳಿಕೆ ಇಲ್ಲದಿರುವುದರಿಂದ ವ್ಯಕ್ತಿಯು ನಿಜಕ್ಕೂ ಕಣ್ಣಮುಂದೆ ಇರುವಾಗ ಯಾರೂ ಏನೂ ಮಾಡುವಂತಿಲ್ಲ. ನಾಪತ್ತೆಯಾದ ಮೇಲೆ ಪತ್ರಿಕೆಗಳಲ್ಲಿ ಚಿತ್ರ ಪ್ರಕಟಿಸಿ ತಮ್ಮಿಂದಾದ ಪ್ರಯತ್ನ ಮಾಡಿದ್ದೇವೆ ಎಂದಷ್ಟೆ ಹೇಳಿಕೊಳ್ಳಬಹುದು. ಆಮೇಲೆ, ನಾಪತ್ತೆಯಾದುದು ಎಷ್ಟು ಆಶ್ಚರ್ಯಕರವೋ ಅಷ್ಟೇ ಆಶ್ಚರ್ಯಕರವೆಂಬಂತೆ ಆತ ಒಂದಾನೊಂದು ದಿನ ಹಿಂದಿರುಗಿ ಕಾಣಿಸಿಕೊಂಡರೆ ಸಂತೋಷದಲ್ಲಿ ಎಲ್ಲರೂ ಭಾಗಿಗಳಾಗಬಹುದು. ●

---

1910ನೇ ವರ್ಷದ ಜನವರಿ 8ರಂದು ಚೀನದ ಫುಕೀನ ಪ್ರಾಂತದ ಆಮಾಯ್ ಎಂಬ ಗ್ರಾಮದಲ್ಲಿ ಜಗತ್ತಿನ ಅತಿ ಕಿರಿಯ ಚೀನಿ ದಂಪತಿಯೊಂದಕ್ಕೆ ಪುತ್ರ ಸಂತಾನ ಪ್ರಾಪ್ತಿಯಾಯಿತು. ಗಂಡ ಒಂಬತ್ತು ವಯಸ್ಸಿನವನಾದರೆ ಹೆಂಡತಿಗೆ ಎಂಟು ವರ್ಷ. ಫುಕೀನ ಪ್ರಾಂತದ ಸರಕಾರಿ ಅಧಿಕೃತ ಚಿತ್ರಪಟ ಸಂಗ್ರಹಾಲಯದಲ್ಲಿ ಈ ದಂಪತಿ ಮತ್ತು ಕೂಸಿನ ಚಿತ್ರಗಳು ವಿವರಗಳು ಇವೆ. "ವೈದ್ಯಕೀಯ ಸಂಶೋಧಕರ ಅಭಿಪ್ರಾಯದ ಪ್ರಕಾರ ಈ ಕಿರಿವಯಸ್ಸಿನ ತಾಯಿಯ ಹೊಟ್ಟೆಯಲ್ಲಿ ಆಕೆ ಹುಟ್ಟುವಾಗಲೇ ಭ್ರೂಣ ಬೆಳೆದಿತ್ತು" ಎಂದು ಅಲ್ಲಿ ಬರೆಯಲ್ಪಟ್ಟಿದೆ.

ಎಂ. ಮೊಹಮ್ಮದ ಶಫಿ



# ನಾನು ನಿಜವಾಗಿ ಹುಟ್ಟಿದ್ದೆನೆ?

ಲಾಂಗೂಲಾಚಾರ್ಯ

ಆ ಬಗ್ಗೆ ನನಗಿನ್ನೂ ಸಂದೇಹವಿದೆ



ನನ್ನ ರಾಮಕಹಾನಿಯನ್ನು ಪ್ರಾರಂಭದಿಂದಲೇ ಪ್ರಾರಂಭಿಸಬೇಕೆಂದರೆ ನನ್ನ ಜನ್ಮದ ವೃತ್ತಾಂತವನ್ನು ಮೊದಲು ಹೇಳಬೇಕು. ಆದರೆ ಇಲ್ಲಿಯೇ ಕಷ್ಟವೂ ಪ್ರಾರಂಭವಾಗುತ್ತದೆ. ಸಮಸ್ಯೆಯೆಂದರೆ, ನಾನು ನಿಜವಾಗಿ ಹುಟ್ಟಿದೆನೇ? ನನ್ನ ತಂದೆ ತಾಯಿಗಳೂ ಬಂಧುಗಳೂ ನಾನು ಹುಟ್ಟಿದೆನೆಂದು ಹೇಳುತ್ತಾರೆ. ಆದರೆ ಈ ಮಹನೀಯರೆಲ್ಲರೂ ನನ್ನ ಹತ್ತಿರ ಎಷ್ಟೆಲ್ಲ ಹಸಿ ಹಸಿ ಸುಳ್ಳುಗಳನ್ನು ಹೇಳಿದ್ದಾರೆಂದರೆ ಅವರ ಮಾತುಗಳ ಮೇಲೆ ಭರವಸೆಯಿಡುವುದು ಸಾಧ್ಯವಿಲ್ಲೆಂದು ನಾನು ಬಹಳ ಬೇಗ ತೀರ್ಮಾನಿಸಿದ್ದೆ. ನನ್ನ ಸ್ವಂತ ಊಹೆಯನ್ನು ಹೇಳುವುದಾದರೆ ನಾನು ಮೊದಲಿನಿಂದಲೂ ಇಲ್ಲಿ ಇದ್ದೆ ಮತ್ತು ಒಂದು ದಿನ ನನ್ನ ಸುತ್ತಲೂ ಈ ಜಗತ್ತು ಹುಟ್ಟಿಕೊಂಡು ಬರಬರುತ್ತ ಬೆಳೆದು ವಿಸ್ತಾರಗೊಂಡಿತು. ನನ್ನ ತಂದೆ ತಾಯಿಗಳೂ ಆಮೇಲೆಯೆ ಹುಟ್ಟಿದರು. ನನಗೆ ತಾಯಿ ಹುಟ್ಟಿದ್ದರ ಮುಖ್ಯ ಉದ್ದೇಶ ನನ್ನ ಬಾಯಿ ಮುಚ್ಚಿಸುವುದಕ್ಕಾಗಿ ಮೊಲೆಯನ್ನು ಅದರಲ್ಲಿ ತುರುಕುವುದು ಮತ್ತು ನಾನು ಬಿದ್ದಾಗ ನನ್ನನ್ನು ಎತ್ತಿಕೊಳ್ಳುವುದಾಗಿತ್ತು. ನನ್ನ ತಾಯಿಗಿಂತ ಎಷ್ಟೋ ಕಾಲದ ನಂತರ ನನ್ನ ತಂದೆ ಹುಟ್ಟಿದರು. ಅವರ ಮುಖ್ಯ ಉದ್ಯೋಗ ನಾನು ಎದ್ದು ಓಡಾಡತೊಡಗಿದ ಮೇಲೆ ಕೈಯನ್ನು ಬಾಗಿಲ ಸಂದಿಯಲ್ಲಿ ಸಿಕ್ಕಿಸಿಕೊಂಡು ಕೂಗತೊಡಗಿದಾಗ ನನ್ನನ್ನು ಬೈಯುವುದು ಮತ್ತು ನನಗೆ ಮಾತು ಬರತೊಡಗಿದ ನಂತರ ನನಗೆ ಅರ್ಥವಿಲ್ಲದ ಶ್ಲೋಕಗಳನ್ನು ಹೇಳಿಕೊಡುವುದಾಗಿತ್ತು. ಮೊದಲನೆಯದನ್ನು, ಅಂದರೆ ತಾಯಿಯ ಮೊಲೆಯನ್ನು, ನಾನು ಬಹಳವಾಗಿ ಪ್ರೀತಿಸುತ್ತಿದ್ದೆ; ಮತ್ತು ಎರಡನೆಯದನ್ನು ಅಂದರೆ ತಂದೆಯವರು ಕಲಿಸುತ್ತಿದ್ದ ಶ್ಲೋಕಗಳನ್ನು ಅಷ್ಟೇ ತೀವ್ರವಾಗಿ ದ್ವೇಷಿಸುತ್ತಿದ್ದೆ.

ಆದರೆ ಅನೇಕ ವರ್ಷಗಳ ನಂತರ ನಾನು ನನ್ನ ಅಭಿಪ್ರಾಯವನ್ನು ಬದಲಿಸಿ ನಾನು ನಿಜವಾಗಿ ಹುಟ್ಟಿದನೆಂದೂ ನನ್ನ ತಂದೆ-ತಾಯಿಗಳು ನನಗಿಂತ ಮೊದಲೇ ಇದ್ದರೆಂದೂ ಒಪ್ಪಿಕೊಳ್ಳಬೇಕಾಯಿತು. ಸುತ್ತಲ ಪ್ರಪಂಚದಲ್ಲಿ ಎಲ್ಲೆ

ಲ್ಲಿಯೂ ಮಕ್ಕಳು ಹುಟ್ಟುತ್ತಿರುವುದನ್ನೂ ಬೆಳೆದು ಬಾಯಿ ಅಗಲಿಸಿ ಅಮೇರಿಕದ ಅಧ್ಯಕ್ಷರಿಗೆ ತಲೆನೋವುಂಟು ಮಾಡುವುದನ್ನೂ ಕಂಡ ಮೇಲೆ ನಾನೂ ಹೀಗೆಯೆ ಹುಟ್ಟಿ ಬೆಳೆದಿರಬೇಕೆಂಬ ತರ್ಕವನ್ನು ನಾನು ಮನ್ನಿಸಲೇ ಬೇಕಾಗಿದೆ.

ನಾನು ಹುಟ್ಟಿದಂದಿನಿಂದ ಒಂದು ದೊಡ್ಡ ವಿವಾದ ನಮ್ಮ ಕೌಟುಂಬಿಕ ವಲಯದಲ್ಲಿ ಮಸಗಿತೆಂದು ಆಮೇಲೆ ನನಗೆ ತಿಳಿಯಿತು. ನಾನು ಹೆರಿಗೆ ಮನೆಯಲ್ಲೂ ನೆರೆಮನೆಯ ತೋಮ ಮಡಿವಾಳನ ಕೋಳಿ ಅವನ ಹಿತ್ತಲಲ್ಲೂ ಏಕಕಾಲಕ್ಕೆ ಕೂಗಿದೆವಂತೆ. ಇದರಿಂದಾಗಿ ನಮ್ಮ ಬಂಧುಗಳಲ್ಲಿ ಶುಕ್ರವಾರವಾದಿಗಳು ಮತ್ತು ಶನಿವಾರವಾದಿಗಳು ಎಂದು ಎರಡು ಪಂಗಡಗಳಾದವು. ಶುಕ್ರವಾರವಾದಿಗಳು ಸೂರ್ಯೋದಯದ ವರೆಗೂ ವಾರ ಬದಲಾಗುವುದಿಲ್ಲವಾದ್ದರಿಂದ ನಾನು ಶುಕ್ರವಾರ ದಿನವೇ ಹುಟ್ಟಿದನೆಂದು ಅನೇಕ ಶಾಸ್ತ್ರಾಧಾರಗಳ ಸಹಿತ ವಾದಿಸಿದರಂತೆ. ಶನಿವಾರವಾದಿಗಳು ಕೋಳಿ ಕೂಗಿದ ಮೇಲೆ ದಿವಸ ಬದಲಾದ ಹಾಗೆಯೇ; ಆದ್ದರಿಂದ ನಾನು ಹುಟ್ಟಿದ್ದು ಶನಿವಾರವೇ ಎಂದು ಸಾಧಿಸಿದರು. ಅದಕ್ಕೂ ಕೆಡಕೆಂದರೆ, ಅವರು ನನ್ನ ಮೈಬಣ್ಣದ ಮೇಲೆ ಆಪಾದನೆ ದೃಷ್ಟಿಯನ್ನು ಬೀರಿ ಬೆಳ್ಳಿ ಚುಕ್ಕೆಯ ದಿನ ನಾನು ಹುಟ್ಟಿದ್ದರೆ ಈ ವರ್ಣ ನನಗಿರುವುದು ಸಾಧ್ಯವೇ ಇಧ್ದಿಲ್ಲವೆಂದು ಬೇರೆ ಪ್ರಮಾಣ ಕೊಟ್ಟರು. ಆದರೂ ನನ್ನ ತಾಯಿಗೆ ನಾನು ಶುಕ್ರವಾರವೇ ಹುಟ್ಟಿದೆನೆಂಬ ದೃಢವಾದ ನಂಬಿಕೆ ಇತ್ತು. ಹಂಬಲಿಸಿ ಹಡೆದ ಗಂಡು ಮಗು ಶನಿವಾರ ಹುಟ್ಟೀತೇ?

ನಾನು ಹುಟ್ಟಿದ ಒಂದು ತಿಂಗಳಲ್ಲಿ ಶುಕ್ರವಾರವಾದಿಗಳ ವಿಶ್ವಾಸದ ತಳ ಅಲುಗತೊಡಗಿತು. ನನ್ನ ತಂದೆ ಊರು ಬಿಟ್ಟು ನೂರಿಪ್ಪತ್ತು ಮೈಲು ದೂರದ ಮಲೆನಾಡ ಕೊಂಪೆಯಲ್ಲಿ ಕೆಲಸಕ್ಕೆ ಹೋದರು. ತಂದೆಯನ್ನು ಒಂದು ತಿಂಗಳೊಳಗೆ ಊರಿಂದ ಓಡಿಸುವ ಗಂಡಸು ಮಗ ಶನಿವಾರ ಹುಟ್ಟದೆ ಇರಲು ಸಾಧ್ಯವೇ? ನನ್ನ ಹನ್ನೆರಡನೆಯ




1967ರ ಅಗಸ್ಟ್ ಸಂಚಿಕೆಯಲ್ಲಿ ಪ್ರಕಟವಾದದ್ದು

ವರ್ಷದಲ್ಲಿ ನನ್ನ ತಂದೆ ತೀರಿಕೊಂಡ ಮೇಲಂತೂ ನಾನೊಬ್ಬ ಶನಿ ಸಂತಾನ ಎಂಬಲ್ಲಿ ಯಾರಿಗೂ ಸಂಶಯ ಉಳಿಯಲಿಲ್ಲ. ಇದರಲ್ಲಿ ತಂದೆಯನ್ನು "ಮುಕ್ಕಿ ತಿಂದ" ಮಗ ಹುಟ್ಟದಿದ್ದರೇ ಚೆನ್ನಾಗಿತ್ತು ಎಂದು ನನ್ನ ತಾಯಿ ಕೂಡ ಹೇಳತೊಡಗಿದರಂತೆ.

ಆದರೆ ನಾನೇನು ಮಾಡಲಿ ಹೇಳಿ? ಶನಿವಾರವೇ ಹುಟ್ಟಬೇಕೆಂದು ನನಗೆ ಆತುರವಿರಲಿಲ್ಲ. ನಾನು ಹುಟ್ಟುವ ಮೊದಲು ನನಗೆ ವಾರಗಳ ಲೆಕ್ಕವೇ ಗೊತ್ತಿದ್ದಿಲ್ಲ. (ಅಲ್ಲಿ ಒಳ್ಳೊಳ್ಳೇ ಹುಡುಗಿಯರ ಚಿತ್ರಗಳುಳ್ಳ ಕೆಲೆಂಡರುಗಳನ್ನು ತೂಗ ಹಾಕುವ ಪರಿಪಾಠವಿಧ್ದಿಲ್ಲ ನೋಡಿ.) ಒಂದು ದಿವಸ ಇನ್ನೊಂದು ದಿವಸದಷ್ಟೇ ಸುದಿನವೆಂದು ನಾನು ಭಾವಿಸಿದ್ದೆ. ಶನಿವಾರ ಹುಟ್ಟಬೇಡವೆಂದು ಯಾರಾದರೂ ನನಗೆ ತಿಳಿಸಿದ್ದರೆ ನಾನು ಖಂಡಿತವಾಗಿ ಅವರ ಸಂತೋಷಕ್ಕಾಗಿ ಇನ್ನೂ ಕೆಲ ಗಂಟೆಗಳು ಮೊದಲಾಗಿಯೆ ಹುಟ್ಟಬಹುದಾಗಿತ್ತು. ಶನಿವಾರ ಹುಟ್ಟಿದವರು ಕಪ್ಪಗಿರುತ್ತಾರೆಂದೂ ಶುಕ್ರವಾರ ನೆಲಕ್ಕೆ ಬಿದ್ದವರು ಶುಭ್ರವರ್ಣಗಳಾಗುತ್ತಾರೆಂದೂ ನನಗೆ ಗೊತ್ತಿದ್ದರಂತೂ ಬಿಳಿಯನ್ನು ಕಪ್ಪಾಗಿ ಮಾಡುವ ಆ ಅನಿಷ್ಟ ಮುಹೂರ್ತ ಒದಗುವ ಮೊದಲೇ ನಾನು ನನ್ನ ತಾಯಿಯ ಗರ್ಭಾಂಬುಧಿಯಿಂದ ದಡ ಸೇರಿಕೊಳ್ಳುತ್ತಿದ್ದೆ. ಹುಟ್ಟಿದ ಮೇಲೆ ನಮ್ಮ ಬಣ್ಣ ಬದಲಾಯಿಸುವುದು ಸಾಧ್ಯವಿಲ್ಲ ನಾವು ರಾಜಕಾರಣಿಗಳಾದ ಹೊರತು.

ಇಷ್ಟು ನಾನು ಹುಟ್ಟಿದ್ದರ ಕುರಿತು. ಇನ್ನು ನನ್ನ ವಂಶಾವಳಿಯನ್ನು ಕುರಿತು ಸ್ವಲ್ಪ ಹೇಳಲೇ ಬೇಕು. ನಾವು ಅಹಿಚ್ಛತ್ರದಿಂದ ನೇರವಾಗಿ ಪರ ಶುರಾಮ ಕ್ಷೇತ್ರಕ್ಕೆ ಬಂದ ಬ್ರಾಹ್ಮಣರು. ಬಹಳ, ಬಹಳ ಹಿಂದೆ ಆ ಪ್ರದೇಶದ ಯಾವನೊ ರಾಜನು ಯಾವುದೋ ಯಜ್ಞ ಮಾಡುವುದ ಕ್ಕೋಸ್ಕರ ತಾಜಾ ಬ್ರಾಹ್ಮಣರು ಬೇಕೆಂದು ಬಯ ಸಿದನು. ಅಲ್ಲಿ ನಮಗಿಂತ ಮೊದಲೂ ಬ್ರಾಹ್ಮಣ ರಿದ್ದರು ಎನ್ನಿ; ಆದರೆ ಅವರು ಸಾಕಷ್ಟು ತಾಜಾ ಇರಲಿಲ್ಲವೆಂದು ಆ ರಾಜ ಭಾವಿಸಿ ನಮಗಾಗಿ ಪಲ್ಲಕ್ಕಿ ಕಳಿಸಿದ. ನಿಜವಾಗಿ ನಾವೆಷ್ಟು ತಾಜಾ ಬ್ರಾಹ್ಮಣರಾಗಿದ್ದೆವೆಂದರೆ ನಾವು ಮುಟ್ಟಿದ ಬ್ರಾಹ್ಮಣೇತರರೆಲ್ಲ -ವಿಶೇಷವಾಗಿ ಹೆಂಗಸರು- ಬ್ರಾಹ್ಮಣರಾಗಿ ಹೋಗುತ್ತಿದ್ದರಂತೆ. ಹೀಗೆ ಬೇಕಾದವರನ್ನು ಮುಟ್ಟಿ ಬ್ರಾಹ್ಮಣರನ್ನಾಗಿ ಮಾಡುವ ಶಕ್ತಿ ಇದ್ದದ್ದರಿಂದ ಅಹಿಚ್ಛತ್ರದಿಂದ ತಮಗೆ ಬೇಕಾದ ಹೆಂಗಸರನ್ನು ಕರೆತರುವ ಅಗತ್ಯ ವನ್ನು ನನ್ನ ಪೂರ್ವಜರು ಕಾಣಲಿಲ್ಲವಂತೆ. ಇದರ ಫಲವಾಗಿ ನಾವು ಅನೇಕರು ಕರಿಯ ಬ್ರಾಹ್ಮಣ ರಾಗಿ ಬಿಟ್ಟಿದ್ದೇವೆ. ಬೇಕಾದವರನ್ನು ಮುಟ್ಟಿ



ಬ್ರಾಹ್ಮಣರಾಗಿ ಮಾಡಲು ನಮಗೆ ಶಕ್ತಿ ಇದ್ದರೂ ಅವರ ಬಣ್ಣವನ್ನು ಮಾತ್ರ ಬದಲಿ ಸಲು ನಮ್ಮಿಂದಾಗಲಿಲ್ಲ.

''ಆದರೆ ಅಜ್ಜೀ, ನಾವು ಈ ಜಿಲ್ಲೆಯ ಎಲ್ಲ ಶೂದ್ರರನ್ನು ಮುಟ್ಟಿ ಬ್ರಾಹ್ಮಣರನ್ನಾಗಿ ಏಕೆ ಮಾಡಿಬಿಡಲಿಲ್ಲ?'' ಎಂದು ನಾನು ಕೇಳಿದೆ. ''ನಾವು ಹೊಲೆಯರಿಂದ ಮುಟ್ಟಿಸಿಕೊಳ್ಳಲು ಹೆದರುವ ಹಾಗೆ ಅವರೂ ನಮ್ಮಿಂದ ಮುಟ್ಟಿಸಿ ಕೊಳ್ಳಲು ಅಂಜುತ್ತಿದ್ದರೆ?''

ನನ್ನ ಅಜ್ಜಿ ನನ್ನ ಕಿವಿಯನ್ನು ಕೆಂಪಾಗುವ ವರೆಗೂ ಹಿಂಡಿ, ''ಎಂಥಾ ಖೋಡಿಯೋ ನೀನು! ನಮ್ಮಿಂದ ಮುಟ್ಟಿಸಿಕೊಳ್ಳಲು ಅವರು ನಾ ಮುಂದೆ ತಾ ಮುಂದೆ ಎಂದು ಬರುತ್ತಿ ದ್ದರು. ಆದರೆ ನಮ್ಮ ಪುರಾತನರು ಅವರೆಲ್ಲ ರನ್ನೂ ಅನುಗ್ರಹಿಸಲಿಲ್ಲ,'' ಎಂದರು.

''ಆದರೆ ಯಾಕೆ?'' ಎಂದು ನಾನು ಪಟ್ಟು ಹಿಡಿದೆ, ಕಿವಿ ತಿಕ್ಕಿಕೊಳ್ಳುತ್ತ: ''ಎಲ್ಲರೂ ಬ್ರಾಹ್ಮ ಣರಾಗಿ ಬಿಟ್ಟಿದ್ದರೆ ಒಳ್ಳೇ ಮೋಜಾಗುತ್ತಿತ್ತಲ್ಲ! ನಾನೀಗ ನೆರೆಮನೆಯ ಸದಿಯ ಪೂಜಾರಿಯ ಮಗನ ಸಂಗಡ ಆಡಬಹುದಿತ್ತು. ಅವನು ಎಷ್ಟು ಚೆನ್ನಾಗಿ ಕುಟ್ಟಿದೊಣ್ಣೆ (ಚಿಣಿ-ಫಣಿ) ಆಡುತ್ತಾನೆ!''

''ಮೂರ್ಖಾ!'' ಗದರಿಸಿದರು ನನ್ನ ಭಾವ, ''ಎಲ್ಲರನ್ನೂ ಬ್ರಾಹ್ಮಣರನ್ನಾಗಿ ಮಾಡಿಬಿಟ್ಟಿ ದ್ದರೆ ನಾವು ಶ್ರೇಷ್ಠರಾಗಿ ಹೇಗೆ ಉಳಿಯುತ್ತಿ ದ್ದೆವು?''

ಸದಿಯ ಪೂಜಾರಿಯ ಮಗ ಕೊರಗ ಪೂಜಾ ರಿಗಿಂತ ಶ್ರೇಷ್ಠವಾಗಿದ್ದು ಅವನೊಡನೆ ಕುಟ್ಟಿ ದೊಣ್ಣೆ ಆಡುವ ಅವಕಾಶ ತಪ್ಪಿಸಿಕೊಳ್ಳುವುದ ರಲ್ಲಿ ನನಗೇನೂ ಜಾಣ್ಮೆ ತೋರಲಿಲ್ಲ. ಆದರೆ ನನ್ನ ಭಾವನಿಗೆ ನಾನು ಬಹಳ ಅಂಜುತ್ತಿದ್ದೆ. ಆದ್ದರಿಂದ ಅವರು ನನಗಿತ್ತ ಬಿರುದನ್ನೂ ಅವರು ಕೊಟ್ಟ ಕಾರಣವನ್ನೂ ಪ್ರತಿಭಟನೆ ಇಲ್ಲದೆ ಸ್ವೀಕರಿಸಿದೆ.

ಶೂದ್ರ ಸ್ತ್ರೀಯರನ್ನು ಬ್ರಾಹ್ಮಣರಾಗಿ ಮಾಡುವುದನ್ನು ನನ್ನ ಪೂರ್ವಜರು ಎಂದು. ಏಕೆ

ನಿಲ್ಲಿಸಿದರೆಂದು ನನಗೆ ಗೊತ್ತಿಲ್ಲ. ನಾನಾಗ ನನ್ನ ಅಜ್ಜಿಯನ್ನಾಗಲಿ ಭಾವನನ್ನಾಗಲಿ ಈ ವಿಷಯವಾಗಿ ಕೇಳಲಿಲ್ಲ. ಏಕೆಂದರೆ ನನಗಾಗ ಸ್ತ್ರೀಯರಲ್ಲಿ ಏನೂ ಆಸಕ್ತಿ ಇರಲಿಲ್ಲ. ಆದರೆ ಹದಿನೆಂಟು ವರ್ಷಗಳ ನಂತರ, ನನ್ನ ಮನಸ್ಸು ಬೇರೆ ಜಾತಿಯ ಹುಡುಗಿಯೊಬ್ಬಳಿಂದ ಅಪಹರಿಸಲ್ಪಟ್ಟಾಗ ನನ್ನ ಪೂರ್ವಜರು ತಮ್ಮ ಬ್ರಾಹ್ಮಣೀಕರಣ ಶಕ್ತಿಯನ್ನು ಉಪಸಂಹಾರ ಮಾಡಿ ಬಲು ದೊಡ್ಡ ಅನ್ಯಾಯ ಮಾಡಿದರೆಂದು ನಾನು ಬಹಳವಾಗಿ ಹಳಹಳಿಸಬೇಕಾಯಿತು.

ದಕ್ಷಿಣ ಕನ್ನಡದ ಆ ರಾಜನ ಯಜ್ಞ ಮಾಡಿಸುವ ಸಲುವಾಗಿ ಅಹಿಚ್ಛತ್ರದಿಂದ ಆಳುವ ಖೇಟಕ್ಕೆ ಆಮದು ಮಾಡಲ್ಪಟ್ಟ ಮೂವತ್ತೆರಡು ಉಚ್ಚ - ಇದನ್ನು ಹೆಚ್ಚು ಉಚ್ಚವಾಗಿ ಮಾಡಲು ಕೆಲವರು ಉಚ್ಛ ಎಂದು ಉಚ್ಚರಿಸುತ್ತಾರೆ - ಮತ್ತು ತಾಜಾ ಬ್ರಾಹ್ಮಣರ ಕುಲಗಳಲ್ಲಿ ನಮ್ಮ ಪೂರ್ವಜರೂ ಸೇರಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಯಜ್ಞದಲ್ಲಿ ನನ್ನ ಕುಲಪ್ರವರ್ತಕರು ಯಾವ ಪಾತ್ರ ವಹಿಸಿದ್ದರೆಂದು ಖಚಿತವಾಗಿ ಗೊತ್ತಿಲ್ಲವಾದರೂ ಅವರಿಗೆ ದೊರೆತ ದಕ್ಷಿಣೆ ಅವರ ಯೋಗ್ಯತೆಗೆ ತಕ್ಕದ್ದಾಗಿರಲಿಲ್ಲವೆಂಬುದರಲ್ಲಿ ಸಂದೇಹವಿಲ್ಲ. ಆ ಕಾಲದಲ್ಲಿಯೂ ಯೋಗ್ಯತೆಗೆ ತಕ್ಕ ಪುರಸ್ಕಾರವಿರಲಿಲ್ಲವೆಂದು ಇದು ತೋರಿಸುತ್ತದೆ. ತಾತ್ಪರ್ಯವಿಷ್ಟೇ; ಮಹರ್ಷಿ ಭರದ್ವಾಜನ ಗೋತ್ರೋತ್ಪನ್ನರಾದ ನಾವು ಬಡತನದಲ್ಲೇ ಉಳಿದೆವು. ನಮ್ಮ ಗೋತ್ರ ಚೂಡಾಮಣಿಯಾಗಿದ್ದ ದ್ರೋಣಾಚಾರ್ಯನೇ ಮಗನಿಗೆ ಹಾಲೆಂದು ಸುಣ್ಣದ ನೀರನ್ನು ಕೊಡುವ ಅವಸ್ಥೆಯಲ್ಲಿದ್ದನೆಂದ ಮೇಲೆ ನಮಗೂ ಬಡತನಕ್ಕೂ ಏನೋ ಅಂಟದನಂಟೇ ಇರಬೇಕು.

ಆದರೆ ನಮಗೆ ಮಿದುಳು ಧಾರಾಳವಾಗಿತ್ತು, ಇದೆ. ಹಣ ಕೂಡಿಹಾಕುವುದರಲ್ಲಿ ಹೊರತು ಉಳಿದೆಲ್ಲ ಕೆಲಸಗಳಲ್ಲಿ ನಿರರ್ಗಳವಾಗಿ ಓಡುವ ಮಿದುಳು. ಈ ಮಿದುಳಿಗತನವು ನನ್ನಲ್ಲಿ ಪರಿಪೂರ್ಣಾವಸ್ಥೆಗೆ ಮುಟ್ಟಿದೆ ಎಂದು ನಿಮಗೆ ಈಗಾಗಲೇ ಅರ್ಥವಾಗಿರಬೇಕು. ನಮ್ಮ ಕುಲದವರಲ್ಲಿ ಆತ್ಮಚರಿತ್ರೆ ಬರೆಯುತ್ತಿರುವುದು ನಾನೇ ಮೊದಲು, ಆದ್ದರಿಂದ.

ಉಡುಪಿಯಿಂದ ಹದಿನಾಲ್ಕು ಮೈಲು ದಕ್ಷಿ



''ಈ ಮಧ್ಯೆ ಅವನೂ ಒಂದು ಟಿ.ವಿ. ಕೊಂಡುಕೊಂಡಿದ್ದಾನೆ - ಇನ್‌ಸ್ಟಾಲ್‌ಮೆಂಟ್ ಮೇಲೆ. ಇದು ಮೊದಲ್ನೇ ಕಂತು..''

ಣಕ್ಕಿರುವ ಒಂದು ಹಳ್ಳಿಯಲ್ಲಿ ನನ್ನ ಪೂರ್ವಜರು ನೆಲೆಸಿದ್ದರು. ಈ ಸ್ಥಳವನ್ನು ನಾನು ನೋಡಿಲ್ಲ. ನನ್ನ ಅಜ್ಜನ ಅಪ್ಪ ಆ ಊರನ್ನು ಚಿಕ್ಕಂದಿನಲ್ಲೇ ತ್ಯಜಿಸಿ ಓಡಿ ಬಂದು ಉಡುಪಿಯಲ್ಲಿ ನೆಲೆ ನಿಂತರು. ಅದರ ಕಥೆ ಅನಾದಿ ಕಾಲದಿಂದ ಆದ ಕಥೆಗಳ ಪುನರ್ಮುದ್ರಣವೇ ಆಗಿದೆ. ನನ್ನ ಮುತ್ತಜ್ಜನ ತಂದೆ ಬೇಗ ವೈಕುಂಠ ವಾಸಿಗಳಾದರು. (ನಮ್ಮ ಕುಲದಲ್ಲಿ ಯಾರೂ ವೈಕುಂಠಕ್ಕಿಂತ ಕೆಳಗಿನ ಯಾವ ಲೋಕಕ್ಕೂ ಹೋದ ಉದಾಹರಣೆಯೇ ಇಲ್ಲ.) ನನ್ನ ಮುತ್ತಜ್ಜ ಅವರ ಕೊನೆಯ ಪುತ್ರ. ತಂದೆ ಸತ್ತ ಮೇಲೆ ಅಧಿಕಾರ ನನ್ನ ಮುತ್ತಜ್ಜನ ಅಣ್ಣನ ಕೈಗೆ ಬಂತು. ಅಣ್ಣ ಬಹಳ ಒಳ್ಳೆಯವರು. ಆದರೆ ಒಳ್ಳೆಯ ಅಣ್ಣನಾಗಿರಬೇಕೋ ಒಳ್ಳೆಯ ಗಂಡನಾಗಿರಬೇಕೋ ಎಂಬ ಧರ್ಮ ಸಂಕಟ ಬಂದಾಗ ಅನೇಕ ಧರ್ಮ ಶಾಸ್ತ್ರಗಳನ್ನು ಶೋಧಿಸಿ ಒಳ್ಳೆಯ ಗಂಡನಾಗಿರುವುದೇ ಉತ್ತಮ ಧರ್ಮವೆಂಬ ತೀರ್ಮಾನಕ್ಕೆ ಅವರು ಬಂದರು. ಅದು ಹೆಚ್ಚು ಸುಲಭ ಧರ್ಮವೂ ಆಗಿತ್ತು. ಆದ್ದರಿಂದ ಕೆಲಸಕ್ಕೆ ಬಾರದ ಪಾಠದ ಪ್ರವಚನಗಳಲ್ಲಿ ತಮ್ಮನು ಹೊತ್ತು ಕಳೆಯುವುದಕ್ಕಿಂತ ಮನೆಯ ದನಕರುಗಳನ್ನು ಮೇಯಿಸುವುದು ಒಳ್ಳೆಯದು ಎಂಬ ತಮ್ಮ ಹೆಂಡತಿಯ ಅಭಿಪ್ರಾಯವನ್ನು ಅವರು ಅನುಮೋದಿಸಿದರು. ನಾವು ಭರದ್ವಾಜ ಗೋತ್ರೀಯರು, ಪುಸ್ತಕ ಓದುವುದರಲ್ಲಿ ಎಕ್ಸ್‌ಪರ್ಟರಾಗಿರುವಷ್ಟು ದನ ಕಾಯುವುದರಲ್ಲಿ ಎಂದೂ ಆಗಿರಲಿಲ್ಲ. ಒಂದು ಸಂಜೆ ನಮ್ಮ ಒಂದು ಆಕಳು ರೈತನೊಬ್ಬನ ಗದ್ದೆಯನ್ನು ಹೊಕ್ಕಿತು. ಅವನು ಬಂದು ಮನೆಯಲ್ಲಿ ''ಸಹಸ್ರನಾಮ'' ವಾಚನ ಮಾಡಿದನು. ಅಣ್ಣನಿಲ್ಲದಾಗ ಅತ್ತಿಗೆಯೇ ಅಧಿಕಾರವಹಿಸಿ ಮೈದುನನ ಬೆನ್ನನ್ನು ಬೆಚ್ಚಗೆ ಮಾಡಿದಳು. ಇದು, ಅಂದರೆ ಅತ್ತಿಗೆಯಿಂದ ಪೆಟ್ಟು ತಿನ್ನುವುದು, ಭರದ್ವಾಜ ಗೋತ್ರೀಯರಿಗೆ ಮೆಚ್ಚುಗೆಯಾಗದ ಎರಡನೇ ಸಂಗತಿಯಾಗಿದೆ. (ಮೊದಲನೆಯದು ದನ ಕಾಯುವುದು.) ಅದರಿಂದ ಅವರು ಉಟ್ಟ ಕೌಪೀನದಲ್ಲೇ ಮನೆ ಬಿಟ್ಟು ನಾಲ್ಕು ಮೈಲು ನಡೆದು ಒಂದು ಮಠ ಸೇರಿದರು. ಕಾಲಾಂತರದಲ್ಲಿ ಪಾಠ ಹೇಳಿಸಿಕೊಂಡು ಪೌರಾಣಿಕರಾಗಿ ಉಡುಪಿಗೆ ಬಂದು ನೆಲೆಸಿ ಲಗ್ನ ಮಾಡಿಕೊಂಡರು. ಆದ್ದರಿಂದಲೇ ನಾನಿಲ್ಲಿ ಆತ್ಮಚರಿತ್ರೆ ಬರೆಯಲು ಸಾಧ್ಯವಾಯಿತು.

●



*ಅಮೇರಿಕದಲ್ಲಿ ಮೊಟ್ಟಮೊದಲ ಬಾರಿಗೆ ಆನೆಯನ್ನು ಜನ ನೋಡಿ, ''ವರ್ಣಿಸಿದಂತೆಯೇ ಇದೆ'' ಎಂದು ನಂಬಿದ್ದು 1796ರಲ್ಲಿ ಕ್ಯಾಪ್ಟನ್ ಜಾಕಬ್ ಕ್ರೌನಿನ್‌ಶೀಲ್ಡ್ ಎಂಬಾತ ಭಾರತ (ಬಂಗಾಳ)ದಿಂದ ಆನೆಯೊಂದನ್ನು ಹಡಗಿನಲ್ಲಿ ತರಿಸಿ ನ್ಯೂಯಾರ್ಕಿನ ಬ್ರಾಡ್ವೆಯ ಸಭಾಗೃಹವೊಂದರಲ್ಲೂ ಬೀವರ್ ಸ್ಟ್ರೀಟಿನಲ್ಲೂ ಸಾರ್ವಜನಿಕರು ನೋಡಲು ಅನುವು ಮಾಡಿಕೊಟ್ಟ ನಂತರವೆ.*

---

*ಡೊರೊಥಿ ಪಾರ್ಕರಳನ್ನು ಒಬ್ಬ ಲ್ಯಾಟಿನ್ ಶಿಕ್ಷಕಿ ಪಾರ್ಟಿಯೊಂದರಲ್ಲಿ ಭೇಟಿಯಾದಳು. ''ಯಾವುದೇ ಕೃತಿಗಳನ್ನು ಓದಲು ತೊಡಗುವ ಮುನ್ನ ನಾನು ಅವರ ಲೇಖಕ ಅಥವಾ ಲೇಖಕಿಯನ್ನು ಭೆಟ್ಟಿಯಾಗಿ ಸಾಕಷ್ಟು ಚರ್ಚಿಸಲು ಇಷ್ಟಪಡುತ್ತೇನೆ,'' ಎಂದಾಕೆ ಹೇಳಿದಾಗ, ಥಟ್ಟನೆ, ''ಹಾಗಾದರೆ ಹೋಮರನನ್ನು ಯಾವಾಗ ಭೆಟ್ಟಿಯಾಗಿದ್ದಿರಿ?'' ಎಂದು ಕೇಳಿಬಿಟ್ಟಳಂತೆ ಡೊರೊಥಿ ಪಾರ್ಕರ್.*

# "ಗಿಡದ ಸಂದೇಶ"

ಮಳೆ ಬಿತ್ತು
ನೆಲವ ಉತ್ತು
ಬೀಜವ ಬಿತ್ತು
ಹಾಕು ಗೊಬ್ಬರ
ಆಗಾಗ ಪ್ರೀತಿಯ ಮೇಲೋಗರ
ಎರೆ
ಧರೆಯಗಲಕು
ಬೀಜ ಮೊಳಕೆಯೊಡೆಯುವುದು
ಸಣ್ಣಗೆ
ಚೆಣ್ಣಗೆ
ಬಣ್ಣ ಬಣ್ಣಕೆ
ಚಿಗುರುವುದಷ್ಟೆ ಗಿಡದ ಕೆಲಸ
ಇರಬಹುದು
ಅದರಾಚೆಗೂ ಕೊಂಚ
ಚಿಮ್ಮುವ ಬಯಕೆ
ಗಿಡದ ಒಳಗಿರುವ ಮನಕೆ
ಆದರೆ ಇರುವುದಷ್ಟೆ ಮಿತಿ
ಅದರಲ್ಲೆ ಕಾಣಬೇಕಿದೆ ಜೀವನದ ಪ್ರೀತಿ
ಚಿಗುರುವ ಮನಗಳಿಗೆ
ಹೊತ್ತ ಸಂದೇಶದ ಒಳಗೊಳಗೆ
ಚಿಗುರಿದ ಗಿಡ ಸಾರುತ್ತಿದೆ
ಚಿಗುರಿ ಚಿಗುರುವುದೆ ಜೀವನದ ಸಾರ
ಅದರಾಚೆ ಹುಡುಕುವುದು ಬರಿಯ ನಿಸ್ಸಾರ

ಹೊರೆಯಾಲ ದೊರೆಸ್ವಾಮಿ

## ಮುಖದ ಪ್ರಯೋಗ: ಬಾಯಿನ ಸಮಸ್ಯೆ

ನನಗೆ ಚೋದ್ಯವೆನಿಸಿದ ಒಂದು ಸಂಗತಿಯೆಂದರೆ ಸಂಸ್ಕೃತದಲ್ಲಿಯೂ ದ್ರಾವಿಡದಲ್ಲಿಯೂ ಮೋರೆಗಿರುವ ಪದಗಳೆಲ್ಲದರ ದ್ವಿಧಾಭಾವ. ನಮ್ಮ ಕೋಶಕಾರರು ''ಮುಖ'' (face)ಕ್ಕೆ ಕೊಟ್ಟಿರುವ ಸಮಾನ ಪದಗಳೆಂದರೆ ವಕ್ತ್ರ, ವದನ, ಆನನ, ಲಪನ, ತುಂಡ, ಆಸ್ಯ ಮತ್ತು ಮೋರೆ. ''ಅಭಿನವಾಭಿಧಾನ''ಕೋಶಕಾರನು ಬಾಯಿಗೆ ''ಕಬಳಿಕೆ'' ಎಂಬ ಪ್ರತ್ಯೇಕ ಶಬ್ದವನ್ನು ಹೇಳಿದ್ದರೂ ವಾಸ್ತವಿಕವಾಗಿ ಮೇಲಿನ ಎಲ್ಲ ಮುಖವಾಚಕ ಶಬ್ದಗಳೂ ಬಾಯಿಗೂ ಅನ್ವಯಿಸುತ್ತವೆ. ಹಾಗೆ ಕೇಳಿದರೆ, ಇವೆಲ್ಲವೂ ಮೂಲತಃ ಬಾಯಿಗೇ ಅನ್ವಯಿಸುವವಾಗಿದ್ದು ಮೋರೆಯೆಂಬುದೇ ವಿಸ್ತೃತ ಅರ್ಥವಾಗಿದೆ. ಒಂದೊಂದೇ ಪದವನ್ನು ತೆಗೆದುಕೊಂಡು ಚರ್ಚಿಸೋಣ.

''ಮುಖ'' ಎಂಬುದು ದ್ರಾವಿಡ ಮೂಲದ್ದೇ ಶಬ್ದವಿರಬೇಕೆಂದು ಭಾಷಾಶಾಸ್ತ್ರಜ್ಞರ ತರ್ಕ. ಇದರ ಮೂಲವೆಂದು ಭಾವಿಸಲಾದ ''ಮುಕಂ'' (ತಮಿಳು) ಪದಕ್ಕೆ ತಮಿಳಿನಲ್ಲಿಯೇ ಮುಖವೆಂದೂ ಬಾಯಿಯೆಂದೂ ಅರ್ಥ ಹೇಳಲಾಗಿದೆ. ಉಳಿದ ಹೆಚ್ಚಿನ ದ್ರಾವಿಡ ಭಾಷೆಗಳಲ್ಲಿ ಬಾಯಿ ಎಂಬರ್ಥ ಹೇಳಿಲ್ಲ ಎಂಬುದು ಬೇರೆ ಮಾತು. ಇದನ್ನು ದ್ರಾವಿಡ ಪದವೆಂದೇ ಒಪ್ಪಿಕೊಂಡರೂ ಋಗ್ವೇದದಲ್ಲಿಯೇ (ಉದಾ: 10ನೇ ಮಂಡಲದ ಪುರುಷ ಸೂಕ್ತದಲ್ಲಿ ''ಬ್ರಾಹ್ಮಣೋಸ್ಯ ಮುಖಮಾಸೀತ್'' - ಬ್ರಾಹ್ಮಣನು ಇವನ ಮುಖವಾಗಿದ್ದನು) ಅದು ಪ್ರಯೋಗವಾಗಿದೆಯೆಂದು ಗಮನಿಸಬೇಕು. ಇಲ್ಲಿ ಮೋರೆ (face) ಎಂಬರ್ಥಕ್ಕಿಂತ ಬಾಯಿ ಎಂಬುದೇ ಹೆಚ್ಚು ಸೂಕ್ತವಾಗಿ ಕಾಣುತ್ತದೆ. ಅಗ್ನಿಮುಖದಲ್ಲಿ ಆಹುತಿ ಕೊಡುವುದು ಇತ್ಯಾದಿ ಪ್ರಯೋಗಗಳು ಮುಖಕ್ಕೆ ಬಾಯಿಯೆಂಬುದು ಪ್ರಧಾನಾರ್ಥವೆಂದು ಸೂಚಿಸುವುದಿಲ್ಲವೆ? ಒಂದು ವೇಳೆ ಇಂಗ್ಲೀಷಿನ mouth ಎಂಬ ಬಾಯಿಯನ್ನು ಸೂಚಿಸುವ ಪದ ಯಾವುದೋ ರೀತಿಯಲ್ಲಿ ಮುಖಕ್ಕೆ ಜ್ಞಾತಿ ಪದವೆಂದು (ಅದು ಪ್ರಾಚೀನ ಜರ್ಮಾನಿಕ ಭಾಷೆಯಿಂದ ಬಂದಿದೆಯೆಂದು ಭಾಷಾಶಾಸ್ತ್ರಿಗಳು ಹೇಳುತ್ತಾರೆ) ಬಗೆದರೆ ಬಾಯಿಯೆ ಮುಖದ ಮೂಲಾರ್ಥವೆನ್ನಬೇಕಾಗುತ್ತದೆ. ಇನ್ನು ಮೋರೆಯನ್ನು ದ್ರಾವಿಡ ಭಾಷಾಶಾಸ್ತ್ರಿಗಳು ''ಮುಕಂ''ಕ್ಕೇ ಸಂಬಂಧಿಸಿದ್ದೆನ್ನುತ್ತಾರೆ.

ಇನ್ನುಳಿದ ಪದಗಳ ಬಗ್ಗೆ ಒಂದೊಂದು ವಾಕ್ಯದಲ್ಲಿ ಮುಗಿಸಬಹುದು. ''ವಕ್ತ್ರ'' ಎಂಬುದು ''ವಚ್''(=ಮಾತಾಡು) ಧಾತುವಿನಿಂದ ಹುಟ್ಟಿದ್ದರಿಂದ ಅದು ಬಾಯಿಯನ್ನೇ ಮುಖ್ಯವಾಗಿ ನಿರ್ದೇಶಿಸುತ್ತದೆ. ''ವದನ'' ಎಂಬುದೂ ''ವದ್'' (=ಮಾತಾಡು) ಧಾತುವಿನಿಂದ ಬಗೆದಿದ್ದರಿಂದ ಮೇಲಿನ ಮಾತೇ ಅದಕ್ಕೂ ಅನ್ವಯಿಸುತ್ತದೆ. ''ಲಪನ'' ಕೂಡ (''ವಿಲಾಪ,'' ''ಪ್ರಲಾಪ''ಗಳನ್ನು ಗಮನಿಸಿರಿ) ಮಾತಾಡುವ ಬಾಯಿಯನ್ನೇ ಸೂಚಿಸುತ್ತವೆ. ''ಆಸ್ಯ'', ''ಆನನ'' ಇವೆರಡೂ ಬಾಯಿ ಮತ್ತು ಮೋರೆಯನ್ನು ವೇದ ಕಾಲದಿಂದಲೇ ನಿರುಪಿಸುತ್ತವೆ. ''ತುಂಡ''ವೂ ಸಂಶಯಾಸ್ಪದ ಮೂಲದ್ದಾಗಿದ್ದು, ಅದಕ್ಕಿರುವ ಪಕ್ಕಿಯ ಕೊಕ್ಕು ದ್ರಾವಿಡದಲ್ಲಿ ''ಮುನ್'' (ಮುಂದೆ) ಎಂಬ ಬೇರಿನಿಂದ ಹುಟ್ಟಿದ ''ಮೂಂಜಿ''(ತಮಿಳು) ಮೊದಲಾದ ಅರ್ಥಗಳು ಮತ್ತೆ ಮೋರೆ ಮತ್ತು ಬಾಯಿಯ ಐಕ್ಯವನ್ನು ಸೂಚಿಸುತ್ತವೆ. ಅದೇ ಮೇರೆಗೆ ಹಿಂದಿ ಮೊದಲಾದ ಭಾಷೆಗಳಲ್ಲಿ ಕೂಡ ''ಮುಹ್'' ಇತ್ಯಾದಿ ಪದಗಳೂ ಉಭಯಾರ್ಥಗಳನ್ನು ಕೊಡುತ್ತವೆ. ಮತ್ತು ಇತರ ಜ್ಞಾತಿ ಭಾಷೆಗಳಲ್ಲಿ ಅದಕ್ಕೆ ಸಂವಾದಿಯಾಗಿರುವ ಪದಗಳು ಮೋರೆ(ಬಾಯಿಯ ಸಂಬಂಧವಿಲ್ಲದೆ)ಯನ್ನು ಸೂಚಿಸುವವೆನ್ನಬಹುದು. ತಮಿಳಿನಲ್ಲಿ ''ಮೂಂಜಿ ಪಾರ್'' (ಮೋರೆ ನೋಡು) ಎನ್ನುವುದಿದೆ. ಇದು ಹೊರತು ಇತರ ದ್ರಾವಿಡ ಪದಗಳು ಮೋರೆಗೂ ಬಾಯಿಗೂ ಸೇರಿಯೇ ಸಲ್ಲುತ್ತವೆ.

ಪದಗಳು ನಮ್ಮಲ್ಲಿ ಹೀಗೆ ಅರ್ಥ ಕೊಡುವುದಕ್ಕೆ ಏನು ಕಾರಣ? ಹಿಂದಿಯಲ್ಲಿ ಪ್ರತ್ಯೇಕವಾಗಿ ''ಮೋರೆ''ಯನ್ನು ಸೂಚಿಸಲಿಕ್ಕೆ ಪಾರಸಿಕ ''ಚೇಹರಾ'' (ಇದು ಕನ್ನಡದಲ್ಲಿಯೂ ''ಚಹರೆ'' ಎಂದು ಸ್ವೀಕೃತವಾಗಿದೆ.) ನನ್ನ ಅರಿವಿನಲ್ಲಿರುವ ಇತರ ಯುರೋಪಿಯನ್ ಭಾಷೆಗಳಲ್ಲಿ ಮೋರೆ ಮತ್ತು ಬಾಯಿ ಬೇರೆ ಬೇರೆ ಪದಗಳಿಂದಲೇ ಸೂಚಿತವಾಗುತ್ತವೆ. ಇಂಗ್ಲೀಷಿನಲ್ಲಿ Face ಎಂದರೆ ಮೋರೆ: Mouth=ಬಾಯಿ. ಫ್ರೆಂಚಿನಲ್ಲಿ ಬಾಯಿಗೇ Bouche ಎಂಬ ಬೇರೆ ಪದವಿದೆ. ಪೋರ್ಚುಗೀಸಿನಲ್ಲಿ care ಎಂದರೆ ಮೋರೆ, Boca ಎಂದರೆ ಬಾಯಿ.

★

ಹಾಗೆಯೇ ಸಂಸ್ಕೃತ ''ಆಮ್ರ'' ಮತ್ತು ದ್ರಾವಿಡ ''ಮಾವು'' ನನಗೆ ಸಮಸ್ಯಾತ್ಮಕವಾಗಿ ಕಾಣುತ್ತವೆ. ಸಂಸ್ಕೃತದ ''ಆಮ್ರ'' ಶಬ್ದ ಅದರ ಹುಳಿ ಗುಣದಿಂದ ಹುಟ್ಟಿದ್ದೆಂಬುವದರಲ್ಲಿ ಸಂದೇಹವಿಲ್ಲ. ಅದು ಸಂಸ್ಕೃತದ್ದೇ ಆದ ''ಅಮ್ಲ''ದ ಒಂದು ಪ್ರಭೇದವೆಂದು ತರ್ಕಿಸಬಹುದು. ''ಅಮ್ಲ'' ಎಂದರೆ ಹುಳಿ, ಮೊಸರು, ಕೆಲ ಹುಳಿ ಹಣ್ಣುಗಳು. ಹುಳಿಯೆಂಬರ್ಥ ಮನುಸ್ಮೃತಿಯಷ್ಟು ಹಳೆಯದು. ಅದಕ್ಕೂ ಹಿಂದೆ ಅಪಕ್ವ, ಹಣ್ಣಾಗದ, ಮಾಗದ, ಬೇಯಿಸದ ಮತ್ತು ರೋಗಕ್ಕೆ ಸಂಬಂಧಿಸಿದ ಅರ್ಥಗಳನ್ನು ಕೊಡುವ ''ಆಮ'' ಶಬ್ದವಿದೆ. ವೇದ ಕಾಲದಷ್ಟು ಹಿಂದಿನ ಈ ಶಬ್ದವನ್ನು ಅಮ್ಲ, ಆಮ್ರಗಳಿಗೆ ಮೂಲವೆಂದು ಸಾಧಿಸುವುದು ಕಷ್ಟ. ಅದಿರಲಿ. ಅಮ್ಲ, ಆಮ್ಲಗಳಿಗೆ ಸಂಬಂಧಿಸಿ ಹುಳಿ ಗುಣವುಳ್ಳ ನೆಲ್ಲಿ (ಆಮಲಕ) ಅಮಲಾತಕ, ಅಮಿಲಾತಕ, ಅಮಲಾಂತಕ, ಆಮ್ರಾತಕ (ಅಮಟೆ), ಆಮ್ಲ (ಹುಣಸೆ), ಆಮ್ರ (ಮಾವು), ಆಮ್ಲಕ (ಹುಣಸೆ), ಅಮ್ಲ ಕಂದ, ಅಮ್ಲ ಕೇಸರ, ಅಮ್ಲ ಚೂಡ ಮೊದಲಾದ ಹುಳಿ ಕಾಯಿಗಳು ಸಾಕಷ್ಟು ಇವೆ. ಇವುಗಳ ತದ್ಭವಗಳು ಸಂಸ್ಕೃತಜನ್ಯ ಪ್ರಾಕೃತ ಮತ್ತು ಆಧುನಿಕ ಆರ್ಯ ಭಾಷೆಗಳಲ್ಲೆಲ್ಲ ಇವೆ; ಆಮ್ಲ ಶಬ್ದಜನ್ಯವಾದ ಇನ್ನೂ ಅನೇಕ ಹುಳಿಕಾಯಿಗಳ ಹೆಸರುಗಳಿವೆ. ಇವುಗಳಿಗೆ ಹೊಂದಿದ ''ಅಮರೂದ್'' (ಆಮ್ರಾತಕ) ಎಂಬ ಶಬ್ದ ಪಾರಸಿಕ ಭಾಷೆಗೂ ದಾಟಿದೆ.

ಈಗ, ಮಾವಿಗೆ ದ್ರಾವಿಡ ಭಾಷೆಗಳಲ್ಲಿ ಮಾ, ಮಾಂತಿ, ಮಾಂಕಾಯ್ (ತಮಿಳು - ಮಲೆಯಾಳ), ಮಾವು, ಮಾಂ (ಕನ್ನಡ)ಗಳಿವೆ. ಇತರ ದ್ರಾವಿಡ ಭಾಷೆಗಳಲ್ಲಿಯೂ ಇವನ್ನು ನಿಕಟವಾಗಿ ಹೋಲುವ ಪದಗಳಿವೆ. ಮಲಯಿ ಭಾಷೆಗೆ ಇದೇ ಶಬ್ದ ಹೋಗಿ ಅಲ್ಲಿಂದ ಪೋರ್ತುಗೀಸ್, ಇಂಗ್ಲೀಷ್ ಇತ್ಯಾದಿ ಭಾಷೆಗಳಿಗೂ (mango etc.) ದಾಟಿದೆ. ಸಂಸ್ಕೃತ ''ಮಾಕಂದ'' (ಮಾವಿನ ಮರ) ಕೂಡ ದ್ರಾವಿಡದ್ದು ಎಂಬುವುದುಂಟು. ಆದರೆ ಮಾವು ಶಬ್ದಕ್ಕೆ ಮೂಲವಾದ ಧಾತು ಯಾವುದಿರಲಿ. ಅದರ ಪ್ರಾಥಮಿಕ ಅರ್ಥವೇನು? ತಮಿಳಿನ ''ಮಾಣ್'' (ಸುಂದರವಾಗು, ಶ್ರೇಷ್ಠವಾಗು) ಧಾತುವಿನಿಂದ ಅದು ಹುಟ್ಟಿರಬಹುದೇ? ದ್ರಾವಿಡ ವ್ಯುತ್ಪತ್ತಿ ಕೋಶ (Etimological Dictionary) ಹಾಗೆ ಹೇಳುವುದಿಲ್ಲ, ಹಾಗೆಂದು ಅದು ರುಚಿಗೆ ಸಂಬಂಧಿಸಿ ಹುಟ್ಟಿದ ಪದವೆಂದೂ ತೋರುವುದಿಲ್ಲ. ಯಾಕೆಂದರೆ ಹುಳಿ ಎಂಬರ್ಥಕ್ಕೆ ''ಪುಳಿ'' ಎಂಬ ದ್ರಾವಿಡ ಪದವಿದೆ. ಹುಳಿ ರುಚಿಯುಳ್ಳ ನೆಲ್ಲಿ ಮೊದಲಾದವುಗಳಿಗೆ ದ್ರಾವಿಡದಲ್ಲಿ ಬೇರೆ ಬೇರೆ ಹೆಸರುಗಳಿವೆ.

ನನ್ನದೊಂದು ತುಸು ದುಡುಕಿನ ಊಹೆ ಇದೆ. ಮಾ, ಮಾವು ಮೊದಲಾದ ಪದಗಳು ಆಮ್ರಕ್ಕೆ ಹತ್ತಿರವಾಗಿಲ್ಲವೆ? ಆಮ್ರದ ರೇಫವನ್ನು ಕೈ ಬಿಟ್ಟರೆ ಆಮ ಉಳಿಯುತ್ತದೆ. ಭಾಷೆಗಳಲ್ಲಿ ಅಪರೂಪವಲ್ಲದ ವರ್ಣಸ್ಥಾನದ ಪಲ್ಲಟ ಪ್ರವೃತ್ತಿಯನ್ನು ಅನ್ವಯಿಸಿದರೆ ''ಆಮ''ದ ಪಲ್ಲಟಿತ ರೂಪ ''ಮಾವ್'' ಆಗುವುದಿಲ್ಲವೆ? ಸಂಸ್ಕೃತದಿಂದ ದ್ರಾವಿಡವಾಗಲಿ ದ್ರಾವಿಡದಿಂದಲೇ ಸಂಸ್ಕೃತವಾಗಲಿ ಸ್ವೀಕರಿಸಿತೆಂದು ನನ್ನ ಸಾಧನೆಯಲ್ಲ. ಸಂಸ್ಕೃತದಲ್ಲಿ ಕೂಡ ಹುಳಿಯೆಂಬರ್ಥದಲ್ಲಿ ಅಮ್ಲ ಶಬ್ದ ಮನುಸ್ಮೃತಿಯಷ್ಟು ಈಚೆಗಿನ ಕಾಲದಲ್ಲೇ ಪ್ರಚಲಿತಕ್ಕೆ ಬಂದದ್ದಾದರೆ, ಆಮ್ರ, ಮಾವು ಎರಡೂ, ಭಾಷೆಗಳಿಗಿಂತ ಹಿಂದಿನ ಕಿರಾತ (ಆಸ್ಟ್ರಿಕ್) ಅಥವಾ ಇನ್ನಿತರ ಅನಾದಿ ಭಾಷೆಯಿಂದ ದ್ರಾವಿಡಕ್ಕೂ ಸಂಸ್ಕೃತಕ್ಕೂ ಹೋಗಿರಲಾರದೆ? ಅದು ಭಾರತದ್ದೇ ಅಥವಾ ಮಾವಿನ ತವರೂರೆಂದು ಗ್ರಹೀತವಾದ ಬೇರಾವ ದೇಶದ ಭಾಷೆಯಿಂದ ಇಲ್ಲಿಗೆ ಬಂದಿರಲಾರದೆ?

ಪಾವೆಂ.

ಇಟಾಲಿಯನ್ ಕಥೆ

# ಒಂದು ಚಿಕ್ಕ ಪವಾಡ

ಮೂಲ: ಪಾಲ್ ಗ್ಯಾಲಿಕೊ
ಅನುವಾದ: ಸಿ.ಆರ್.ಮಂಜುನಾಥ

ಅಸಿಸಿ ಪಟ್ಟಣವನ್ನು ತಲುಪುವುದು ಸುಲಭವೇನಲ್ಲ. ಸುರಳಿಯಾಕಾರದ ರಸ್ತೆಗಳಲ್ಲಿ ಹಾದು ಸುಭಾಸಿಯೋ ಬೆಟ್ಟವನ್ನು ಏರಿದಾಗ ನಮಗೆ ಕಾಣುವುದು ಧೂಳು ತುಂಬಿದ ರಸ್ತೆಗಳು. ಬೆಟ್ಟವನ್ನೇರುತ್ತ ಹೋದಂತೆ ಸುಂದರವಾದ ಪಟ್ಟಣ ಎದುರಾಗುತ್ತದೆ. ಅದರ ಸುತ್ತಲೂ ಇರುವ ಆಲಿವ್ ಮತ್ತು ಸೈಪ್ರಸ್ ಮರಗಳ ತೋಪು ಹೊಸ ಮೆರುಗನ್ನು ಕೊಟ್ಟಿದೆ. ಅಲ್ಲಿಂದ ರಸ್ತೆ ಕವಲೊಡೆದು ಒಂದು ರಸ್ತೆ ಹನ್ನೆರಡನೆಯ ಶತಮಾನದ ಕಮಾನಿನಾಕಾರದ ಸಂತ ಫ್ರಾನ್ಸಿಸನ ಚರ್ಚನ್ನು ಸೇರಿದರೆ ಮತ್ತೊಂದು ಇಡೀ ಇಟಲಿ ಪ್ರಾಂತ್ಯಕ್ಕೇ ಚಾವಣಿ ಹಾಕಿದಂಥ ನೀಲಾಕಾಶ ನಿಮ್ಮನ್ನು ಸ್ವಾಗತಿಸುವಲ್ಲಿಗೆ ಕರೆದೊಯ್ಯುತ್ತದೆ. ಬೆಟ್ಟದ ಪಕ್ಕದಲ್ಲೇ ಪ್ರಸಿದ್ಧ ಅಂಬ್ರಿಯನ್ ಕಣಿವೆ ಎದುರಾಗುತ್ತದೆ. ಇನ್ನೂ ಮುಂದಕ್ಕೆ ಹೋದರೆ ಅನೇಕ ಜಾತಿ ಮತಗಳಿಂದ ಮುಳುಗಿ ಹೋಗಿರುವ ಮಾನವ ಜನಾಂಗ, ಅರಚುತ್ತಿರುವ ಕುರಿ ಮೇಕೆಗಳು, ಹೇಸರಗತ್ತೆ, ಕೋಳಿ, ಹಂದಿಗಳು ಹಾಗೂ ಗೋಡೆಯ ಪಕ್ಕದಲ್ಲಿ ಸಾಲುಸಾಲಾಗಿ ಸಾಗುತ್ತಿರುವ ಗಾಡಿಗಳನ್ನು ಕಾಣಬಹುದು.

ಪೆಪಿನೋ ತನ್ನ ಕತ್ತೆ ವಯೋಲೆಟ್ಟಾಳೊಡನೆ ಕಷ್ಟಪಟ್ಟು ಕೂಲಿನಾಲಿ ಮಾಡುತ್ತಾ ಓಡಾಡುತ್ತಿರುವುದನ್ನು ಇಲ್ಲೇ ನೀವು ಗಮನಿಸಬಹುದು. ಚಿಕ್ಕ ಹುಡುಗನಾದರೂ ಶ್ರದ್ಧೆಯಿಂದ ಮೈ ಮುರಿದು ದುಡಿಯುವ ಆತ ತನ್ನ ಸಂಪಾದನೆ ಮತ್ತು ವಯೋಲೆಟ್ಟಾಳ ಶ್ರಮದಿಂದ ಸಿಗುತ್ತಿದ್ದ ಹತ್ತು - ಹನ್ನೆರಡು ಲೀರಾಗಳಿಂದ ತಮಗಿಬ್ಬರಿಗೂ ಬೇಕಾದ ಆಹಾರ ಪದಾರ್ಥಗಳನ್ನು ತರುತ್ತಿದ್ದನಲ್ಲದೆ, ತಾನು ಉಳಿದುಕೊಂಡಿದ್ದ ನಿಕೋಲನ ಲಾಯದ ಬಾಡಿಗೆಯನ್ನು ಅದರಲ್ಲೇ ಕೊಡುತ್ತಿದ್ದ.

ಪೆಪಿನೋ ಮತ್ತು ವಯೋಲೆಟ್ಟಾರ ಸ್ನೇಹ, ಪ್ರೀತಿ, ವಿಶ್ವಾಸಗಳು ವರ್ಣಿಸಲಸದಳ. ಇವರಿಬ್ಬರ ಜೊತೆಯ ಓಡಾಟ ಅಸಿಸಿಯಲ್ಲಿ ಸಾಮಾನ್ಯವಾಗಿತ್ತು. ಕಂದು ಬಣ್ಣದ, ಸಣಕಲ, ಚಿಂದಿ ಬಟ್ಟೆಯನ್ನು ಧರಿಸಿ ಬರಿಗಾಲಿನಲ್ಲಿ ಓಡಾಡುವ ಪೆಪಿನೋ ಎಲ್ಲರ ಗಮನವನ್ನೂ ಸೆಳೆದಿದ್ದ. ದೊಡ್ಡ ಕಪ್ಪು ಕಣ್ಣುಗಳು, ಸ್ವಲ್ಪ ಅಗಲವೆನಿಸುವ ಕಿವಿಗಳು. ಹತ್ತು ವರುಷದವನಾಗಿದ್ದಾಗಲೇ ತಂದೆ ತಾಯಿಗಳನ್ನು ಕಳೆದುಕೊಂಡು ಅನಾಥನಾಗಿದ್ದ ಪೆಪಿನೋ ಯಾರಿಗೂ ಭಾರವಾಗದೆ, ತನ್ನ ಜೀವನಕ್ಕೆ ಬೇಕಾದ ಹಣವನ್ನು ಸಂಪಾದಿಸಲು ಬೇಕಾದ ಶಕ್ತಿ - ಚಾತುರ್ಯಗಳುಳ್ಳವನಾಗಿದ್ದ. ತಂದೆತಾಯಿಗಳಿಂದ ಆತನಿಗೆ ಬಂದ ಆಸ್ತಿಯೆಂದರೆ ಮಣ್ಣಿನ ಬಣ್ಣದ, ಮೊನಾಲಿಸಾ ನಗೆಯನ್ನು ಸೂಸುತ್ತಿದ್ದ ಕತ್ತೆ ವಯೋಲೆಟ್ಟಾ ಮಾತ್ರ..

ವಯೋಲೆಟ್ಟಾ ಒಳ್ಳೆಯ ಕತ್ತೆ. ವಿನಯ ಶೀಲ ಸ್ವಭಾವದ ಜೀವಿ. ಮುಗ್ಧ ಕಣ್ಣುಗಳು, ಉದ್ದನೆಯ ಮುಖ, ಚೂಪಾದ ಕಿವಿಗಳು ಅದಕ್ಕೆ ಹೊಸ ವ್ಯಕ್ತಿತ್ವವನ್ನೇ ಕೊಟ್ಟಿದ್ದವು. ಅದರ ಬಾಯಿ ಸ್ವಲ್ಪ ಅಗಲವಾಗಿದ್ದುದರಿಂದಲೋ ಏನೋ, ನೋಡುವವರಿಗೆ ಸದಾ ಅದು ಕಿರುನಗೆ ಸೂಸು ತ್ತಿದ್ದಂತೆ ಕಾಣುತ್ತಿತ್ತು. ಪೆಪಿನೋನ ಕಪ್ಪು ಕಣ್ಣು ಗಳಿಗೂ ವಯೋಲೆಟ್ಟಾಳ ಕಿರುನಗೆಗೂ ಒಂದು ರೀತಿಯ ಬೆಸುಗೆಯಿತ್ತೆಂದರೆ ಅತಿಶಯೋಕ್ತಿಯೇ ನಲ್ಲ. ಪೆಪಿನೋ ತನಗೆ ಎಷ್ಟು ಬೇಕೋ ಅಷ್ಟು ಹಣವನ್ನು ಸಂಪಾದಿಸಿದ್ದ. ಪಾದ್ರಿ ಡೇಮಿಕೋನ ಸಲಹೆಯಂತೆ ಸ್ವಲ್ಪ ಉಳಿತಾಯವನ್ನೂ ಮಾಡಿದ್ದ.

ಪೆಪಿನೋ ಮತ್ತು ವಯೋಲೆಟ್ಟಾ ಎಲ್ಲಾ ರೀತಿಯ ಕೆಲಸಗಳನ್ನು ಮಾಡುತ್ತಿದ್ದರು. ಮರದ ರಾಶಿಯನ್ನು ಹೊರುವುದೋ, ಮೈಲಿಗಟ್ಟಲೇ ದೂರದಿಂದ ನೀರನ್ನು ತಂದು ತುಂಬುವುದೋ, ಪೇಟೆಯಿಂದ ಭರ್ತಿ ಮಾಡಿದ ಸಾಮಾನಿನ ಹೊರೆಯನ್ನು ದೇಹದ ಎರಡೂ ಕಡೆಗಳಲ್ಲಿ ಹೊರುವುದೋ ಅಥವಾ ಯಾವುದಾದರೂ ಗಾಡಿ ಕೆಸರಿನಲ್ಲಿ ಹೂತು ಹೋಗಿದ್ದರೆ ಅದನ್ನು ಎಳೆಯಲು ಸಹಾಯ ಮಾಡುವುದೋ ಇವೇ ಮುಂತಾದವು. ಆಲಿವ್ ಮರದ ಸುಗ್ಗಿಯ ಲ್ಲಂತೂ ಇಬ್ಬರಿಗೂ ಮೈ ತುಂಬಾ ಕೆಲಸ. ಕೆಲವು ಸಲ ಕಂಠಮಟ ಕುಡಿದವರನ್ನೂ ಎಳೆದು ಕೊಂಡು ಹೋಗಿ ಅವರ ಮನೆಗೆ ತಲುಪಿಸಬೇಕಾ ಗುತ್ತಿತ್ತು.

ಇವರಿಬ್ಬರ ಮಧುರ ಸ್ನೇಹಕ್ಕೆ ಇದೇ ಕಾರಣ ಗಳೆಂದು ತಿಳಿಯಬಾರದು. ಪೆಪಿನೋಗೆ ಬದು ಕುವ ದಾರಿಯನ್ನು ತೋರಿಸುವುದಲ್ಲದೇ ಅವನ ಪಾಲಿಗೆ ತಾಯಿ, ತಂದೆ, ಅಣ್ಣ, ಸ್ನೇಹಿತ ಎಲ್ಲವೂ ಹೌದು ಈ ವಯೋಲೆಟ್ಟಾ. ಕತ್ತಲಾ- ಯಿತೆಂದರೆ ಪೆಪಿನೋ ಮತ್ತು ವಯೋಲೆಟ್ಟಾ ನಿಕೋಲನ ಲಾಯದ ಮೂಲೆಯಲ್ಲಿ ಹುಲ್ಲಿನ ಮೇಲೆ ಮಲಗುವರು. ವಯೋಲೆಟ್ಟಾಳ ಕುತ್ತಿಗೆ ಪೆಪಿನೋಗೆ ದಿಂಬಾಗುವುದು.

ಈ ಪರ್ವತ ಪ್ರದೇಶದಲ್ಲಿ ಕಲ್ಲು ಮುಳ್ಳಿನ ರಸ್ತೆಗಳೇ ಹೆಚ್ಚಾಗಿರುವುದರಿಂದ ಬಾಲಕ ಪೆಪಿ ನೋನ ಕಾಲಿಗೆ ಆಗುವ ಗಾಯಗಳನ್ನು ವಯೋ ಲೆಟ್ಟಾ ಪ್ರೀತಿಯಿಂದ ನೆಕ್ಕುತ್ತಿದ್ದಳು. ಅವನು ಸಂತೋಷದಿಂದಿದ್ದಾಗ ದೊಡ್ಡ ಗಂಟಲಿನಲ್ಲಿ ಹಾಡುತ್ತಿದ್ದುದನ್ನು ಕಿವಿಯಗಲಿಸಿ ಆನಂದದಿಂದ ಕೇಳುವಳು. ತನಗೇನಾದರೂ ದುಃಖವಾಗಿ ಒಂಟಿತನ ಕಾಡಿದರೆ, ಪೆಪಿನೋ ವಯೋಲೆ ಟ್ಟಾಳ ಮೃದುವಾದ ಬೆನ್ನಿನ ಮೇಲೆ ಒರಗಿ ತನ್ನ ಬೇಗುದಿಯನ್ನು ಕಡಿಮೆ ಮಾಡಿಕೊಳ್ಳುತ್ತಿದ್ದ.

ತನ್ನ ಜವಾಬ್ದಾರಿಯಂತೆ ಪೆಪಿನೋ ವಯೋ ಲೆಟ್ಟಾಳಗೆ ನೀರು ಕುಡಿಸಿ, ಸಮಯಕ್ಕೆ ತಕ್ಕಂತೆ ಹೊಟ್ಟೆಗೆ ಹಾಕುತ್ತಾನೆ. ಅವಳ ಮೈಮೇಲಿ ಉಣ್ಣೆ ಅಥವಾ ಇನ್ನೇನಾದರೂ ಕ್ರಿಮಿಕೀಟಗಳಿ ದ್ದರೆ ಹುಡುಕಿ ತೆಗೆಯುವನು. ಎಷ್ಟೋ ಸಲ ಕಾಲಿನ ಗೊರಸಿಗೆ ಹೊಕ್ಕಿದ್ದ ಸಣ್ಣ ಕಲ್ಲುಗಳನ್ನು ತೆಗೆಯುವನು. ಅವಳ ಮೈಯನ್ನೆಲ್ಲಾ ಚೆನ್ನಾಗಿ ತಿಕ್ಕಿ ಮಾಲೀಷ್ ಮಾಡುವನು. ಪ್ರೀತಿಯಿಂದ ನೋಡಿಕೊಳ್ಳುವನು. ಅಗತ್ಯಕ್ಕಿಂತ ಹೆಚ್ಚಾಗಿ ಒಂದು ಸಲವೂ ಹೊಡೆಯುತ್ತಿರಲಿಲ್ಲ. ಅವನು ಇಷ್ಟು ಚೆನ್ನಾಗಿ ನೋಡಿಕೊಳ್ಳುತ್ತಿರುವುದರಿಂ ದಲೋ ಏನೋ ವಯೋಲೆಟ್ಟಾ ಪೆಪಿನೋ ವನ್ನು ಸಾಕ್ಷಾತ್ ದೇವರೆಂದೇ ನಂಬಿ ವಿಧೇಯ ಳಾಗಿ ನಡೆದುಕೊಳ್ಳುತ್ತಿದ್ದಾಳೆ.

ಒಂದು ವಸಂತಮಾಸದ ಮೊದಲ ದಿನಗ ಳಲ್ಲಿ ಆರೋಗ್ಯ ಕುಂದಿ ವಯೋಲೆಟ್ಟಾ ಕಾಯಿಲೆ ಬಿದ್ದಳು. ಇದರಿಂದ ಪೆಪಿನೋ ಬಹಳ ಗಂಭೀರ ಪರಿಸ್ಥಿತಿಯನ್ನೇ ಎದುರಿಸಬೇಕಾಯಿತು. ತನ್ನ ನಡುವಳಿಕೆಗೆ ವ್ಯತಿರಿಕ್ತವಾಗಿ ನಡೆದುಕೊಳ್ಳುತ್ತಾ, ಆಹಾರ ತಿನ್ನುವುದನ್ನೂ ನಿಲ್ಲಿಸಿ, ಪೆಪಿನೋನ ಸಾಂತ್ವನಕ್ಕಾಗಲಿ ಹೊಡೆತಕ್ಕಾಗಲಿ ವಯೋ ಲೆಟ್ಟಾ ಮಣಿಯಲೇ ಇಲ್ಲ. ವಯೋಲೆಟ್ಟಾಳು ತೂಕ ಕಳೆದುಕೊಂಡಿರುವುದನ್ನು ಪೆಪಿನೋ ಗಮನಿಸಿದ. ದಷ್ಟ ಪುಷ್ಟವಾಗಿದ್ದ ಅವಳ ಎದೆ ಗೂಡು ಈಗ ಎಲುಬಿನ ಹಂದರವಾಗಿದೆ. ಅವಳ ಮುಖಚಹರೆ ವಿಪರೀತ ಬದಲಾಗಿದೆ. ಬಿಸ್ತ

ಮುಖ, ಕ್ಷೀಣ ದೇಹ. ಈ ಕಾಯಿಲೆ ಅವಳ ಮುಖದ ಮೇಲಿನ ಮೋನಾಲಿಸಾ ನಗೆಯನ್ನೂ ಮಾಯವಾಗಿಸಿದೆ.

ತಾನು ಎಚ್ಚರಿಕೆಯಿಂದ ಉಳಿಸಿದ್ದ ಹಣವನ್ನೆಲ್ಲಾ ತೆಗೆದು, ಎಣಿಸಿ ಸರಿಯಾಗಿದೆಯೆಂದು ಖಚಿತಪಡಿಸಿಕೊಂಡ ಪೆಪಿನೋ, ಅಲ್ಲಿಯ ಪಶುವೈದ್ಯ ಬಾರ್ಟೋಲಿಯನ್ನು ಭೇಟಿ ಮಾಡಿದ. ಪಶುವೈದ್ಯ ತನ್ನ ಕರ್ತವ್ಯದಂತೆ ಕಾಯಿಲೆ ಬಿದ್ದ ವಯೋಲೆಟ್ಟಾಳನ್ನು ಪರೀಕ್ಷಿಸಿ, ತನ್ನ ಬುದ್ಧಿ ಮತ್ತು ಅನುಭವವನ್ನೆಲ್ಲಾ ವ್ಯಯಿಸಿ ಔಷಧಿ ಕೊಟ್ಟ. ಆದರೆ ವಯೋಲೆಟ್ಟಾಳ ಸ್ಥಿತಿ ಮಾತ್ರ ಕಿಂಚಿತ್ತೂ ಸುಧಾರಿಸಲಿಲ್ಲ. ಬದಲಿಗೆ ಇನ್ನಷ್ಟು ಕೃಶವಾಗಿ ಮತ್ತಷ್ಟು ತೂಕವನ್ನು ಕಳೆದುಕೊಂಡಳು. ಡಾ. ಬಾರ್ಟೋಲಿ ಸಣ್ಣಗೆ ಶಿಳ್ಳು ಹಾಕುತ್ತ, 'ಈಗಂತೂ ಇವಳ ಆರೋಗ್ಯದ ಬಗ್ಗೆ ಏನೂ ಹೇಳಲು ಸಾಧ್ಯವಿಲ್ಲ. ಯಾವುದೋ ಕೀಟ ಕಚ್ಚಿರಬಹುದು. ಇಲ್ಲವೇ ಕರುಳಿನ ತೊಂದರೆಯಿರಬಹುದು. ಯಾವುದನ್ನೂ ಕರಾರುವಾಕ್ಕಾಗಿ ಹೇಳುವುದು ಸಾಧ್ಯವೇ ಇಲ್ಲ. ಇದೇ ತರಹದ ಇನ್ನೊಂದು ಕೇಸು ಫೋಲಿಗ್ನೋನಲ್ಲಿ ಕಂಡು ಬಂದಿದೆ' ಎಂದು ಹೇಳಿ ವಯೋಲೆಟ್ಟಾಳಿಗೆ ವಿಶ್ರಾಂತಿಯನ್ನು ಸೂಚಿಸಿ ಮೃದುವಾದ ಆಹಾರವನ್ನು ಕೊಡಲು ಹೇಳಿ, ''ದೇವರು ಕಣ್ಣುಬಿಟ್ಟರೆ ಅವಳ ಕಾಯಿಲೆ ವಾಸಿಯಾಗಬಹುದು, ಇಲ್ಲ ದೇವರ ಪಾದ ಸೇರಿದರೆ ಅವಳು ಪಡುತ್ತಿರುವ ಸಂಕಟವೂ ದೂರವಾಗುವುದು,'' ಎಂದು ಸೇರಿಸಿದ.

ವೈದ್ಯ ಹೊರಟ ತಕ್ಷಣವೇ ಪೆಪಿನೋ ತನ್ನ ತಲೆಯನ್ನು ವಯೋಲೆಟ್ಟಾಳ ಮೇಲಿಟ್ಟು ಬಿಕ್ಕಿ ಬಿಕ್ಕಿ ಅಳತೊಡಗಿದ. ಸ್ವಲ್ಪ ಹೊತ್ತಿನ ನಂತರ ಅವನ ದುಃಖ ಕಡಿಮೆಯಾಯಿತು. ತನಗಿದ್ದ ಒಬ್ಬನೇ ಬಂಧುವನ್ನು ಕಳೆದುಕೊಳ್ಳಲು ಪೆಪಿನೋ ಸಿದ್ಧನಿರಲಿಲ್ಲ. ಈ ಭೂಮಿಯಲ್ಲಿ ಯಾರೂ ವಯೋಲೆಟ್ಟಾಳಿಗೆ ಸಹಾಯ ಮಾಡದಿದ್ದಲ್ಲಿ, ಆ ದೇವರನ್ನೇ ಮೊರೆ ಹೋಗಬೇಕು ಎಂದು ನಿರ್ಧರಿಸಿದ. ಬ್ಯಾಸಿಲಿಕಾದ ಸಂತ ಫ್ರಾನ್ಸಿಸನ ದೇವಾಲಯದ ನೆಲಮಾಳಿಗೆಯಲ್ಲಿರುವ ಮಹಾಸಂತನ ಮೃತ ದೇಹವನ್ನಿಟ್ಟಿದ್ದ ಸಮಾಧಿಗೆ ವಯೋಲೆಟ್ಟಾಳನ್ನು ಕರೆದುಕೊಂಡು ಹೋಗಲು ನಿಶ್ಚಯಿಸಿದ. ಸಂತ ಫ್ರಾನ್ಸಿಸ ಸಕಲ ಪ್ರಾಣಿಗಳನ್ನು ಪ್ರೀತಿಸುತ್ತಿದ್ದುದರಿಂದ ಮತ್ತು ನಾಲ್ಕು ಕಾಲಿನ ಪ್ರಾಣಿಗಳಿಂದಲೂ ಸೇವೆ ಪಡೆಯುತ್ತಿರುವುದರಿಂದ, ವಯೋಲೆಟ್ಟಾಳ ಸ್ಥಿತಿಯನ್ನು ನೋಡಿ ಸಂತ ಕೃಪೆ ತೋರುವುದರಲ್ಲಿ ಪೆಪಿನೋಗೆ ಯಾವ ಸಂದೇಹವೂ ಇರಲಿಲ್ಲ.

ಇದಕ್ಕೆ ಸಂಬಂಧಪಟ್ಟ ವಿಷಯಗಳನ್ನೆಲ್ಲಾ ಪಾದ್ರಿ ಡೇಮಿಕೋನಿಂದ ಪಡೆದ ಪೆಪಿನೋ. ಪಾದ್ರಿ ಡೇಮಿಕೊ ಸಂತ ಫ್ರಾನ್ಸಿಸ ಬಗೆಗೆ ಆಳವಾದ ಅಧ್ಯಯನ ಮಾಡಿರುವುದರಿಂದ ಅವನ ರಕ್ಷೆಯ ಬಗ್ಗೆ ಹೆಚ್ಚಿನ ವಿಷಯಗಳನ್ನು ಪೆಪಿನೋಗೆ ತಿಳಿಸಿದ. ಇಂದಿಗೂ ಅಸಿಸಿ ಪಟ್ಟಣದ ಉರುಟಾದ ರಸ್ತೆಗಳಲ್ಲೋ ಮುಖ್ಯ ವೃತ್ತದಲ್ಲೋ ತಲೆಯುಡುಗೆಯನ್ನು ತೊಟ್ಟ ಕ್ರೈಸ್ತಗುರುವನ್ನು ಕಾಣಬಹುದು ಎಂದು ತಿಳಿಸಿದ.

ಪೆಪಿನೋ ಅಲ್ಲಿಗೆ ಹೋಗಲು ಇನ್ನೊಂದು ಪ್ರಸಂಗವೂ ಪ್ರೇರಕವಾಯಿತು. ನಿಕೋಲನ ಮಗ ಗಿಯನಿ ಅವನ ಆಪ್ತ ಮಿತ್ರ. ತನ್ನ ಬೆಕ್ಕಿನ ಮರಿಗೆ ಹುಷಾರಿಲ್ಲದಿದ್ದಾಗ, ಸಂತನ ಆಶೀರ್ವಾದವನ್ನು ಆತ ಪಡೆದಿದ್ದ. ಮರಿಯು ಕಾಯಿಲೆ ವಾಸಿಯಾಗಿ ಈಗದು ಕಾಲುಗಳನ್ನು ಸ್ವಲ್ಪ ಎಳೆದು ಹಾಕುತ್ತಿದೆ ಅಷ್ಟೆ!

ಪೆಪಿನೋಗೆ ಹೇಗಾದರೂ ವಯೋಲೆಟ್ಟಾಳನ್ನು ಉಳಿಸಿಕೊಳ್ಳಬೇಕೆಂಬ ಹಂಬಲ ಹೆಚ್ಚಾಯಿತು. ಅವಳೇನಾದರೂ ಸತ್ತರೆ ತನಗೂ ಸಾವೇ ಗತಿ ಎಂದಾತ ಯೋಚಿಸಿದ.

ಅಂತೂ ಕಷ್ಟಪಟ್ಟು ವಯೋಲೆಟ್ಟಾಳನ್ನು ಎಬ್ಬಿಸಿ, ಸಂತೈಸಿ, ಹುರಿದುಂಬಿಸಿದ. ಆದಷ್ಟು ಕೋಲನ್ನು ಹೆಚ್ಚಾಗಿ ಬಳಸದೆ ಅಸಿಸಿಯ ಕಿರಿದಾದ ರಸ್ತೆಗಳಲ್ಲಿ ನಡೆಸಿಕೊಂಡು ಬೆಟ್ಟವನ್ನು ಏರಿ ಸಂತ ಫ್ರಾನ್ಸಿಸಸ್‌ನ ಬ್ಯಾಸಿಲಿಕಾದ ಚರ್ಚಿಗೆ ಬಂದ. ಚರ್ಚಿನ ಮುಂಭಾಗದ ಬೃಹದಾಕಾರವಾದ ಬಾಗಿಲಿನ ಹತ್ತಿರ ಬಂದು, ಕರ್ತವ್ಯನಿರ

ರಾಗಿದ್ದ ಫಾ. ಬರ್ನಾರ್ಡ್‌ರನ್ನು ಗೌರವದಿಂದ ವಂದಿಸಿ, ತನ್ನ ದುಃಖವನ್ನೆಲ್ಲಾ ತೋಡಿಕೊಂಡು ವಯೋಲೆಟ್ಟಾಳನ್ನು ಸಮಾಧಿಗೆ ಕರೆದುಕೊಂಡು ಹೋಗಲು ಬಹಳ ವಿನಯದಿಂದ ಅನುಮತಿಯನ್ನು ಬೇಡಿದ.

ಫಾ. ಬರ್ನಾರ್ಡ್ ಹೊಸದಾಗಿ ಅಧಿಕಾರವನ್ನು ವಹಿಸಿಕೊಂಡಿದ್ದ. ಪೆಪಿನೋನ ಮಾತುಗಳನ್ನು ಕೇಳಿದೊಡನೆಯೆ, "ಏ! ಮೂರ್ಖ, ಮೊದಲು ನಿನ್ನ ಕತ್ತೆಯನ್ನು ಹೊರಕ್ಕೆ ಕರೆದುಕೊಂಡು ಹೋಗು," ಎಂದು ಅಬ್ಬರಿಸಿದ. ಪ್ರಾಣಿಗಳನ್ನು ಚರ್ಚಿನ ಒಳಗೆ ಕರೆದುಕೊಂಡು ಹೋಗುವುದು ನಿಷಿದ್ಧ. ಚರ್ಚಿನ ಪಾವಿತ್ರ್ಯ ಹಾಳಾಗುವುದಿಲ್ಲವೆ! ಅದೂ ಅಲ್ಲದೇ ಹಳೆಯದಾದ, ಇಕ್ಕಟ್ಟಾದ, ಸುರುಳಿಯಾಕಾರದ ಮೆಟ್ಟಿಲಿನ ಮೇಲೆ ಮನುಷ್ಯರೇ ಓಡಾಡುವುದು ಕಷ್ಟವಾಗುವಾಗ ನಾಲ್ಕು ಕಾಲುಗಳುಳ್ಳ ಪ್ರಾಣಿಗಳು ಒಳಗೆ ಹೋಗಲು ಸಾಧ್ಯವೇ?

ನಿರಾಶನಾದ ಪೆಪಿನೋ ಹೆಬ್ಬಾಗಿಲಿನಿಂದ ನಿಧಾನವಾಗಿ ಹೆಜ್ಜೆ ಹಾಕುತ್ತಾ ವಯೋಲೆಟ್ಟಾಳ ಹತ್ತಿರ ಬಂದ. ಅವಳ ಕುತ್ತಿಗೆಯನ್ನು ಬಳಸುತ್ತಾ ಯಶಸ್ಸನ್ನು ಸಾಧಿಸಲು ತಾನು ಏನು ಮಾಡಬೇಕೆಂದು ಯೋಚಿಸಿದ. ಆದ ಅಪಮಾನದಿಂದ ಒಂದು ಕ್ಷಣ ನಿರಾಶನಾದರೂ ಪೆಪಿನೋ ಧೈರ್ಯಗೆಡಲಿಲ್ಲ.

ಬಾಲ್ಯದಲ್ಲಿ ತಾಯಿತಂದೆಗಳನ್ನು ಕಳೆದುಕೊಂಡು ಕಷ್ಟದಿಂದ ಜೀವಿಸುತ್ತಿದ್ದರೂ, ಬೇರೆಯವರೊಡನೆ ಹೋಲಿಸಿಕೊಂಡಾಗ ತಾನು ಬಹಳ ಅದೃಷ್ಟವಂತನೆಂದು ಪೆಪಿನೋ ನಂಬಿದ್ದ.

ಪೆಪಿನೋ ಬಾಲಕನಾದರೂ ಆತ ನಂಬಿದ್ದ ಒಳ್ಳೆಯ ಜೀವನ ಮೌಲ್ಯಗಳು ಬಾಳಿನಲ್ಲಿ ಯಶಸ್ಸು ಪಡೆಯಲು ಸಹಾಯ ಮಾಡಿದವು. ಅವನ ಅದೃಷ್ಟವೋ ಎಂಬಂತೆ ಆರು ತಿಂಗಳಿನಿಂದ ಅಸಿಸಿಯಲ್ಲೇ ನೆಲೆಸಿದ್ದ ಅಮೇರಿಕದ ಸೈನಿಕ ಫ್ರಾನ್ಸಿಸ್ ಝೇವಿಯರ್ ಓ ಹೋಲೋರಾನ್‌ನ ಭೇಟಿಯಾಯಿತು. ಪೆಪಿನೋನ ಪಾಲಿಗೆ



ಆತನೇ ನಾಯಕ. ಸಾಯುವ ಮೊದಲು ಆ ಸೈನಿಕ, ''ಪೆಪಿನೋ, ನೀನೇನಾದರೂ ಈ ಪ್ರಪಂಚದಲ್ಲಿ ಜಯ ಗಳಿಸಬೇಕಾದರೇ ಯಾವುದಕ್ಕೂ 'ಇಲ್ಲ' ಎನ್ನುವ ಉತ್ತರ ಪಡೆಯಬೇಡ. ಆಗಲೇ ನಿನಗೆ ಯಶಸ್ಸು ಕಟ್ಟಿಟ್ಟ ಬುತ್ತಿ, ಅರ್ಥವಾಯಿತೇ?'' ಎಂದು ಕೇಳಿ ತನ್ನ ದೃಷ್ಟಾಂತವನ್ನೇ ಉದಾಹರಣೆಯಾಗಿ ಕೊಟ್ಟಿದ್ದ. ಪೆಪಿನೋ ಅವನ ಸಲಹೆಯನ್ನು ಎಂದಿಗೂ ಮರೆಯಲಿಲ್ಲ.

ಹೀಗೆಯೇ ಸ್ವಲ್ಪ ಹೊತ್ತು ಯೋಚಿಸುತ್ತಿದ್ದಾಗ ಪೆಪಿನೋಗೆ ಮುಂದಿನ ದಾರಿ ತೋರಿತು. ತಕ್ಷಣ ತನ್ನ ಹಿತಚಿಂತಕ ಪಾದ್ರಿ ಡೇಮಿಕೋನನ್ನು ಭೇಟಿಯಾಗಲು ನಿರ್ಧರಿಸಿದ.

ಅಗಲವಾದ ಹಣೆ, ಹೊಳೆಯುವ ಕಣ್ಣು, ಹೆಚ್ಚಿನ ಜವಾಬ್ದಾರಿಯನ್ನು ಹೊರಲು ಹೇಳಿ ಮಾಡಿಸಿದಂತಹ ಭುಜಗಳು ಪಾದ್ರಿ ಡೇಮಿಕೋನ ವ್ಯಕ್ತಿತ್ವಕ್ಕೆ ಸೊಬಗು ನೀಡಿದ್ದವು. ಪಾದ್ರಿಯು ಪೆಪಿನೋನನ್ನು ಸ್ವಾಗತಿಸುತ್ತ, ''ಮಗೂ, ನೀನೇನೋ ನ್ಯಾಯವಾದುದನ್ನೇ ಕೇಳುತ್ತಿದ್ದೀಯಾ. ಆದರೆ ನೀನು ನೆಲಮಾಳಿಗೆಯಲ್ಲಿರುವ ಸಮಾಧಿಗೆ ಹೋಗಬೇಕಾದರೆ ಸೂಪರ್‌ವೈಜರನ್ನು ಭೇಟಿ ಮಾಡು. ಅವನು ಅನುಮತಿಯನ್ನು ಕೊಟ್ಟರೂ ಕೊಡಬಹುದು, ಇಲ್ಲವೇ ನಿರಾಕರಿಸಲೂಬಹುದು,'' ಎಂದ.

ಪಾದ್ರಿ ಡೇಮಿಕೋನ ಮಾತುಗಳು ಪೆಪಿನೋನ ಮನಸ್ಸಿನಲ್ಲಿ ಹೆಚ್ಚಿನ ಉತ್ಸಾಹವನ್ನು ಮೂಡಿಸಿದವು. ಅವನು ಸೂಪರ್‌ವೈಸರನ್ನು ಭೇಟಿಯಾಗಲೂ ತಯಾರಾಗಿಯೇ ಇದ್ದ. ಈಗ ಬ್ಯಾಸಿಲಿಕಾದ ಎರಡು ಚರ್ಚುಗಳಲ್ಲದೆ ಸಮಾಧಿಗೂ ಪ್ರವಾಸಿಗರ ಭೇಟಿ ದಿನದಿನಕ್ಕೂ ಹೆಚ್ಚುತ್ತಿದೆ. ಪೆಪಿನೋನ ಮುಖವನ್ನು ನೋಡಿದೊಡನೆ ಪಾದ್ರಿ ಡೇಮಿಕೋ, ಈ ಹುಡುಗನ ಆಸೆಯನ್ನು ಏಕೆ ನೆರವೇರಿಸಬಾರದು ಎಂದೂ ಯೋಚಿಸಿದ. ಆದರೆ ಅದು ಅವನ ಅಧಿಕಾರ ವ್ಯಾಪ್ತಿಯನ್ನು ಮೀರಿದೆ. ಪೆಪಿನೋನ ಭಾವನೆಗಳಿಗೆ ಸೂಪರ್‌ವೈಸರ್‌ನ ಪ್ರತಿಕ್ರಿಯೆಯನ್ನೂ ಅವನು ಮೊದಲೇ ಊಹಿಸಿದ್ದ.

ಪೆಪಿನೋ ಪಾದ್ರಿಗೆ ವಂದಿಸಿ ಹೊರಡಲು ತಯಾರಾದ. ಆದರೆ ಅವನ ಮನಸ್ಸಿನಲ್ಲಿ ಭಯವನ್ನು ಮೂಡಿಸಲು ಪಾದ್ರಿ ಸಿದ್ಧನಿಲ್ಲ. ಪೆಪಿನೋನನ್ನು ಹತ್ತಿರಕ್ಕೆ ಕರೆದು, ''ನಿನಗೆ ಮುಂಬಾಗಿಲಿನಿಂದ ಅಲ್ಲಿಗೆ ಹೋಗಲು ಸಾಧ್ಯವಾಗದಿದ್ದರೆ ಹಿಂಬಾಗಿಲಿನಿಂದ ಹೋಗಬಹುದು. ಅದು ಹಳೆಯ ದಾರಿಯಾದುದರಿಂದ ನೂರು ವರ್ಷಗಳಿಂದ ಗೋಡೆ ಎಬ್ಬಿಸಿ ಮುಚ್ಚಿದ್ದಾರೆ. ನೀವು ಕೇಳಿಕೊಂಡರೆ ಅವರು ಆ ದಾರಿಯನ್ನು ತೆರೆಯಬಹುದು. ನೀನು ಮಾತನಾಡುವಾಗ ಈ ಎಲ್ಲಾ ವಿಚಾರಗಳನ್ನೂ ಅವರಿಗೆ ತಿಳಿಸು,'' ಎಂದು ಸೂಚಿಸಿದ.

ಪೆಪಿನೋ ಪಾದ್ರಿಗೆ ವಂದಿಸಿ ಬ್ಯಾಸಿಲಿಕಾದ ಕಡೆಗೆ ಹೆಜ್ಜೆ ಹಾಕಿ ಮೊನಾಸ್ಟರಿಯನ್ನು ತಲುಪಿದವನೇ ಸೂಪರ್‌ವೈಸರನ್ನು ಭೇಟಿ ಮಾಡಲು ಅನುಮತಿ ಕೋರಿದ.

ಸೂಪರ್‌ವೈಸರ್ ಕೆಲವೊಮ್ಮೆ ದಾಕ್ಷಿಣ್ಯಕ್ಕೆ ಕಟ್ಟುಬೀಳುವಂಥ ವ್ಯಕ್ತಿಯೆ. ತಾನು ಧರ್ಮಾಧಿಕಾರಿಯೊಡನೆ ಮಾತನಾಡುತ್ತಿದ್ದರೂ ಪೆಪಿನೋನನ್ನು ಭೇಟಿಯಾಗುವುದಾಗಿ ಹೇಳಿ ಕಳುಹಿಸಿದ. ಇಬ್ಬರೂ ಚರ್ಚಿನ ಹಿಂದಿನ ತೋಟದಲ್ಲಿ ಮಾತನಾಡುತ್ತಿರುವಾಗಲೇ ಪೆಪಿನೋ ಅವರ ಮಾತುಕತೆ ಮುಗಿಯುವವರೆಗೂ ಅಲ್ಲೇ ನಿಂತಿದ್ದ.

ಇಬ್ಬರೂ ಅಧಿಕಾರಿಗಳೂ ಆ ಕಡೆಯಿಂದ ಈ ಕಡೆಗೆ ಓಡಾಡುತ್ತ ಚರ್ಚಿಸುತ್ತಿದ್ದರು. ತನ್ನ ಬೇಡಿಕೆಯನ್ನು ಇವರು ಮನ್ನಿಸುತ್ತಾರೋ ಇಲ್ಲವೋ ಎಂದು ಯೋಚಿಸುತ್ತಾ ಪೆಪಿನೋ ಅವರನ್ನೇ ದೀನನಾಗಿ ನೋಡುತ್ತಿದ್ದ. ಸೂಪರ್‌ವೈಸರಂತೂ ಪಕ್ಕಾ ವ್ಯವಹಾರಸ್ಥನಂತೆಯೇ ಕಾಣುತ್ತಿದ್ದ. ಇಬ್ಬರ ಮಾತುಗಳೂ ಅವನಿಗೇ ಕೇಳುತ್ತಿದ್ದುದರಿಂದ ಕಿವಿಯನ್ನು ಒಮ್ಮೆ ತಿಕ್ಕಿಕೊಂಡು ಆ ಮಾತುಗಳನ್ನೇ ಆಲಿಸತೊಡಗಿದ. ಧರ್ಮಾಧಿಕಾರಿ ಸಂತ ಫ್ರಾನ್ಸಿಸರ ಬಗ್ಗೆಯೇ ಹೇಳುತ್ತಿದ್ದ: ''ಅವರು ಈ ಭೂಮಿಯನ್ನು ತ್ಯಜಿಸಿ ಎಷ್ಟು ವರ್ಷವಾಯಿತೋ, ಈಗಂತೂ

ಜೀವನ ಮುಂಚಿನಷ್ಟು ಕಷ್ಟವಿಲ್ಲ. ಹೀಗಾಗಿ ಯಾರೂ ಈಗ ಕಷ್ಟಪಡಲು ಇಷ್ಟಪಡುವುದೇ ಇಲ್ಲ.''

ಧರ್ಮಾಧಿಕಾರಿಯ ಮಾತಿಗೆ ಸೂಪರವೈಸರ್ ಹೇಳಿದ: ''ಸಂತ ಫ್ರಾನ್ಸಿಸ್‌ರ ಸಮಾಧಿ ಈಗ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸುತ್ತಿದೆ. ಈ ಪವಿತ್ರವಾದ ಸ್ಥಳದಲ್ಲಿ ಸಂತರ ಮರಣಾನಂತರ ಅವರ ಯಾವುದಾದರೂ ಅಂಗವನ್ನಾದರೂ ಇಡಬಹುದಿತ್ತು. ಕೊನೆಯ ಪಕ್ಷ ಅವರ ನಾಲಿಗೆಯನ್ನೋ, ಕೂದಲೊ, ಇಲ್ಲವೇ ಬೆರಳಿನ ಉಗುರನ್ನಾದರೂ...''

ಧರ್ಮಾಧಿಕಾರಿ ದೂರದಲ್ಲಿ ದೃಷ್ಟಿ ಹರಿಸುತ್ತ ಹೇಳಿದ, ''ಈ ರೀತಿಯ ಸಂದೇಶಗಳೇ ನಮಗೆ ಈಗ ಅಗತ್ಯವಾಗಿರುವುದು. ಪವಿತ್ರವಾದ ಹೃದಯದ ಸಂದೇಶ ಅನೇಕ ಶತಮಾನಗಳವರೆಗೂ ದಾರಿಯನ್ನು ತೋರಿಸುತ್ತಲೇ ಇರುತ್ತದೆ.'' ನಿಟ್ಟುಸಿರು ಬಿಡುತ್ತ ಒಮ್ಮೆ ಕೆಮ್ಮಿದಾಗ ಪೆಪಿನೋ ಕಾಯುತ್ತಿರುವುದು ಅವನ ಗಮನಕ್ಕೆ ಬಂದಿತು. ಸೂಪರ್‌ವೈಸರ್ ಕೂಡ ಅವನತ್ತ ತಿರುಗಿ, ''ಮಗೂ, ನನ್ನಿಂದ ನಿನಗೆ ಏನಾದರೂ ಸಹಾಯ ಬೇಕೇ?'' ಎಂದು ಕೇಳಿದ.

ಪೆಪಿನೋ ದೈನ್ಯದಿಂದ ಹೇಳತೊಡಗಿದ, ''ಸ್ವಾಮಿ, ನನ್ನ ಕತ್ತೆ ವಯೋಲೆಟ್ಟಾ ತೀವ್ರವಾದ ಕಾಯಿಲೆಯಿಂದ ನರಳುತ್ತಿದೆ. ಡಾ. ಬಾರ್ಟೋಲಿ ಹೇಳಿದಂತೆ ಯಾವ ವೈದ್ಯರೂ ಅವಳ ಕಾಯಿಲೆಯನ್ನು ವಾಸಿ ಮಾಡಲು ಸಾಧ್ಯವಿಲ್ಲ. ದಯವಿಟ್ಟು ನನ್ನ ಕತ್ತೆಯನ್ನು ಸಂತ ಫ್ರಾನ್ಸಿಸರ ಸಮಾಧಿಗೆ ಕರೆದುಕೊಂಡು ಹೋಗಲು ಅನುಮತಿ ಕೊಡಿಸಿದರೆ ನನ್ನ ಕತ್ತೆಯ ಆರೋಗ್ಯ ಸುಧಾರಿಸಬಹುದು. ಅಲ್ಲದೇ ಸಕಲ ಪ್ರಾಣಿಗಳನ್ನು - ಅದರಲ್ಲೂ ವಿಶೇಷವಾಗಿ ಕತ್ತೆಗಳನ್ನು - ಕಂಡರೆ ಸಂತ ಫ್ರಾನ್ಸಿಸಗೆ ಹೆಚ್ಚಿನ ಮಮತೆ. ತಾವು ಅಪ್ಪಣೆ ಕೊಡಿಸಿದರೆ ನನ್ನ ಕತ್ತೆಯನ್ನು ಸಾವಿನ ದವಡೆಯಿಂದ ಉಳಿಸಿಕೊಳ್ಳುವೆನೆಂಬ ನಂಬಿಕೆ ನನಗೆ ಇದೆ.''

ಸೂಪರ್‌ವೈಸರ್‌ಗೆ ಶಾಕ್ ಹೊಡೆದಂತಾಯಿತು. ''ಆಂ, ಏನಂತಿ?.... ಕತ್ತೆಯೇ! ಇಂತಹ ಹುಚ್ಚು ಆಲೋಚನೆ ನಿನ್ನ ಮನಸ್ಸಿಗೆ ಬಂದದ್ದಾದರೂ ಹೇಗೆ?''

ಪೆಪಿನೋ ತನ್ನ ಸ್ನೇಹಿತ ಗಿಯನಿ ಮತ್ತು ಬೆಕ್ಕಿನ ಮರಿಯ ಕತೆಯನ್ನು ಹೇಳಿದ. ಸೂಪರ್‌ವೈಸರ್ ಗಂಭೀರವಾಗಿಯೆ ಕೇಳಿದ: ''ನಿನ್ನ ಸ್ನೇಹಿತ ಬೆಕ್ಕಿನ ಮರಿಯನ್ನು ಸಮಾಧಿಯೊಳಗೆ ಹೇಗೆ ಕರೆದೊಯ್ದ?'' ಎಂದು ಕೇಳಿದ.

''ಸಾರ್! ಅವನು ತನ್ನ ನಿಲುವಂಗಿಯಲ್ಲಿ ಬೆಕ್ಕನ್ನು ಇಟ್ಟುಕೊಂಡು ಒಳಗೆ ಹೋದ.''

ಇನ್ನು ಮೇಲೆ ಸಣ್ಣ ಮಕ್ಕಳು ಚರ್ಚಿನ ಹಿಂಭಾಗಕ್ಕೆ ಹೋಗುವಾಗ ಅವರ ಮೇಲೆ ಹೆಚ್ಚಿನ ನಿಗಾ ಇಡಬೇಕೆಂದೂ, ಅನುಮಾನಾಸ್ಪದವಾಗಿ ಓಡಾಡುವವರನ್ನು ಸರಿಯಾಗಿ ಪರೀಕ್ಷಿಸಿ ಒಳಗೆ ಬಿಡಬೇಕೆಂದೂ ಸೂಚಿಸಲು ಸೂಪರ್‌ವೈಸರ್ ಮನಸ್ಸಿನಲ್ಲೇ ನಿರ್ಧರಿಸಿದ.

''ಈ ರೀತಿಯ ಪದ್ಧತಿ ನಮ್ಮಲ್ಲಿ ಇಲ್ಲವೇ ಇಲ್ಲ ಪೆಪಿನೋ, ನೀನೇ ಯೋಚಿಸು. ಒಬ್ಬ ರೋಗಿಷ್ಟ ನಾಯಿಯನ್ನು ಕರೆತಂದರೆ ಇನ್ನೊಬ್ಬ ಮೇಕೆಯನ್ನೋ, ಮತ್ತೊಬ್ಬ ಹಂದಿಯನ್ನೋ ತರಬಹುದು. ಆಗ ಸಮಾಧಿ ಒಂದು ದೊಡ್ಡ ಹಂದಿಗೂಡಾಗುತ್ತದೆ. ಗೊತ್ತಾಯಿತಾ?'' ಎಂದ ಸೂಪರ್‌ವೈಸರ್.

ಪೆಪಿನೋ ಮತ್ತೆ ಅವರನ್ನು ಬೇಡಿಕೊಂಡ: ''ಸ್ವಾಮಿ, ವಿಷಯ ಎಲ್ಲರಿಗೂ ಗೊತ್ತಾಗುವುದಕ್ಕಿಂತ ಮುಂಚೆಯೇ ನಾನು ಹೋಗಿ ಬಂದು ಬಿಡುತ್ತೇನೆ.''

ಸೂಪರ್‌ವೈಸರನ ಮನಸ್ಸು ಹೊಯ್ದಾಡತೊಡಗಿತು. ಪೆಪಿನೋನನ್ನು ನೋಡಿದಾಗಲಂತೂ ಅವನ ಮನಸ್ಸು ಕರಗಿತು. ಅವನ ಗುಂಡುತಲೆ, ಹೊಳಪಿನಿಂದ ಕೂಡಿದ ಕಣ್ಣುಗಳು, ಅಗಲವಾದ ಕಿವಿಗಳು ಅವನಲ್ಲಿ ಹೆಚ್ಚಿನ ಪರಿಣಾಮವನ್ನು ಬೀರಿತು. ಡಾ. ಬಾರ್ಟೋಲಿ ಹೇಳಿದಂತೆ ಆ ಕತ್ತೆ ಸಾಯಲೂಬಹುದು. ಪೆಪಿನೋಗೆ ಒಂದು ಅವಕಾಶ ಕೊಟ್ಟರೆ, ಹೆಚ್ಚೆಂದರೆ

ಒಮ್ಮೆ ಸಮಾಧಿ ಕೊಳಕಾಗಬಹುದು. ಈ ದಿಕ್ಕಿನಲ್ಲಿ ಧರ್ಮಾಧಿಕಾರಿಯ ಅಭಿಪ್ರಾಯ ಹೇಗಿರಬಹುದೆಂದು ಸೂಪರ್‌ವೈಸರ್ ಚಿಂತಿಸುತ್ತಿದ್ದಾನೆ.

ಸ್ವಲ್ಪ ಹೊತ್ತು ಸುಮ್ಮನಿದ್ದ ಸೂಪರ್‌ವೈಸರ್ ಮತ್ತೆ ಮಾತನ್ನು ಮುಂದುವರೆಸಿದ: "ಒಂದು ವೇಳೆ ನಾವು ಕತ್ತೆಯನ್ನು ಒಳಕ್ಕೆ ಕರೆದುಕೊಂಡು ಹೋಗಲು ನಿನಗೆ ಒಪ್ಪಿಗೆ ಕೊಟ್ಟರೂ, ಆ ಕಿರಿದಾದ ಸುರಳಿಯಾಕಾರದ ಮೆಟ್ಟಿಲಿರುವುದರಿಂದ ನಿನಗೆ ಕತ್ತೆಯನ್ನು ಒಳಕ್ಕೆ ಕರೆದುಕೊಂಡು ಹೋಗುವುದಂತೂ ಸಾಧ್ಯವೇ ಇಲ್ಲ."

ಪೆಪಿನೋ ಹೇಳಿದ: "ಸ್ವಾಮಿ! ಆ ದಾರಿಯಲ್ಲದೇ ಅಲ್ಲಿಗೆ ಬೇರೊಂದು ದಾರಿಯಿದೆ. ಅಲ್ಲವೇ? ಆ ಹಳೇ ಚರ್ಚಿನ ಮೂಲಕವೂ ಹೋಗಬಹುದು. ಆ ಬಾಗಿಲನ್ನು ತೆಗೆಯದೇ ಇರುವುದರಿಂದ ಈಗ ಅದನ್ನು ತೆರೆಯುವುದು ಒಳ್ಳೆಯದಲ್ಲವೆ?"

ಸೂಪರ್‌ವೈಸರ್‌ಗೆ ಈ ಮಾತುಗಳನ್ನು ಕೇಳಿ ಕೋಪವೂ ಬಂತು: "ಆಂ! ನೀನು ಏನು ಮಾತನಾಡುತ್ತಿದ್ದೀಯಾ? ಚರ್ಚಿನ ಆಸ್ತಿಯನ್ನು ಹಾಳು ಮಾಡುವುದೆ! ಶತಮಾನಗಳ ಹಿಂದೆ ಕಟ್ಟಿರುವ ಗೋಡೆಯನ್ನು ಕೆಡವಿ ಸಮಾಧಿಯನ್ನು ಹಾಳು ಮಾಡುವುದೆ!"

ಈ ಮಾತುಗಳನ್ನು ಗಮನಿಸಿದ ಧರ್ಮಾಧಿಕಾರಿ ಪೆಪಿನೋನನ್ನು ಕರೆದು ಮೆಲುದನಿಯಲ್ಲಿ ಹೇಳಿದ: "ಮಗೂ, ನೀನೇಕೆ ಮನೆಯಲ್ಲೇ ಕುಳಿತು ಸಂತ ಫ್ರಾನ್ಸಿಸನನ್ನು ಪ್ರಾರ್ಥಿಸಿ ಅವನ ಕೃಪೆಯನ್ನು ಪಡೆಯಬಾರದು? ತುಂಬು ಹೃದಯದಿಂದ ಪ್ರಾರ್ಥಿಸಿದರೆ ದೇವರು ನಿನಗೆ ಸಹಾಯ ಮಾಡೇಮಾಡ್ತಾನೆ."

"ಮನೆಯಲ್ಲಿ ದೇವರನ್ನು ಪ್ರಾರ್ಥಿಸುವುದೂ ಸಂತರ ಸಮಾಧಿಯ ದರ್ಶನ ಪಡೆಯುವುದೂ ಒಂದೇ ಆಗಲು ಸಾಧ್ಯವಿಲ್ಲ," ಎನ್ನುತ್ತ ಪೆಪಿನೋ ಅಳತೊಡಗಿದ. "ನಾನಂತೂ ಅವಳನ್ನು ಸಂತರ ಸಮಾಧಿಗೆ ಕರೆದುಕೊಂಡೇ ಹೋಗುತ್ತೇನೆ. ಅವಳು ಇತರ ಮುದಿ ಕತ್ತೆಗಳಂತಲ್ಲ. ಕಾಯಿಲೆಯಿಂದ ಅವಳ ಕಿರುನಗೆಯೂ ಮಾಯವಾಗಿದೆ. ಸಂತ ಫ್ರಾನ್ಸಿಸರನ್ನು ನೋಡಿದರೆ ಮಾತ್ರ ಅವಳ ಮುಖ ಅರಳಬಹುದು. ಅವಳ ಸ್ಥಿತಿಯನ್ನು ನೋಡಿದರೆ ಅವರು ಅವಳ ಕಾಯಿಲೆಯನ್ನು ವಾಸಿ ಮಾಡುವುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ."

ಸೂಪರ್‌ವೈಸರ್‌ಗೆ ತಾನು ಮಾತನಾಡಿದ ರೀತಿ ಸರಿಯಾಗಲಿಲ್ಲ ಎಂಬ ಅರಿವು ಮೂಡಿತು. "ಮಗೂ, ನಾನೇನೂ ಮಾಡುವಂತಿಲ್ಲ. ದಯವಿಟ್ಟು ನನ್ನನ್ನು ಕ್ಷಮಿಸು. ಇಲ್ಲ ಎಂದೇ ಹೇಳಬೇಕಾಗಿದೆ," ಎಂದ.

ಪೆಪಿನೋ ನಿರಾಶೆಯಿಂದ ಹೊರಕ್ಕೆ ಹೊರಟ. ಕಣ್ಣಂಚಿನಿಂದ ಬಿಸಿ ನೀರು ಕೆಳಗಿಳಿಯಿತು. ತಾನು ಯಶಸ್ಸನ್ನು ಪಡೆಯಬೇಕಾದರೆ ಯಾರಿಂದಲೂ ಇಲ್ಲ ಎನ್ನುವ ಉತ್ತರ ಪಡೆಯಲೇಬಾರದು ಎಂದು ನಿರ್ಧರಿಸಿ ಮತ್ತೊಮ್ಮೆ ಪಾದ್ರಿ ಡೇಮಿಕೋನನ್ನು ಭೇಟಿಯಾದ. ನಡೆದದ್ದನ್ನೆಲ್ಲ ವಿಸ್ತಾರವಾಗಿಯೆ ವರ್ಣಿಸಿ, "ಧರ್ಮಾಧಿಕಾರಿ ಮತ್ತು ಸೂಪರ್‌ವೈಸರ್‌ಗಿಂತ ಯಾರಿಗೆ ಹೆಚ್ಚು ಅಧಿಕಾರವಿದೆ?" ಎಂದು ಕೇಳಿದ.

ಪೆಪಿನೋನ ಮಾತುಗಳನ್ನು ಕೇಳಿದಂತೆ ಪಾದ್ರಿ ಡೇಮಿಕೋಗೆ ಈ ಅಧಿಕಾರಿಗಳ ಆಡಳಿತಾತ್ಮಕ ಅವ್ಯವಸ್ಥೆಗಳು, ಮೇಲು ಕೀಳೆಂಬ ಮನೋಧರ್ಮ, ಕಲಹಗಳನ್ನು ಕೇಳಿ ಜಿಗುಪ್ಸೆ ಮೂಡಿತು. ತಮಗೆ ತಿಳಿದಿದ್ದನ್ನು ಹೇಳತೊಡಗಿದರು: "ಎಲ್ಲರಿಗಿಂತ ಉನ್ನತವಾದ ಸ್ಥಾನದಲ್ಲಿ ಸ್ವತಃ ಪೋಪರೇ ಇದ್ದಾರೆ. ನೀನು ನಿನ್ನ ಕಷ್ಟವನ್ನು ಅವರಲ್ಲಿ ಹೇಳಿಕೊಂಡರೆ ಅವರ ಮನ ಕರಗಬಹುದು. ಪೋಪ್ ಬಹಳ ಗಂಭೀರರಾದರೂ ಉದಾರ ಸ್ವಭಾವದವರು. ಅವರು ಯಾವಾಗಲೂ ಕರ್ತವ್ಯದಲ್ಲಿ ಮಗ್ನರಾಗಿರುತ್ತಾರೆ. ಒಂದು ವೇಳೆ ನೀನು ಅಲ್ಲಿಗೆ ಹೋದರೂ, ಅವರನ್ನು ಭೇಟಿ ಮಾಡುವುದು ಅಷ್ಟು ಸುಲಭವಲ್ಲ."

ಇಷ್ಟು ಕೇಳಿಸಿಕೊಂಡ ಪೆಪಿನೋ ಬಿಟ್ಟಬಾಣ ದಂತೆ ನಿಕೋಲೋನ ಲಾಯಕ್ಕೆ ಓಡಿದ. ವಯೋಲೆಟ್ಟಾಳ ಕುತ್ತಿಗೆಯನ್ನು ಬಳಸಿ, ನೀರು ಕುಡಿಸಿ ಆಹಾರವನ್ನು ಹಾಕಿ ಮಸಾಜು ಮಾಡಿದ. ಹಳೆಯ ಜಾಡಿಯಲ್ಲಿ ತಾನು ಕೂಡಿಟ್ಟ 300 ಲೀರಾಗಳಷ್ಟು ಹಣವನ್ನು ಮತ್ತೆ ಮತ್ತೆ ಎಣಿಸಿ ಖಚಿತಪಡಿಸಿಕೊಂಡ. ಅದರಲ್ಲಿ 100 ಲೀರಾ ಗಳಷ್ಟನ್ನು ಬೇರೆಯೇ ಇಟ್ಟು, ತಾನು ರೋಮ್‌ಗೆ ಹೋಗಬೇಕಾದರೆ ತನ್ನ ವಯೋಲೆ ಟ್ಟಾಳನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ನಿಕೋಲನಲ್ಲಿ ಪ್ರಾರ್ಥಿಸಿ, ಅವನಿಂದ ವಚನ ವನ್ನು ಪಡೆದ. ಬಳಿಕ ಅವಳ ಕಣ್ಣೀರನ್ನು ಒರೆಸಿ, ಎಷ್ಟೊಂದು ಕೃಶವಾಗಿದೆಯಲ್ಲಾ ಎಂದು ಕೊರ ಗುತ್ತಾ ಬಟ್ಟೆ ಧರಿಸಿ ಮುಖ್ಯ ರಸ್ತೆಗೆ ಬಂದ. ಓ ಹೋಲೋರಾನ್ ತಿಳಿಸಿದಂತೆ ಪೋಲಿಗ್ನೋ ಕಡೆಗೆ ಹೋಗುತ್ತಿದ್ದ ಲಾರಿಯನ್ನು ಹತ್ತಿದ. ನಂತರ ಪೋಪರನ್ನು ಭೇಟಿಮಾಡಲು ನಿರ್ಧರಿಸಿ ರೋಂನತ್ತ ಧಾವಿಸಿದ.

ಪೆಪಿನೋ ಎಂದೂ ಅಷ್ಟೊಂದು ಪೇಲವ ವಾಗಿ ಏಕಾಂಗಿಯಂತೆ ಪೀಟರ್ ವೃತ್ತದಲ್ಲಿ ನಿಂತಿ ರಲಿಲ್ಲ. ಅವನು ಕಂಡ ಪೀಟರ್ಸ್‌ಬರ್ಗ್ ಚರ್ಚಿನ ಗೋಪುರ, ಕ್ಯಾಲಿಗುಲಾ ದೇವಾಲ ಯದ ಗುಮ್ಮಟ, ಬೆರ್ನಿನಿಯ ಚರ್ಚಿನಲ್ಲಿ ಬೆಳೆದ ಸಾಲು ಸಾಲು ಮರಗಳು ರಾಕ್ಷಸ ರೂಪ ತಾಳಿ ಅವನ ಮೇಲೇರಿ ಬಂದಂತೆ ಭಾಸವಾಗಿದೆ. ಅವನ ಬರಿಗಾಲು, ಚಿಂದಿಯಾದ ಪ್ಯಾಂಟ್, ಶರ್ಟನ್ನು ನೋಡಿ ಅಣಕಿಸುವಂತಿದೆ. ಪೆಪಿನೋ ತನ್ನ ಜೀವಮಾನದಲ್ಲೇ ಅಷ್ಟೊಂದು ಹೆದರಿರ ಲಿಲ್ಲ. ಅಂದು ಮಾತ್ರ ಆದೇಕೋ ಅವನ ಹೃದಯದಲ್ಲಿ ಭೀತಿ ಮತ್ತು ಅಸಂತೃಪ್ತಿ ತುಂಬಿತ್ತು.

ಕೊನೆಗಂತೂ ರೋಂ ಪಟ್ಟಣವನ್ನು ತಲು ಪಿದ ಪೆಪಿನೋ. ಊರಿನ ಉದ್ದಗಲಕ್ಕೂ ಹಮ್ಮಿ ಕೊಂಡ ಪಟ್ಟಣ, ಕಟ್ಟಡಗಳು, ಹಳೆಗಾಲದ ಅರಸರ ನಿವಾಸಗಳು ಪೆಪಿನೋನ ಧೈರ್ಯ ವನ್ನು ಬುಡಸಹಿತ ಅಲ್ಲಾಡಿಸಿದವು. ತನ್ನ ಉದ್ದೇಶವೇ ವ್ಯರ್ಥವಾಯಿತಲ್ಲಾ! ಎಂದು ಪರಿ ತಪಿಸಿದ ಪೆಪಿನೋ. ಆದರೆ ಮರುಕ್ಷಣವೇ



ಕಾಯಿಲೆಯಿಂದ ತತ್ತರಿಸುತ್ತಿರುವ ಕಳಾಹೀನ ವಯೋಲೆಟ್ಟಾಳ ಚಿತ್ರ ಕಣ್ಣ ಮುಂದೆ ಬಂದು ನಿಂತಿತು. ದಾರುಣ ಸ್ಥಿತಿಯಲ್ಲಿ ಏದುಸಿರು ಬಿಡುತ್ತ ಕಣ್ಣೀರು ಸುರಿಸುತ್ತಿರುವ ಚಿತ್ರ ನೆನಪಿಗೆ ಬಂದಂತೆ ತಾನು ಎಷ್ಟು ಕಷ್ಟಪಟ್ಟಾದರೂ ವಯೋಲೆಟ್ಟಾಳನ್ನು ಉಳಿಸಿಕೊಳ್ಳಲೇಬೇಕೆಂದು ನಿರ್ಧರಿಸಿದ. ಈ ಯೋಚನೆ ಅವನನ್ನು ಕಿರಿದಾದ ಓಣಿಗಳನ್ನು ದಾಟಿ ವ್ಯಾಟಿಕನ್‌ಗೆ ಹೋಗಲು ಪ್ರೇರೇಪಿಸಿತು.

ವ್ಯಾಟಿಕನ್ನಿನ ಮುಖ್ಯ ದ್ವಾರದಲ್ಲೇ ಸಮವಸ್ತ್ರ ಧರಿಸಿದ, ನೋಡಿದರೆ ಯಾರಾದರೂ ಹೆದರುವಂತಹ ಅಜಾನುಬಾಹು ನಿಲುವಿನ ಕಾವಲುಗಾರ ನಿಂತಿದ್ದ. ಪೆಪಿನೋ ಸ್ವಲ್ಪವೂ ಅಳುಕದೆ ಅವನ ಕಿವಿಯಲ್ಲಿ ಹೇಳಹತ್ತಿದ: ''ನಾನು ಪೋಪರ ಹತ್ತಿರ ಮಾತನಾಡಬೇಕು. ದಯವಿಟ್ಟು ನನ್ನನ್ನು ಒಳಗೆ ಬಿಡುತ್ತೀಯಾ? ನನ್ನ ಪ್ರೀತಿಯ ಕತ್ತೆ ವಯೋಲೆಟ್ಟಾ ತೀವ್ರವಾದ ಕಾಯಿಲೆಯಿಂದ ನರಳುತ್ತಿದೆ. ಈ ಸಮಯದಲ್ಲಿ ಪೋಪ್ ಸಹಾಯ ಮಾಡದಿದ್ದರೆ ನನ್ನ ಕತ್ತೆ ಸತ್ತೇ ಹೋದೀತು.''

ಕಾವಲುಗಾರ ಪೆಪಿನೋನ ಮಾತುಗಳನ್ನು ಕೇಳಿ ಕಿರುನಗೆ ನಕ್ಕ. ಎಷ್ಟೋ ಬಾರಿ ಅವನು ಜನರ ಮೂರ್ಖತನದ್ದೆನ್ನಬಹುದಾದ ಅನೇಕ ಮುಗ್ಧ ಪ್ರಶ್ನೆಗಳನ್ನು ಕೇಳಿದ್ದಾನೆ. ಕೊಳಕಾದ ಚಿಂದಿ ಬಟ್ಟೆಯನ್ನುಟ್ಟ ಈ ಬಾಲಕನ ಪ್ರಶ್ನೆಗೆ ಅವನು ಕೋಪಗೊಳ್ಳಲೂ ಇಲ್ಲ. ಅವನ ದುಂಡುಮುಖ, ಹೂಜಿಯ ಹಿಡಿಕೆಯಂಥ ಕಿವಿಗಳು, ಆರ್ದ್ರ ಕಣ್ಣುಗಳು ಅವನಲ್ಲಿ ಸದಭಿಪ್ರಾಯವನ್ನು ಮೂಡಿಸಿದವು. ಕಾವಲುಗಾರ ಗಂಭೀರವಾಗಿ, ''ಪೋಪರು ಈಗ ಹೆಚ್ಚಿನ ಕೆಲಸದಲ್ಲಿ ನಿರತರಾಗಿರುವುದರಿಂದ, ನೀನು ಈಗ ಅವರನ್ನು ನೋಡಲು ಸಾಧ್ಯವಿಲ್ಲ,'' ಎಂದು ತನ್ನ ಈಟಿಯನ್ನು ನೆಲಕ್ಕೆ ಕುಕ್ಕಿ ಕಾವಲು ಕಾಯತೊಡಗಿದ.

'ಈ ಶಕ್ತಿಯ ಮುಂದೆ ತನ್ನ ಆದರ್ಶ ಭಾವನೆಗಳಿಗೆ ಬೆಲೆ ಎಲ್ಲಿ?' ಎಂದು ಪೆಪಿನೋ ಒಂದಕ್ಕೆ ಹೆಜ್ಜೆ ಹಾಕಿದ. ತನ್ನ ಸ್ನೇಹಿತ ಓ ಹೋಲೋರಾನನ್ನು ನೆನೆಸಿಕೊಂಡು ತನ್ನ ಕೆಲಸ ಈಡೇರುವವರೆಗೂ ವ್ಯಾಟಿಕನ್ನಿನಲ್ಲೇ ಉಳಿಯಲು ನಿರ್ಧರಿಸಿದ.

ಮುಖ್ಯ ವೃತ್ತದ ಒಂದು ಭಾಗದಲ್ಲಿ ಮುದುಕಿಯೊಬ್ಬಳು ಛತ್ರಿಯ ನೆರಳಿನಲ್ಲಿ ಹೂಗೊಂಚಲುಗಳನ್ನು ಮಾರುತ್ತಿರುವುದನ್ನು ಪೆಪಿನೋ ನೋಡಿದ. ಸಣ್ಣ ಗೊಂಚಲುಗಳಲ್ಲದೆ ಡ್ಯಾಫೊಡಿಲ್ಸ್, ನಾರ್ಸಿಸಸ್ ಮತ್ತು ಅನೇಕ ಬಗೆಯ ಹೂಗಳನ್ನು ಆಕೆ ಮಾರುತ್ತಿದ್ದಳು. ಸಂತ ಪೀಟರನ ಸಮಾಧಿಗೆ ಭೇಟಿ ನೀಡುವವರೆಲ್ಲಾ ಸಂತನಿಗೆ ಇಷ್ಟವಾದ ಹೂಗೊಂಚಲನ್ನು ಕೊಂಡು ವೇದಿಕೆಯ ಮೇಲಿಟ್ಟು ಪ್ರಾರ್ಥಿಸಲು ಬಯಸುತ್ತಿದ್ದರು. ಆಗಿನ್ನೂ ಹೂಗಳು ತೋಟದಿಂದ ಬಂದಿದ್ದರಿಂದ ನಗುತ್ತಿದ್ದವು. ಹೂಗಳ ದಳದ ಮೇಲಿದ್ದ ಹಿಮದ ಹನಿಗಳು ಮಣಿಯಂತೆ ಹೊಳೆಯುತ್ತಿದ್ದವು.

ಈ ದೃಶ್ಯವನ್ನು ಪೆಪಿನೋ ನೋಡುತ್ತಿದ್ದಂತೆ ಪಾದ್ರಿ ಡೇಮಿಕೋ ಕಾವ್ಯಮಯವಾಗಿ ಹೇಳುತ್ತಿದ್ದ ಕಥೆಗಳ ನೆನಪಾಯಿತು. ಒಮ್ಮೆ ಸಂತ ಫ್ರಾನ್ಸಿಸ ಹೂಗಳ ಕುರಿತು ಹೇಳಿದ್ದ ಮಾತುಗಳನ್ನು ನೆನಪಿಸಿಕೊಂಡ. ಪೆಪಿನೋ, ಸಂತ ಫ್ರಾನ್ಸಿಸ ಹೂಗೊಂಚಲನ್ನು ಇಷ್ಟಪಟ್ಟಂತೆ, ಪೋಪರೂ ಇಷ್ಟಪಡಬಹುದೆಂದು ಭಾವಿಸಿ 50 ಲೀರೆಗಳನ್ನು ಕೊಟ್ಟು ಒಂದು ಸಣ್ಣ ಹೂಗೊಂಚಲನ್ನು ಕೊಂಡ. ಹೂಗಳನ್ನು ಮಾರುವವಳು ಅದರಲ್ಲಿ ಗುಲಾಬಿ ಮತ್ತು ವಯೋಲೆಟ್ ಹೂಗಳನ್ನಿಟ್ಟು ಅನೇಕ ಎಲೆಗಳಿಂದ ಸಿಂಗರಿಸಿ, ಬಿಳಿಯ ಲೇಸಿನಿಂದ ಕಟ್ಟಿ ಕೊಟ್ಟಿದ್ದಳು. ಹತ್ತಿರದಲ್ಲೇ ಅಂಚೆ ಸಾಮಗ್ರಿಗಳನ್ನು ಮಾರುವ ಅಂಗಡಿಯನ್ನು ನೋಡಿದ. ಅವರಿಂದ ಒಂದು ಚೂರು ಕಾಗದ ಮತ್ತು ಒಂದು ತುಂಡು ಪೆನ್ಸಿಲ್ ಪಡೆದು ಪೋಪರಿಗೆ ಒಂದು ಕಾಗದವನ್ನು ಬರೆದ:

''ನಮ್ಮೆಲ್ಲರ ಪ್ರೀತಿಪಾತ್ರರಾದ ತಂದೆಯೆ,



"ಈ ಸೀರೆ ಎಲ್ಲಿ ಕೊಂಡುಕೊಂಡ್ರಿ, ವನಜಮ್ಮಾ? ಏಳು ವರ್ಷಗಳಿಂದ ನೋಡ್ತಾ ಇದ್ದೀನಿ - ಇನ್ನೂ ಹಾಗೇ ಇದೆ."

ಇವೆಲ್ಲವನ್ನೂ ನಿಮಗೆ ಅರ್ಪಿಸುತ್ತಿದ್ದೇನೆ. ದಯವಿಟ್ಟು ನೀವು ಸಾಯುತ್ತಿರುವ ನನ್ನ ವಯೋಲೆಟ್ಟಾಳನ್ನು ಬದುಕಿಸಿಕೊಡುತ್ತೀರೆಂದು ನಂಬಿದ್ದೇನೆ. ಅವಳ ಕಾಯಿಲೆಯನ್ನು ವಾಸಿ ಮಾಡುವುದಕ್ಕೋಸ್ಕರ ಸಂತ ಫ್ರಾನ್ಸಿಸರ ಸಮಾಧಿಗೆ ಕರೆದುಕೊಂಡು ಹೋಗುವ ಪ್ರಯತ್ನ ಮಾಡಿದೆ. ಆದರೆ ನನ್ನನ್ನೂ, ನನ್ನ ಕತ್ತೆಯನ್ನೂ ಅವರು ಒಳಗೆ ಬಿಡುತ್ತಿಲ್ಲ. ನಾನು ಅಸಿಸಿ ಪಟ್ಟಣದಲ್ಲಿ ವಾಸವಾಗಿದ್ದು ಅಲ್ಲಿಂದ ನಿಮ್ಮನ್ನು ನೋಡಲು ಬಂದಿರುತ್ತೇನೆ.

ಇಂತಿ ನಿಮ್ಮ ಪ್ರೀತಿಯ
ಪೆಪಿನೋ."

ಮರುಕ್ಷಣವೇ ಬಾಗಿಲಿನ ಹತ್ತಿರ ಬಂದು ಕಾವಲುಗಾರನಿಗೆ ಹೂಗೊಂಚಲು ಮತ್ತು ಕಾಗದವನ್ನು ಕೊಟ್ಟು, "ದಯವಿಟ್ಟು ಇದನ್ನು ಪೋಪರಿಗೆ ಕೊಡಿ. ಅವರು ಹೂಗೊಂಚಲನ್ನು ಸ್ವೀಕರಿಸಿ ಕಾಗದ ಓದಿದ ತಕ್ಷಣವೇ ನನ್ನನ್ನು ಒಳಗೆ ಕರೆಯುತ್ತಾರೆ," ಎಂದ.

ಪುಟ್ಟ ಬಾಲಕನಿಂದ ಈ ರೀತಿಯ ನಡವಳಿಕೆಯನ್ನು ಕಾವಲುಗಾರ ನಿರೀಕ್ಷಿಸಿರಲಿಲ್ಲ. ಪೆಪಿನೋ ಕೊಟ್ಟ ಹೂಗೊಂಚಲು ಮತ್ತು ಕಾಗದ ಅವನನ್ನು ಇಕ್ಕಟ್ಟಿಗೆ ಸಿಲುಕಿಸಿತು. ಅವನು ಬೇಡಿಕೆಯನ್ನು ನಿರಾಕರಿಸಲಾಗದೇ ಪೆಪಿನೋನ ದೊಡ್ಡ ಕಣ್ಣುಗಳನ್ನೇ ನೋಡಿದ. ಹಿಂದೆ ಎಷ್ಟೋ ಬಾರಿ ಇಂಥ ಪ್ರಸಂಗಗಳನ್ನು ಎದುರಿಸಿದ್ದಾನೆ. ತಾನು ಕರ್ತವ್ಯದಲ್ಲಿ ನಿರತನಾಗಿದ್ದಾಗ ಯಾರಾದರೂ ಹೂಗೊಂಚಲನ್ನು ಪೋಪರಿಗೆ ಕೊಡಲು ತಂದರೆ ಅದನ್ನು ಒಳಗೆ ಇದ್ದ ಕಸದ ಬುಟ್ಟಿಗೆ ಎಸೆದು, ಪೋಪರು ಹೂಗೊಂಚಲನ್ನು ಸ್ವೀಕರಿಸಿದರೆಂದೂ, ಆದರೆ ಈಗ ತಮ್ಮ ಕೆಲಸದಲ್ಲಿ ಮಗ್ನರಾಗಿರುವುದರಿಂದ ಸದ್ಯಕ್ಕೆ ಅವರಿಗೆ ಯಾರನ್ನೂ ನೋಡಲು ಸಮಯವಿಲ್ಲವೆಂದೂ ಹೇಳಿ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಿದ್ದ.

ಪ್ರತಿ ಸಲದಂತೆ ಈ ಸಲವೂ ಅದೇ ರೀತಿಯಲ್ಲಿ ಕಾವಲುಗಾರ ಹೂಗೊಂಚಲು ಮತ್ತು ಕಾಗದವನ್ನು ತೆಗೆದುಕೊಂಡು ಒಳಗೆ ಹೋದ. ಹೂಗೊಂಚಲು ಮತ್ತು ಕಾಗದ ಎರಡೂ ಅವನ ಕೈಗೆ ಅಂಟಿನಂತೆ ಮೆತ್ತಿದೆ! ಕಸದ ಬುಟ್ಟಿ ದೊಡ್ಡದಾಗಿ ಬಾಯ್ದೆರೆದುಕೊಂಡಿದ್ದರೂ, ಅಂದು ಹೂ ಮತ್ತು ಕಾಗದವನ್ನು ಎಸೆಯಲು ಅವನಿಗೆ ಸಾಧ್ಯವಾಗಲಿಲ್ಲ. ವಸಂತ ಮಾಸದ ಹೂವಾದುದರಿಂದ, ಹೆಚ್ಚಿನ ಪರಿಮಳವನ್ನು ಬೀರುತ್ತಿದೆ. ತಾನು ಯೌವನದಲ್ಲಿ ಕಳೆದಂತಹ ದಿನಗಳನ್ನು ನೆನಪಿಸುತ್ತಿವೆ. ಹಿಮತುಂಬಿದ ಕಣಿವೆಯಲ್ಲಿ ಓಡಾಡುವಾಗ, ಅಲ್ಲೊಂದು ಇಲ್ಲೊಂದು ಮನೆಗಳನ್ನು ಕಾಣುತ್ತಿದ್ದಾನೆ. ಬೆಳಗಿನ ಜಾವದಲ್ಲಿ ಕುರಿ, ಮೇಕೆಗಳ ಹಿಂಡು, ತಮ್ಮ ಕೊರಳ ಗಂಟೆಯಿಂದ ಹೊರಡಿಸುತ್ತಿರುವ ನಾದದ ಚಿತ್ರವೂ ಅವನ ಕಣ್ಣು ಮುಂದೆ ಬಂದು ನಿಂತಿದೆ. ಕಾವಲುಗಾರನಿಗೆ ಏನು ಮಾಡಬೇಕೆಂದೇ ತೋಚಲಿಲ್ಲ. ಮೊಗಸಾಲೆಯಲ್ಲಿಲ್ಲಿ ನಿಂತು ಶತಪಥ ಹಾಕತೊಡಗಿದ. ವ್ಯಾಟಿಕನ್ ಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಅಧಿಕಾರಿ, ಕಾವಲುಗಾರ ಮತ್ತು ಕಾರ್ಯದರ್ಶಿಯ ಸಹಕಾರದಿಂದ ಪೆಪಿನೋನ ಹೂಗೊಂಚಲು ಮತ್ತು ಕಾಗದ ಪೋಪರನ್ನು ಸೇರಿತು.

ಪೆಪಿನೋನ ಬೇಡಿಕೆ ಆಶ್ಚರ್ಯಕರವಾದ ಬೆಳವಣಿಗೆಯನ್ನು ಪಡೆದು, ಇಹಲೋಕದ ಅರ ಮನೆಯನ್ನು ದಾಟಿ ಆಧ್ಯಾತ್ಮಿಕವಾದ ಪ್ರಪಂಚ ವನ್ನು ಸೇರಿತು. ಮೊದಲು ಚರ್ಚಿನ ಗುಮಾಸ್ತೆ ಯಿಂದ ಧರ್ಮಾಧಿಕಾರಿಯನ್ನು ತಲುಪಿ, ನಂತರ ಪಾರುಪತ್ಯಗಾರರನ್ನು ಸೇರಿತು. ಅಲ್ಲಿಂದ ಕೋಶಾಧಿಕಾರಿಯೆಡೆಗೆ ಬರುವಷ್ಟರಲ್ಲಿ ಅದರ ಮೇಲಿನ ಹಿಮದ ಮಣಿಗಳೆಲ್ಲಾ ಮಾಯವಾಗಿ ಹೂಗೊಂಚಲು ತನ್ನ ಹೊಸತನವನ್ನು ಕಳೆದು ಕೊಂಡಿತ್ತು. ಪ್ರೀತಿ ವಿಶ್ವಾಸಗಳ ಕುರುಹಾದುದ ರಿಂದ ಯಾರೂ ಅದನ್ನು ಎಸೆಯಲಿಲ್ಲ.

ಪೋಪರು ಟೇಬಲ್ಲಿಗೆ ಬಂದು ಹೂಗೊಂ ಚಲು ಮತ್ತು ಕಾಗದವನ್ನು ನೋಡಿದವರೆ, ತಾವು ಒಂದು ಕ್ಷಣ ಕಣ್ಣು ಮುಚ್ಚಿ ತಮ್ಮ ಬಾಲ್ಯದ ದಿನಗಳನ್ನು ನೆನಪಿಸಿಕೊಂಡರು. ತಾವು ರೋಂ ಪಟ್ಟಣದಲ್ಲಿದ್ದಾಗ ಒಂದು ಭಾನುವಾರ ಆಲ್ಬನ್ ಬೆಟ್ಟವನ್ನು ಸುತ್ತಿದ್ದೆಲ್ಲಾ ನೆನಪಿಗೆ ಬಂತು. ಅವರ ಮುಂದೆ ಇದ್ದ ಹೂ ಗೊಂಚಲು ಇನ್ನಷ್ಟು ಶೋಭೆಯನ್ನು ಪಡೆದಿತ್ತು.

ತಕ್ಷಣ, ''ಮಗುವನ್ನು ಒಳಗೆ ಕರೆಯಿರಿ, ನಾನು ಅವನನ್ನು ನೋಡುತ್ತೇನೆ,'' ಎಂದು ತಮ್ಮ ಕಾರ್ಯದರ್ಶಿಗೆ ಆದೇಶ ನೀಡಿದರು.

ಕೊನೆಗಂತೂ ಪೆಪಿನೋ ಪೋಪರ ಹತ್ತಿರ ಬಂದ. ಅವರು ಡೆಸ್ಕಿನ ಪಕ್ಕದ ದೊಡ್ಡ ಕುರ್ಚಿ ಯಲ್ಲಿ ಕುಳಿತಿದ್ದರು.ತಾನು ಅದರ ಪಕ್ಕದಲ್ಲೇ ಇದ್ದ ಕುರ್ಚಿಯಲ್ಲಿ ಕುಳಿತು ವಯೋಲೆಟ್ಟಾಳ ಕತೆಯನ್ನು ಸವಿಸ್ತಾರವಾಗಿ ವರ್ಣಿಸಿದ. ತಾನು ವಯೋಲೆಟ್ಟಾಳನ್ನು ಸಮಾಧಿಗೆ ಕರೆದುಕೊಂಡು ಹೋಗಲು ಪ್ರಯತ್ನಿಸಿದ್ದು, ಅದನ್ನು ಸೂಪರ್ ವೈಸರ್ ತಡೆದದ್ದು, ಪಾದ್ರಿ ಡೇಮಿಕೋ ತನಗೆ ಗೊತ್ತಿಲ್ಲದ ಆ ಎರಡನೆಯ ದಾರಿಯ ವಿವರ ಹೇಳಿದ್ದು. ವಯೋಲೆಟ್ಟಾಳ ನಗೆ, ಇನ್ನಿತರ ವಿಷಯಗಳು ಅವನ ಹೃದಯಾಂತರಾಳದಿಂದ ಹೊರಹೊಮ್ಮುವಷ್ಟು ಪೆಪಿನೋ ಹೇಳುತ್ತಿದ್ದುದ ನ್ನೆಲ್ಲಾ ಹೆಚ್ಚಿನ ಆಸಕ್ತಿಯಿಂದ ಆಲಿಸಿದರು ಪೋಪ್.

ಅರ್ಧ ಗಂಟೆ ಕಳೆದ ನಂತರ ಹೊರಬಂದ ಪೆಪಿನೋ. ತನ್ನಷ್ಟು ಅದೃಷ್ಟವಂತ ಈ ಪ್ರಪಂಚ ದಲ್ಲೇ ಬೇರೆ ಯಾರೂ ಇಲ್ಲ ಎಂದು ಹೆಮ್ಮೆ ಯಿಂದ ಬೀಗಿದ. ಪೋಪರ ಆಶೀರ್ವಾದವನ್ನು ಪಡೆಯುವುದೆಂದರೆ ಸಾಮಾನ್ಯವೆ? ಅವನ ಶರ್ಟಿನ ಜೇಬಿನಲ್ಲಿ ಎರಡು ದಪ್ಪ ಲಕೋಟೆ ಗಳಿವೆ. ಅದರಲ್ಲಿ ಒಂದು ಸೂಪರ್‌ವೈಸರ್‌ಗೂ, ಇನ್ನೊಂದನ್ನು ಪಾದ್ರಿ ಡೇಮಿಕೋಗೂ ಬರೆದು ಕೊಟ್ಟಿದ್ದಾರೆ. ಮುಖ್ಯವೃತ್ತಕ್ಕೆ ಬಂದಾಗ ಕಾವ ಲುಗಾರ ಮೂಗಿನ ಮೇಲೆ ಬೆರಳಿಟ್ಟು ಆಶ್ಚರ್ಯ ವ್ಯಕ್ತಪಡಿಸಿದ. ಈಗ ಅವನಲ್ಲಿದ್ದ ಭಯ ದೂರ ವಾಗಿದೆ. ವಯೋಲೆಟ್ಟಾಳ ಪಕ್ಕದಲ್ಲಿ ಕುಳಿತು ಅದರ ಬೆನ್ನನ್ನು ನೇವರಿಸುತ್ತಿದ್ದಂತೆ ಕನಸು ಕಂಡ. ಅಸಿಸಿಗೆ ವಾಪಸ್ಸು ಬರುವ ಬಗ್ಗೆ ವಿನಂತಿ ಯನ್ನು ಪಡೆದು, ಅದರಂತೆ ಮಯಾ ಪ್ಲಾಮಿನಿ ಯಾದವರೆಗೂ ಬಸ್ಸಿನಲ್ಲಿ ಪ್ರಯಾಣ ಮಾಡಿ ಮರುದಿನ ಕತ್ತಲಾಗುವುದರೊಳಗೆ ಅಸಿಸಿ ಪಟ್ಟ ಣವನ್ನು ಸೇರಿದ.

ತಕ್ಷಣವೇ ವಯೋಲೆಟ್ಟಾಳನ್ನು ನೋಡಲು ಸೀದಾ ನಿಕೋಲೋನ ಲಾಯಕ್ಕೆ ಓಡಿದ. ಗಿಯುನಿ ಚೆನ್ನಾಗೇ ನೋಡಿಕೊಂಡಿದ್ದರಿಂದ, ಅದು ಮುಂಚೆ ಇದ್ದ ಸ್ಥಿತಿಯಲ್ಲೇ ಇತ್ತು. ಪೆಪಿನೋ ಹೆಮ್ಮೆಯಿಂದ ಬೀಗುತ್ತಾ ಪೋಪರು ಕೊಟ್ಟ ಕವರನ್ನು ಪಾದ್ರಿ ಡೇಮಿಕೋಗೆ ಕೊಟ್ಟ.

ಪಾದ್ರಿ ಡೇಮಿಕೋ ಸಂತೋಷದಿಂದ ಕಾಗದ ವನ್ನು ಓದಿದರು. ''ನಾವು ನಾಳೆ ಈ ವಿಷಯದ ಬಗೆಗೆ ಸೂಪರ್‌ವೈಸರನ್ನು ಭೇಟಿ ಮಾಡೋಣ. ಅವರು ಗಾರೆಯುವರನ್ನು ಕರೆಸಿ ಹಳೆಯ ಹಿಂಬಾ ಗಿಲನ್ನು ಒಡೆಸಲು ಏರ್ಪಾಡು ಮಾಡುತ್ತಾರೆ. ಆಗ ನಿನಗೆ ವಯೋಲೆಟ್ಟಾಳನ್ನು ಸಮಾಧಿಗೆ ಕರೆದುಕೊಂಡು ಹೋಗಲು ಸಾಧ್ಯವಾಗುತ್ತದೆ. ಸ್ವತಃ ಪೋಪರೇ ಒಪ್ಪಿಗೆಯನ್ನು ಕೊಟ್ಟಿರುತ್ತಾ- ರೆ'' ಎಂದ.

ಸ್ವತಃ ಪೋಪರೇ ಆ ಕಾಗದಗಳನ್ನು ಬರೆದಿರ ಲಿಲ್ಲ. ಅವರ ಇಚ್ಛೆಯಂತೆ ಅವರ ಕಾರ್ಯದರ್ಶಿ ಬರೆದ ಕಾಗದಕ್ಕೆ ಚರ್ಚಿನ ಮುಖ್ಯಾಧಿಕಾರಿಗಳು




''ಜೀವನದಲ್ಲಿ ಗಾಂಧೀಜಿಯ ಒಂದು ತತ್ವಾನ್ನಾದರೂ ಪಾಲಿಸಬೇಕು ಅಂತ ನೀವೇ ಹೇಳ್ತಿದ್ರಲ್ಲಾ ತಾತಾ ... ಅದಕ್ಕೇ ಗಾಂಧಿ ಕ್ಲಾಸಿನಲ್ಲಿ ಪಾಸಾಗಿರೋದು ನಾನು.''

ಸಹಿ ಮಾಡಿದ್ದರು. ಪಾದ್ರಿ ಡೇಮಿಕೋಗೆ ಬರೆದ ಕಾಗದ ಈ ರೀತಿಯಾಗಿತ್ತು:

''ಈ ವಿಷಯ ಬಹುಶಃ ಸೂಪರ್‌ವೈಸರ್‌ಗೂ ಗೊತ್ತಿರಬೇಕು. ತಮ್ಮ ಜೀವಿತ ಕಾಲದಲ್ಲಿ ಸಂತ ಫ್ರಾನ್ಸಿಸರು ಅಸಿಸಿಯಿಂದ ಹಿಂಬಾಲಿಸಿದ ತಮ್ಮ ಕುರಿಮರಿಯನ್ನು ಒಳಗೆ ಕರೆದುಕೊಂಡು ಹೋಗಿದ್ದರು. ಅವನ ಚಂದಿ ಬಟ್ಟೆ, ಹಾಗೂ ಅಗಲವಾದ ಕಿವಿಯನ್ನು ನೋಡಿ ಮೂರ್ಖ ಎಂದು ತಿಳಿಯುವುದು ತಪ್ಪಾಗುತ್ತದೆ.''

ಇದಲ್ಲದೇ ಪೋಪರು ಪೆಪಿನೋಗೆ ಹೊರಡುವ ಮುನ್ನ ಇನ್ನೊಂದು ವಿಷಯವನ್ನು ಹೇಳಿದ್ದರು. ಅದನ್ನು ಕಾಗದದಲ್ಲೂ ಬರೆದಿದ್ದರು.

''ಪೆಪಿನೋ, ನೀನು ಚರ್ಚಿಗೆ ಹೋಗುವ ಮೊದಲು ಒಂದು ವಿಷಯದ ಬಗ್ಗೆ ಚೆನ್ನಾಗಿ ಯೋಚಿಸು. ನಿನಗೆ ಸಂತನಲ್ಲಿ ಅಪಾರವಾದ ಭಕ್ತಿ ಮತ್ತು ನಂಬಿಕೆ ಇದೆ. ನಿನ್ನ ವಯೋಲೆಟ್ಟಾ ಸಂತರ ಆಶೀರ್ವಾದದಿಂದ ಗುಣ ಹೊಂದಲೂ ಬಹುದು. ಜಗತ್ತಿನ ಎಲ್ಲಾ ಪ್ರಾಣಿ ಪಕ್ಷಿಗಳನ್ನು ಪ್ರೀತಿಸುವ ಸಂತರು ವಯೋಲೆಟ್ಟಾಳನ್ನು ಯಾವಾಗಲೂ ತಮ್ಮ ಬಳಿಯಲ್ಲೇ ಉಳಿಸಿಕೊಳ್ಳಲು ಇಷ್ಟಪಟ್ಟರೆ ನೀನು ಏನು ಮಾಡುತ್ತಿಯಾ?'' ಎಂದು ಕೇಳಿದ್ದರು ಪೋಪರು.

ಪೋಪರ ಪತ್ರವನ್ನು ಓದಿದ ಪಾದ್ರಿ ಡೇಮಿಕೋ. ಕೇಳುತ್ತಿದ್ದಂತೆಯೆ ಪೆಪಿನೋನ ಮೈಯಲ್ಲಿ ನಡುಕ ಹುಟ್ಟಿತು. ತಡವರಿಸುತ್ತಾ,

''ತಂದೆಯೇ ನಾನು ಈ ದಿಕ್ಕಿನಲ್ಲಿ ಯೋಚಿಸಿಯೇ ಇಲ್ಲ,'' ಎಂದ.

ಪಾದ್ರಿ ಮತ್ತೆ ಮಾತನ್ನು ಮುಂದುವರೆಸಿದ: ''ಪೆಪಿನೋ, ನೀನು ಅಲ್ಲಿಗೆ ಹೋಗಿ ಅದರ ಆರೋಗ್ಯವನ್ನು ಬಯಸುವಂತೆ, ಅದನ್ನು ಬಿಟ್ಟು ಕೊಡುವುದಕ್ಕೆ ತಯಾರಾಗಿದ್ದೀಯಾ?''

ಪೆಪಿನೋಗೆ ತನ್ನೆಲ್ಲಾ ಶಕ್ತಿಯನ್ನು ಒಗ್ಗೂಡಿಸಿಕೊಂಡು, 'ವಯೋಲೆಟ್ಟಾಳನ್ನು ಬಿಟ್ಟುಕೊಡಲು ಸಿದ್ಧನಿಲ್ಲ' ಎಂದು ಕಿರುಚುವಂತಾಯಿತು. ಸಂತ ಫ್ರಾನ್ಸಿಸ ಕೇಳಿದರೂ ಬಿಟ್ಟುಕೊಡಲು ತಯಾರಿಲ್ಲ. ತನ್ನ ದುಃಖ ಹತ್ತಿಕ್ಕುವ ಪ್ರಯತ್ನ ಮಾಡಿ, ಪಾದ್ರಿಯ ಹೊಳೆಯುತ್ತಿದ್ದ ಕಣ್ಣುಗಳನ್ನೇ, ದೃಷ್ಟಿಸುತ್ತಾ ಪಿಸುಗುಟ್ಟಿದ, ''ಬಿಟ್ಟುಕೊಡಲೇಬೇಕೆಂದು ಸಂತರ ಅಪೇಕ್ಷೆಯಾದರೆ ಬಿಟ್ಟುಕೊಡುತ್ತೇನೆ. ಆದರೆ ನಾನು ವಯೋಲೆಟ್ಟಾಳೊಡನೆ ಇನ್ನೂ ಕೆಲವು ದಿನ ಇರಲು ಆಶಿಸುತ್ತೇನೆ.''

ಆ ಸಮಯಕ್ಕೆ ಸರಿಯಾಗಿ ಗಾರೆ ಕೆಲಸದವರ ಗುದ್ದಲಿ ಪಿಕಾಸಿಯ ಹೊಡೆತದ ಸದ್ದು ಎಲ್ಲರ ಕಿವಿಯ ಮೇಲೂ ಬೀಳತೊಡಗಿತು. ಅವರು ಶತಮಾನಗಳ ಹಿಂದಿನ ಗೋಡೆಯನ್ನು ಕೆಡವಿ ದಾರಿ ಮಾಡುತ್ತಿದ್ದಾರೆ. ಅಲ್ಲೇ ಸೂಪರ್‌ವೈಸರ್ ಮತ್ತು ಧರ್ಮಾಧಿಕಾರಿಗಳು ನಿಂತಿದ್ದಾರೆ. ಪಾದ್ರಿ, ಡೇಮಿಕೋ ಸ್ವಲ್ಪ ದೂರದಲ್ಲಿ ನಿಂತಿದ್ದಾನೆ. ಪೆಪಿನೋ ಕಳಾಹೀನನಾಗಿ, ಕಣ್ಣು ಬಾಯಿಗಳನ್ನು ದೊಡ್ಡದಾಗಿ ಬಿಟ್ಟು, ನಡೆಯು

ತ್ತಿರುವ ಕೆಲಸವನ್ನೇ ವೀಕ್ಷಿಸುತ್ತಿದ್ದಾನೆ. ಅವನ ಕೈಯರಡೂ ವಯೋಲೆಟ್ಟಾಳ ಕುತ್ತಿಗೆಯನ್ನು ಬಳಸಿವೆ. ಆದರೆ ಅವಳಿಗೆ ತನ್ನ ಕಾಲಿನ ಮೇಲೂ ನಿಲ್ಲುವುದೇ ಕಷ್ಟವಾಗಿದೆ.

ಸೂಪರ್‌ವೈಸರ್ ಕೆಳಗೆ ಬೀಳುತ್ತಿರುವ ಇಟ್ಟಿಗೆ ಮತ್ತು ಗಾರೆಯ ಚೂರುಗಳನ್ನು ನಿರಾಸಕ್ತಿಯಿಂದ ನೋಡುತ್ತಿದ್ದಾನೆ. ಗೋಡೆಯನ್ನು ಬಡೆದಂತೆ ಕಿರಿದಾಗಿದ್ದ ದಾರಿ ಅಗಲವಾಗಿದೆ. ಗಾಳಿಯಲ್ಲಿ ಧೂಳು ಸೇರಿಕೊಂಡು ಮೋಡದಂತೆ ತೇಲುತ್ತಿದೆ. ಅವನ ಮಟ್ಟಿಗೆ ಕೆಲ ದೌರ್ಬಲ್ಯಗಳನ್ನು ಬಿಟ್ಟರೆ ಸೂಪರ್‌ವೈಸರ್ ಕೂಡ ಒಳ್ಳೆಯ ಮನುಷ್ಯನೇ. ಮೇಲಿಂದ ಬಂದ ಆಜ್ಞೆಯನ್ನು ಪಾಲಿಸಲೇಬೇಕಾಗಿರುವುದರಿಂದ, ಧರ್ಮಾಧಿಕಾರಿಯನ್ನು ಜೊತೆಯಲ್ಲಿ ಕರೆದುಕೊಂಡು ಕೆಲಸವನ್ನು ಮಾಡಿಸುತ್ತಿದ್ದಾನೆ.

ಆದರೆ ಗೋಡೆಯ ಒಂದು ಭಾಗ ಯಾವ ಹೊಡೆತಕ್ಕೂ ಬಗ್ಗಲಿಲ್ಲ. ಗಾರೆಯುವನು ತನ್ನ ಶಕ್ತಿಯನ್ನೆಲ್ಲಾ ವ್ಯಯಿಸಿ ಕಮಾನಿನಾಕಾರದ ಬಾಗಿಲಿನ ಪಕ್ಕದಲ್ಲಿ ದಾಳಿಯನ್ನು ಮುಂದುವರಿಸಿದ. ಆ ಹೊಡೆತಕ್ಕೆ ಗೋಡೆ ಅಲುಗಾಡಲು ಪ್ರಾರಂಭಿಸಿತು. ಕಿರಿದಾಗಿದ್ದ ದಾರಿ ಅಗಲವಾಯಿತು. ಈಗ ಸಂತ ಫ್ರಾನ್ಸಿಸರ ಸಮಾಧಿಯನ್ನೂ ಪಕ್ಕದಲ್ಲಿ ಉರಿಯುವ ಮೋಂಬತ್ತಿಯನ್ನೂ ಕಾಣಬಹುದಾಗಿತ್ತು.

ಗಲಾಟೆಯ ವಾತಾವರಣಕ್ಕೆ ಹೊಂದಿಕೊಳ್ಳಲು ವಯೋಲೆಟ್ಟಾಳಿಗೆ ಸಾಧ್ಯವಾಗಲಿಲ್ಲ. ಪೆಪಿನೋ ವಯೋಲೆಟ್ಟಾಳೊಂದಿಗೆ ಆ ದಾರಿಯಲ್ಲಿ ಹೋಗಲು ಪ್ರಯತ್ನಿಸಿದ. ಪಾದ್ರಿ ಡೇಮಿಕೋ ಪೆಪಿನೋನನ್ನು ನೋಡಿದವನೆ, "ಅಲ್ಲೇ ನಿಲ್ಲು." ಎಂದು ಕೂಗಿದ. ಅದರಂತೆ ಪೆಪಿನೋ ಕತ್ತೆಯೊಂದಿಗೆ ಅಲ್ಲೇ ನಿಂತ. ಆದರೆ ವಯೋಲೆಟ್ಟಾಳ ಕಾಲುಗಳನ್ನು ಗಾರೆಯ ಚೂರುಗಳ ಮೇಲಿಟ್ಟಿದುದರಿಂದ, ಮರುಕ್ಷಣವೇ ಗೋಡೆಯ ಇಟ್ಟಿಗೆಗಳು ಉರುಳಿ ಗೋಡೆ ಸಡಿಲಗೊಂಡಿತು.

ಪಾದ್ರಿ ಡೇಮಿಕೋ ಮಿಂಚಿನಂತೆ ಹಾರಿ ಪೆಪಿನೋ ಮತ್ತು ವಯೋಲೆಟ್ಟಾಳನ್ನು ಗೋಡೆ ಕುಸಿಯುವ ಮೊದಲೇ ಪಕ್ಕಕ್ಕೆ ಎಳೆದು ತಂದು ನಿಲ್ಲಿಸಿದ. ಧೂಳೆಲ್ಲಾ ಕಡಿಮೆಯಾದ ಮೇಲೆ ಧರ್ಮಾಧಿಕಾರಿಯ ಕಣ್ಣಿಗೆ ಒಂದು ಸಣ್ಣದಾದ ಹಳೆಯ ಸತುವಿನ ಪೆಟ್ಟಿಗೆ ಕಣ್ಣಿಗೆ ಕಾಣಿಸಿತು. ಅದರ ಮೇಲ್ಭಾಗ 1226ನೇ ಇಸವಿ (ಸಂತ ಫ್ರಾನ್ಸಿಸರು ಸತ್ತ ವರ್ಷ)ಯನ್ನು ಹಾಗೂ 'F' ಅಕ್ಷರವನ್ನೂ ಆಳವಾಗಿ ಕೊರೆಯಲಾಗಿತ್ತು.

ಧರ್ಮಾಧಿಕಾರಿಗೆ ಮಾತು ಹೊರಡಲೇ ಇಲ್ಲ.

"ಓಹ್! ಇದು ಹೇಗೆ ಸಾಧ್ಯ? ಫ್ರಾಲಿಯೋ ಕೂಡ ಯಾವುದೇ ಗ್ರಂಥದಲ್ಲಿ ಹೆಸರಿಸುತ್ತಾನೆ. ಶತಮಾನಗಳು ಕಳೆದ ನಂತರವೂ ಯಾರೂ ಇದನ್ನು ನೋಡಿದವರಿಲ್ಲವೇ?" ಎಂದ ನಿಟ್ಟುಸಿರುಬಿಡುತ್ತಾ.

ಸೂಪರ್‌ವೈಸರ್ ಸ್ವಲ್ಪ ಒರಟುದನಿಯಲ್ಲೇ ಹೇಳಿದ: "ಮೊದಲು ಪೆಟ್ಟಿಗೆಯೊಳಗೆ ಏನಿದೆ ಎಂದು ನೋಡೋಣ. ಏನಾದರೂ ಬೆಲೆಬಾಳುವ ವಸ್ತು ಇದ್ದರೂ ಇರಬಹುದು."

ಆದರೆ ಧರ್ಮಾಧಿಕಾರಿ ಹೇಳಿದ, "ಯಾವುದಕ್ಕೂ ಸ್ವಲ್ಪ ಕಾಯುವುದೇ ಒಳ್ಳೆಯದು. ಮೊದಲು ಈ ಪೆಟ್ಟಿಗೆ ಸಿಕ್ಕಿದ್ದೇ ಪವಾಡ."

ವಿಶಾಲವಾದ ಮನೋಧರ್ಮವನ್ನು ಹೊಂದಿದ್ದ ಪಾದ್ರಿ ಡೇಮಿಕೋ ಹೇಳಿದ: "ಆ ಪೆಟ್ಟಿಗೆಯನ್ನು ಒಡೆಯಬಹುದು. ಇಲ್ಲಿರುವವರೆಲ್ಲಾ ಒಳ್ಳೆಯ ಸ್ವಭಾವದವರೇ. ಬಹುಶಃ ದೇವರೇ ನಮಗೆ ಈ ದಿಕ್ಕಿನಲ್ಲಿ ದಾರಿ ತೋರಿಸಿದ ಎಂದು ನನಗನಿಸುತ್ತಿದೆ."

ಚರ್ಚಿನ ಅಧಿಕಾರಿಯೊಬ್ಬ ಲಾಟೀನನ್ನು ಹಿಡಿದು ನಿಂತ. ಗಾರೆಯುವನು ಹೆಚ್ಚಿನ ಎಚ್ಚರಿಕೆಯಿಂದ ಒಡೆಯಲು ಪ್ರಾರಂಭಿಸಿದ. ಡಬ್ಬಿ ಕೀರಲು ಧ್ವನಿಯನ್ನು ಹೊರಡಿಸುತ್ತಾ ತಾನು ಶತಮಾನಗಳಷ್ಟು ಹಳೆಯದು ಎಂಬುದನ್ನು ಸೂಚಿಸಿತು. ಅದರಲ್ಲಿ ಒಂದು ಸಣಬಿನ ದಾರವಿತ್ತು. ಅದರ ಗಂಟುಗಳನ್ನು ನೋಡಿದರೆ ಅದನ್ನು ಸೊಂಟಪಟ್ಟಿಯಂತೆ ಬಳಸುತ್ತಿದ್ದ

ರಂದು ಕಾಣುತ್ತಿತ್ತು. ಹೊಚ್ಚ ಹೊಸದಾದ ಗೋದಿಯ ತೆನೆಯಂತೆ ಕಾಣುತ್ತಿತ್ತು. ಅದರ ಕಾಂಡವಲ್ಲದೇ ಪರ್ವತ ಪ್ರದೇಶದಲ್ಲಿ ಬೆಳೆಯುವ ಗುಲಾಬಿ ಹೂ. ಅಲ್ಲದೇ ಯಾವುದೋ ಹಕ್ಕಿಯ ಪುಕ್ಕವನ್ನು ಆ ಪೆಟ್ಟಿಗೆಯಲ್ಲಿ ಕಾಣಬಹುದಿತ್ತು.

ಎಲ್ಲರೂ ಮೂಕರಾಗಿ ಆ ವಸ್ತುಗಳನ್ನು ದಿಟ್ಟಿಸಿ ನೋಡಿ ಅರ್ಥೈಸಿಕೊಳ್ಳಲು ಪ್ರಯತ್ನಿಸಿದರು. ಪಾದ್ರಿ ಡೇಮಿಕೋ ಆ ವಸ್ತುಗಳನ್ನು ನೋಡಿದ ತಕ್ಷಣವೇ ಸಂತರನ್ನು ನೆನಪಿಸಿಕೊಂಡ. ಕಣ್ಣಿಂದ ನೀರು ದಳದಳನೇ ಸುರಿಯಲಾರಂಭಿಸಿತು. ಗೋದಿಯ ಪೈರಿನ ಮಧ್ಯದಲ್ಲಿ ಕಣ್ಣಿನ ಶಕ್ತಿ ಕ್ಷೀಣಿಸಿದ್ದ, ಹಾಡುತ್ತಿದ್ದ ಕೃಶಕಾಯ ಸಂತನ ಚಿತ್ರ ಕಣ್ಣು ಮುಂದೆ ನಿಂತಿತು. ಚಳಿಗಾಲದಲ್ಲಿ ಈ ಹೂವು ತಂದ ಕಂಪು ಮತ್ತು ಸೌಂದರ್ಯವನ್ನು ಸಂತರು ಕೊಂಡಾಡಿದ್ದರು. ಸಣಬಿನ ಬೆಳೆಗಳ ಮಧ್ಯದಲ್ಲಿ ಓಡಾಡುತ್ತಿರುವಾಗ ಸಣ್ಣ ಹಕ್ಕಿಯು ಅವನ ಭುಜ ಅಲಂಕರಿಸಿದ್ದನ್ನು ತನ್ನ ಅಂತರಾತ್ಮದಲ್ಲಿ ಕಂಡ. ಅದರ ಕುರುಹಾಗಿ ಇಂದು ಅದರ ಶೇಷಭಾಗ ಉಳಿದಿದೆ. ಹೃದಯ ತುಂಬಿದಂತಾಗಿ ಪಾದ್ರಿ ಡೇಮಿಕೋನಿಂದ ಆ ಅನುಭವವನ್ನೂ ವರ್ಣಿಸಲು ಸಾಧ್ಯವಾಗಲೇ ಇಲ್ಲ.

ಧರ್ಮಾಧಿಕಾರಿ ಕೂಡ ಈ ಹೊಸ ಅನುಭವದಲ್ಲಿ ತೇಲಾಡುತ್ತಿದ್ದಾನೆ. ತನ್ನದೇ ಆದ ರೀತಿಯಲ್ಲಿ ಪ್ರತಿಕ್ರಿಯೆಯನ್ನು ಸೂಚಿಸಿದ್ದಾನೆ: ''ಆಹ್! ಸಂತರಿಂದ ಇದಕ್ಕಿಂತ ಹೆಚ್ಚಿನ ಸಂದೇಶ ಬೇಕೆ? ನಿಮ್ಮ ಬಡತನವನ್ನು ಪ್ರೀತಿ ಮತ್ತು ಭಕ್ತಿಯಿಂದ ಹೋಗಲಾಡಿಸಿ. ಸಂತರ ಸಂದೇಶವೇ ನಮ್ಮ ಬಾಳಿನ ಗುರಿಯಾಗಲಿ.''

''ಒರಿಯರೇ, ನಾನು ಮತ್ತು ವಯೋಲೆಟ್ಟಾ ಒಳಗೆ ಹೋಗಬಹುದೆ?'' ಎಂದು ಪೆಪಿನೋ ಕೇಳಿದ.

ಅಲ್ಲಿಯವರೆಗೂ ಪೆಪಿನೋನನ್ನು ಎಲ್ಲರೂ ಮರೆತೇಬಿಟ್ಟಿದ್ದರು. ಪೆಪಿನೋನ ಮಾತು ಅವರನ್ನು ಭಾವಸಮಾಧಿಯಿಂದ ಎಚ್ಚರಿಸಿತು.

ಪಾದ್ರಿ ಡೇಮಿಕೋ ತನ್ನ ಕಣ್ಣೀರನ್ನು ಒರೆಸಿಕೊಳ್ಳುತ್ತಾ, ''ಪೆಪಿನೋ, ಈಗ ನೀನು ಸಮಾಧಿಯನ್ನು ಪ್ರವೇಶಿಸಬಹುದು. ದೇವರು ನಿನಗೆ ಒಳ್ಳೆಯದನ್ನು ಮಾಡಲಿ,'' ಎಂದು ಆಶೀರ್ವದಿಸಿದ.

ಪೆಪಿನೋ, ವಯೋಲೆಟ್ಟಾ ಇಬ್ಬರೂ ಸಮಾಧಿಯನ್ನು ಪ್ರವೇಶಿಸಿದರು. ಪೆಪಿನೋ ಈಗ ವಯೋಲೆಟ್ಟಾಳನ್ನು ಹಿಡಿದುಕೊಂಡಿಲ್ಲ. ಬರೇ ತನ್ನ ಕೈಯನ್ನು ವಯೋಲೆಟ್ಟಾಳ ಕುತ್ತಿಗೆಯ ಮೇಲೆ ಇಟ್ಟಿದ್ದಾನೆ. ಠೀವಿಯಿಂದ ಕತ್ತು ಮೇಲೆತ್ತಿ, ಎದೆಯುಬ್ಬಿಸಿ ಹೆಜ್ಜೆ ಹಾಕಿದ್ದಾನೆ ಪೆಪಿನೋ.

ಅವರಿಬ್ಬರೂ ಒಳಗೆ ಹೋಗುತ್ತಿರುವುದನ್ನು ಪಾದ್ರಿ ಡೇಮಿಕೋ ಸೂಕ್ಷ್ಮವಾಗಿಯೆ ಗಮನಿಸಿದ. ಬೆಳಕಿನ ಕೊರತೆಯಿಂದಲೋ, ದೇವರ ದಯೆಯಿಂದಲೋ, ಮತ್ತೆ ವಯೋಲೆಟ್ಟಾಳ ಮುಖದಲ್ಲಿ ಕಿರುನಗೆ ಮೂಡಿದಂತೆ ಕಾಣಿಸಿತು.

ಹೀಗಾಗಿ ಅಲ್ಲಿ ಸೇರಿದವರೆಲ್ಲಾ ಪೆಪಿನೋ ಮತ್ತು ವಯೋಲೆಟ್ಟಾಳು ಮೊಂಬತ್ತಿಯ ಬೆಳಕಿನಲ್ಲಿ ಸಮಾಧಿಯತ್ತ ತೆರಳಿದ್ದನ್ನು ವೀಕ್ಷಿಸಿದರು. ಈ ರೀತಿಯಲ್ಲಿ ಇಬ್ಬರೂ ತಮ್ಮ ಭಕ್ತಿಯ ಯಾತ್ರೆಯನ್ನು ಪೂರೈಸಿದರು.

ಅವರಿಬ್ಬರೂ ಕಪ್ಪು ಚುಕ್ಕೆಗಳಂತೆ ಕಾಣುವವರೆಗೂ ದೃಶ್ಯವನ್ನು ನೋಡುತ್ತಿದ್ದ ಜನ-ಸಮೂಹ ಸ್ತಬ್ಧವಾಗಿತ್ತು.''

---

*ನಮ್ಮ ಉಳಿಕೆಯ ಇಂದಿನ ಅತ್ಯಂತ ಪರಿಣಾಮಕಾರಿ ಉಪಾಯವೆಂದರೆ ''ನಾಳೆ'' ಎಂಬುದು.*

*- ಮೋರಿಸ್ ಹ್ಯಾಂಡರ್‌ಸನ್*

*ಅವಕಾಶಗಳನ್ನು ಬಾಚಿ ತಬ್ಬಿಕೊಳ್ಳುವಾತನೇ ನಿಜವಾದ ಬಿಷ್ಮಚಾರಿ.*

*- ಮೇರಿ ಆಸ್ಟಿನ್*

ಮೋಹನ.ಗ.ಹೆಗಡೆ. ಬಂದಗದ್ದೆ

# ಮರಳುಗಾಡು ಅರಳಿದರೆ...

ನಮ್ಮ ಭೂಮಿ, ನೀರು, ನೆಲ, ಹಿಮದಿಂದ ಆವೃತವಾಗಿದೆ. ಮರಳಿನಿಂದ ಆವೃತವಾದ ನೆಲದ ಸುಮಾರು ಅರ್ಧಭಾಗ ಬರಡಾಗಿದೆ ಯೆಂಬ ಕಲ್ಪನೆ ನಮ್ಮಲ್ಲಿದೆ. ಹವಾಮಾನ ವೈಪರೀತ್ಯದಿಂದ ಕೂಡಿದ ಈ ಮರಳುಗಾಡು ಅಗಾಧ ನೈಸರ್ಗಿಕ ಸಂಪತ್ತನ್ನೂ ಹೊಂದಿದೆ.

ಸಹಾರಾ ಮರುಳುಗಾಡಿನಲ್ಲಿ ವಿಪುಲ ತೈಲ ಸಂಗ್ರಹವಿದೆಯೆಂದು ವಿಜ್ಞಾನಿಗಳು ಹೇಳಿದಾಗ ಫ್ರೆಂಚ್ ಸರಕಾರದ ಅಧಿಕಾರಿಗಳು 1985ರಲ್ಲಿ ವಿಜ್ಞಾನಿಗಳ ಮಾತನ್ನು ಅಲ್ಲಗಳೆದರು. ಆದರೆ ಹಾಸ್ಸಿ, ಮೆಸ್ಸಾಡ ಹಾಗೂ ಎಡಜಿಲೆಗಳಲ್ಲಿ ಪ್ರತಿ ವರ್ಷ ಒಂದೂಕಾಲುಕೋಟಿ ಟನ್ನುಗಳಷ್ಟು ಎಣ್ಣೆ ಲಭ್ಯವಾಗತೊಡಗಿದಾಗ ಅವರು ತಮ್ಮ ಅಭಿಪ್ರಾಯವನ್ನು ಬದಲಿಸಿಕೊಳ್ಳಬೇಕಾಯಿತು. ಈ ಪಟ್ಟಣಗಳು ಈಗ ಚಲಿಸುವ ಅರಮನೆ, ಅತ್ಯಾಧುನಿಕ ಈಜುಗೊಳಗಳನ್ನು ಹೊಂದಿ ಆಧುನಿಕತೆಯತ್ತ ಧಾವಿಸಿವೆ.

ಪ್ರಪಂಚದಲ್ಲಿ ಹಲವಾರು ಮರುಭೂಮಿಗಳಿದ್ದು, ಮುಖ್ಯವಾದವುಗಳು ಇವು:

**ಸಹಾರಾ:** ಸುಮಾರು 3200 ಮೈಲುಗಳ ವಿಸ್ತಾರದ ಈ ಭಾಗದಲ್ಲಿ ಬೀಳುವ ಮಳೆ ವರ್ಷಕ್ಕೆ ಕೇವಲ 2.5 ಸೆಂಟಿಮೀಟರುಗಳಷ್ಟು.

**ಆಸ್ಟ್ರೇಲಿಯದ ಮರುಭೂಮಿ:** ಆ ಖಂಡದ ಹನ್ನೆರಡು ಲಕ್ಷ ಚದುರ ಮೈಲು ಜಾಗೆಯನ್ನು ಆವರಿಸಿದ್ದು ವಾರ್ಷಿಕ ಮಳೆ ಕೇವಲ 13 ಸೆಂಟಿಮೀಟರುಗಳಷ್ಟು. ಇದು ಸಹಾರಾಕ್ಕಿಂತ ಆಸ್ಟ್ರೇಲಿಯದ ಮರುಭೂಮಿಯನ್ನು ತುಸು ಹಸಿರಾಗಿರಿಸಿದೆ.

**ಅರೇಬಿಯಾದ ಮರಳುಗಾಡು:** ಹತ್ತು ಲಕ್ಷ ಚದುರ ಮೈಲುಗಳಷ್ಟು ವಿಸ್ತೃತವಾಗಿದೆ. ಇಷ್ಟು ವಿಶಾಲ ಪ್ರದೇಶದಲ್ಲಿ ನದೀಮೂಲವಿಲ್ಲದ್ದೊಂದು ವಿಚಿತ್ರ.

**ತುರ್ಕಸ್ಥಾನದ ಮರುಭೂಮಿ:** ಈಶಾನ್ಯ ರಶಿಯ, ಪಶ್ಚಿಮ ಅಮೇರಿಕಕ್ಕೆ ಸೇರಿದ ಸುಮಾರು ಎಪ್ಪತ್ತೈದು ಲಕ್ಷ ಚದರ ಪ್ರದೇಶದಲ್ಲಿ ಹರಡಿದೆ.

**ಪಟಗೋನಿಯದ ಮರಳುಗಾಡು:** 2,60,000 ಚದರ ಮೈಲುಗಳ ಈ ಮರಳುಗಾಡಿಗೆ ಅರ್ಜೆಂಟಿನಾ ಮರಳುಗಾಡೆಂದೇ ಹೆಸರು. ಕೆಲವು ಚಿಕ್ಕಪುಟ್ಟ ಸಸ್ಯಗಳು ಇಲ್ಲಿ ಬೆಳೆಯುವುದುಂಟು.

**ಥಾರ್:** ಪಶ್ಚಿಮ ಭಾರತ ಹಾಗೂ ಪಾಕಿಸ್ತಾನಗಳಲ್ಲಿ 2,30,000 ಚದರ ಮೈಲುಗಳಲ್ಲಿ ಹರಡಿಕೊಂಡಿದೆ. ಸಿಂಧೂ ನದಿಯ ಪೂರ್ವಕ್ಕಿರುವ ಇದು ''ಗ್ರೇಟ್ ಇಂಡಿಯನ್ ಡೆಸರ್ಟ'' ಎಂದು ಹೆಸರಾಗಿದೆ.

**ಕಲಹಾರಿಯು** ಹುಲ್ಲುಗಾವಲನ್ನು ಹೊಂದಿದ 22,000 ಚದರ ಮೈಲುಗಳಷ್ಟು ವಿಶಾಲವಾದ ಆಫ್ರಿಕದ ಉಸುಕಿನ ಅಂಗಳ.

**ಟಾಕ್ಲಾ ಮಲಕನ್:** ಎರಡು ಲಕ್ಷ ಚದರ 5 ಮೈಲುಗಳಷ್ಟು ವಿಸ್ತಾರವಾಗಿದ್ದು ಪಶ್ಚಿಮ ಚೀನ, ಸಿಂಕಿಯಾಂಗ್, ಮಂಗೋಲಿಯಾ ವಾಯುವ್ಯ ಭಾಗದ ಅರೆ ಒಣ ಪ್ರದೇಶದಲ್ಲಿ ಸೇರಿಕೊಂಡಿದೆ.

**ಗೋಬಿ:** 1,50,000 ಮೈಲುಗಳಷ್ಟು ಚಾಚಿದೆ. ಸ್ಟೆಪ್ ಹುಲ್ಲುಗಾವಲು, ಇರಾನ್, ಹಳೆ ಪರ್ಶಿಯಾ ಭಾಗಗಳನ್ನೂ ಒಳಗೊಂಡ ಪ್ರದೇಶವಿದು.

ಅಟಕಾಮಾ, ಪೆರೂ ಹಾಗೂ ಚಿಲಿ ಸೇರಿದ 1,40,000 ಚದರ ಮೈಲುಗಳ ಈ ಮರುಭೂಮಿ ಚಿಕ್ಕದು. ಇಲ್ಲಿ ವರ್ಷಕ್ಕೆ ಮಳೆ ಬೀಳುವ ಪ್ರಮಾಣ ಎರಡೂವರೆ ಸೆಂಟಿಮೀಟರಿಗಿಂತ

ಕಡಿಮೆ. ಸಮುದ್ರದಂಚಿನಲ್ಲಿದ್ದು ಸದಾ ಮಂಜಿನಿಂದ ಆವೃತವಾಗಿಯೇ ಇರುತ್ತದೆ.

ಈ ಎಲ್ಲ ಪ್ರದೇಶಗಳ ವೈಪರೀತ್ಯ ವಿಚಿತ್ರವಾದುವು. ಕ್ಯಾಲಿಫೋರ್ನಿಯದ ''ಬಾಜಾ''ದಲ್ಲಿ 5 ವರ್ಷಗಳಿಂದ, ಸಹಾರಾ ಮರುಭೂಮಿಯ ''ಢಾಕವಾ''ಗಳಲ್ಲಿ 11 ವರ್ಷಗಳಿಂದ ಅಲ್ಲಿಯ ಜನ ಮಳೆಯನ್ನೇ ಕಂಡಿಲ್ಲ. ಬಗದಾದಿನಲ್ಲಿ ಎರಡು ವರ್ಷಗಳಲ್ಲಿ ಬೀಳಬಹುದಾದ ಮಳೆ ಒಂದೇ ರಾತ್ರಿಯಲ್ಲಿ ಬಿತ್ತು.

ಸಹಾರಾದ ಅಜೀಜಿಯಾದಲ್ಲೊಮ್ಮೆ ಹಗಲಿನಲ್ಲಿ ವಾತಾವರಣದ ಉಷ್ಣತೆ 58 ಸೆಂಟಿ ಗ್ರೇಡಿಗೆ ಏರಿದರೆ ಅದೇ ರಾತ್ರಿ, ಅದು 27.8 ಸೆಂಟಿಗ್ರೇಡಿಗೆ ಇಳಿಯಿತು.

ಇಂಥ ಮರಳುಗಾಡುಗಳಲ್ಲಿಯೂ ಮಾನವ ಶ್ರೀಮಂತಿಕೆಯನ್ನರಸುತ್ತಿದ್ದಾನೆ. ಅನೇಕ ಶ್ರೇಷ್ಠ ಖನಿಜ ಸಂಪತ್ತನ್ನಾತ ಹುಡುಕಿ ತೆಗೆದಿದ್ದಾನೆ. ಅತ್ಯುನ್ನತ ತಂತ್ರಜ್ಞಾನದ ಸಹಾಯದಿಂದ ಒಣ ಪ್ರದೇಶವನ್ನು ಹಸಿರಾಗಿರಿಸಿದ್ದಾನೆ.

ತುಸು ನೀರು ಅಥವಾ ನೀರೇ ಇಲ್ಲದ ಪರಿಸರದಲ್ಲಿ ಸಸ್ಯಗಳನ್ನು ಬೆಳಸುವುದು ಮರಳುಗಾಡಿನ ಕೃಷಿಗಾರಿಕೆಯ ಅದ್ಭುತ. ಪ್ಲಾಸ್ಟಿಕ್ ತಂತ್ರಜ್ಞಾನ ಬಳಸಿದ ಹಸಿರು ಮನೆಗಳಲ್ಲಿ ಗಿಡ ಬೆಳೆಸುವ ವಿಧಾನ ಅಬು ಧಾಬಿಯಲ್ಲಿ ಈಗ ರೂಪುಗೊಂಡು ಎಲ್ಲ ಕಡೆ ಹರಡುತ್ತಿದೆ. ಸಮುದ್ರದ ಉಪ್ಪು ನೀರನ್ನು ಪರಿಷ್ಕರಿಸಿ ವರ್ಷವಿಡೀ ಉತ್ತಮ ತರಕಾರಿಯನ್ನಿಲ್ಲಿ ಬೆಳೆಯಲಾಗುತ್ತಿದೆ. ಭೂಗರ್ಭದಲ್ಲೆಲ್ಲೋ ಅಡಗಿದ ನೀರನ್ನು ಎಳೆತಂದು ಸಿಂಚನದ ಮೂಲಕ ನೆಲಕ್ಕೆ ಉಣಿಸಿ, ಅಬುಧಾಬಿಯ ಜನ ಮರಳುಗಾಡಿನಲ್ಲಿ ಗೋದಿಯನ್ನು ಬೆಳೆಯುತ್ತಿದ್ದಾರೆ.

ಮರುಭೂಮಿಯ ಬಿರುಕುಗಳನ್ನು ಉಪಯೋಗಿಸಿಕೊಂಡು ಬೆಳೆ ಪಡೆಯುವ ಸರಳ ವಿಧಾನ ಫಲದಾಯಕವಾಗಿದೆ. ನವಣೆ, ಜೋಳದ ಜಾತಿಯ ಹುಲ್ಲು ಬೆಳೆಸುವ ಮೊದಲು ಹಾರ್ಡಿ, ಅಕೇಶಿಯಾಗಳನ್ನು ಅಲ್ಲಿ ಬೆಳೆಯಲಾಗುತ್ತಿದೆ. ಉಳಿದ ಸಸ್ಯಗಳ ಕಟ್ಟಿಗೆ ಉರುವಲಿಗೆ ಬಳಕೆಯಾಗುತ್ತಿದೆ.

ದಕ್ಷಿಣ ಕ್ಯಾಲಿಫೋರ್ನಿಯದ ಸೊನೊರನ್ ಮರುಭೂಮಿಯಲ್ಲಿಂದು ಹಕ್ಕರಿಕೆ, ಟೊಮೆಟೊಗಳನ್ನು ಸಮೃದ್ಧವಾಗಿ ಬೆಳೆಸಲಾಗುತ್ತಿದೆ. ಕೋಲರಾಡೋ ನದಿಯ ನೀರನ್ನು 3,000 ಮೈಲು ನೇರ ಉದ್ದದ ಕಾಲುವೆಯಿಂದ ತಂದು 6 ಲಕ್ಷ ಎಕರೆ ಮರುಭೂಮಿಯನ್ನೆಲ್ಲ ಹಸಿರಾಗಿರಿಸಿದ್ದಾರೆ. ಸಮುದ್ರದ ಮಟ್ಟಕ್ಕಿಂತ




ಪ್ರಪಂಚದ ಪ್ರಸಿದ್ಧ ಮರಳುಗಾಡುಗಳು

ಹುಡುಗೀ,
ಒಂದು ಮಾತಿತ್ತು
ನನ್ನೆದೆಯೊಳಗೆ
ಅದನ್ನು ಹೇಳದಾದೆ.....
ನನ್ನ
ಕಣ್ಣಂಚಿನಲೊಂದು
ಹನಿ
ಉರುಳಿತ್ತು
ಅದನ್ನು
ನೀನು
ನೋಡದೆ ಹೋದೆ!

– ಕಿ.ವಿ

ನದೀ ನೀರಿನಮಟ್ಟ ಮೇಲಿದ್ದು ಕೊಳ್ಳದ ಮಟ್ಟ ಇನ್ನೂ ಮೇಲಿದ್ದುದು ಅಚ್ಚರಿಯ ಸಂಗತಿ. ಸತ್ವಯುತ ಮಣ್ಣು, ಸಮೃದ್ಧ ನೀರು, ವಿಪುಲ ಸೂರ್ಯರಶ್ಮಿಗಳು ಮರುಭೂಮಿಯಲ್ಲಿಯ ಇಂಪಿರೀಯಲ್ ಕೊಳ್ಳವನ್ನು ಸಮೃದ್ಧ ಭೂಮಿಯನ್ನಾಗಿಸಿವೆ.

ಜೊಜೋಬಾ ಎಂಬ ಕುರುಚಲು ಗಿಡ ಮೆಕ್ಸಿಕೋದ ಮರುಭೂಮಿಯಲ್ಲಿ ಬೆಳೆಯುತ್ತಿದ್ದು ತಿಮಿಂಗಿಲದ ಮೇದಸ್ಸು ಹಾಳಾಗದಂತೆ ತಡೆಯಲು ಆ ಸಸ್ಯದಿಂದ ತೆಗೆದ ಎಣ್ಣೆಯನ್ನು ಬಳಸಲಾಗುತ್ತದೆ. ಚಿಲಿಯ ಅಟಕಾಮಾ ಮರುಭೂಮಿಯ ಟಮರುಗೋ ಸಸ್ಯ ಕುರಿಗೆ ಅತ್ಯುತ್ತಮ ಮೇವಾಗಿದೆ. ''ದೊಂಗೊಂಗೋ'' ಹಣ್ಣು, ಬೊಟ್ಸ್ವಾನಾ ಜಾತಿಯ ಬಟ್ಟವರೆಕಾಳಿನ ಗಿಡ ಹೆಚ್ಚಿನ ಸಾರಯುಕ್ತ ಆಹಾರವಾಗಿದೆ.

ಅಲಂಕಾರಿಕ ವೃಕ್ಷ, ಪೊದೆಗಳಿಂದ, ಜೆನೆಸ್ಟಾ, ಅರೇಬಿಯದ ''ಟಮರಿಸ್ಕ್, ಲಿಬಿಯಾ, ವಾಶಿಂಗ್‌ಟನ್ನಗಳಿಂದ, ಮಾಜೇವ್ ಮರಳುಗಾಡಿನ ತಾಳೆ, ಮತ್ತುಬರಿಸುವ ದ್ರಾವಕ ಸಸ್ಯ ಟೆಕಿಲ್ಲಾ ಹಾಗೂ ಮೆಸ್ಕಲ್ ವೃಕ್ಷಗಳಿಂದಲೂ ವಿವಿಧ ಪ್ರಯೋಜನಗಳು ಉಂಟಾಗಿವೆ.

ಊಟಾ ಲವಣ ಸರೋವರದ ಒಂದು ಗ್ಲಾಸು ನೀರನ್ನು ತೆಗೆದುಕೊಂಡು ನೀರನ್ನು ಆವಿಮಾಡಿದರೆ ಅದರ ತಳದಲ್ಲಿ ಒಂದು ಇಂಚಿನಷ್ಟು ದಪ್ಪವಾದ ಉಪ್ಪು ಪದರ ಕಂಡು ಬರುತ್ತದೆ. ಈ ಸರೋವರದ ಹಾಗೂ ಸುತ್ತಮುತ್ತಲಿನ ಜವುಳು ಜಾಗ ಹಾಗೂ ಲಗೂನಿನ ಭಾಗಗಳು ಸುಮಾರು 5.4 ಬಿಲಿಯನ್ ಟನ್ನುಗಳಷ್ಟು ಲವಣವನ್ನು ನೀಡಬಲ್ಲವಂತೆ! ಕ್ಯಾಲಿಫೋರ್ನಿಯಾ ಸರೋವರದ ನೀರಿನಿಂದ ಉಪ್ಪನ್ನಲ್ಲದೆ ಪೋಟ್ಯಾಶ್, ಕಾಸ್ಟಿಕ್ ಸೋಡಾ ಹಾಗೂ ಕ್ಲೋರಿನ್ನುಗಳನ್ನೂ ಪಡೆಯಲಾಗುತ್ತಿದೆ.

ಕಪ್ಪು ಬಂಗಾರವೆಂದೇ ಹೆಸರಾದ ಕಲ್ಲೆಣ್ಣೆಗೆ ಮರಳುಗಾಡೇ ತವರು. ಅತ್ಯಾಧುನಿಕ ತಂತ್ರಜ್ಞಾನದ ಸಹಾಯದಿಂದ ಪ್ರಪಂಚದ ಒಟ್ಟು ಉತ್ಪನ್ನದ ಅರ್ಧಭಾಗವನ್ನು ಇಲ್ಲಿ ಪಡೆಯಲಾಗುತ್ತಿದೆ. ಉತ್ತರ ಅಲ್ಜೀರಿಯದಲ್ಲಿ ಎರಡು ಮೈಲು ಆಳದ ಬಾವಿಯನ್ನು ತೋಡಿ ಎಣ್ಣೆಯನ್ನು ಹೊರಗೆಳೆಯಲಾಗುತ್ತದೆ. ಇದನ್ನು ಸಾಗಿಸಲು ಸೌದಿ ಅರೇಬಿಯಾದಲ್ಲಿ 1000 ಮೈಲುದ್ದದ ಕೊಳವೆ ಮಾರ್ಗ ನಿರ್ಮಾಣವಾಗಿದೆ. ಇಪ್ಪತ್ತು ಇಂಚುಗಳಷ್ಟು ಅಗಲವಾದ ಪ್ರತಿ ಕೊಳವೆಯೂ 93 ಅಡಿ ಉದ್ದವಾಗಿದೆ. ಮರಳುಗಾಡಿನ ಅಗಾಧ ಉಷ್ಣತೆಯನ್ನು ತಡೆದುಕೊಂಡು ಈ ಕೊಳವೆಗಳು ಎಣ್ಣೆಯನ್ನು ಸಾಗಿಸುತ್ತಿವೆ. ಅಲ್ಲಿಯ ಅತ್ಯುಷ್ಣತಾಪಮಾನ ವಿರುತ್ತಿರುವ ಖರ್ಚು, ಸರಕಾರದ ನಿರ್ಬಂಧಗಳಿದ್ದರೂ ಜನರ ಅವಿರತ ಪರಿಶ್ರಮದಿಂದ ದಿನವೂ ಎರಡು ಕೋಟಿ ನಾಲ್ಕು ಲಕ್ಷ ಬ್ಯಾರಲ್ಲುಗಳಷ್ಟು ಎಣ್ಣೆ ಭೂಮಿಯಿಂದ ಹೊರಬರುತ್ತದೆ.

ಎಣ್ಣೆಯೊಂದೇ ಮರಳ ಸಿರಿ ಎಂಬುದು [illegible] ಯಲ್ಲ. ಮರಳು ಕೂಡ ಫಲವತ್ತಾದ ಭೂ[illegible]

ಯಷ್ಟೇ ಸಂಪತ್ತನ್ನು ನೀಡಬಲ್ಲದು.

ಉತ್ತರ ಮೆಕ್ಸಿಕೋದ ಮರುಭೂಮಿ ಬೆಳ್ಳಿಯ ತವರಾದರೆ ದಕ್ಷಿಣ ಆಫ್ರಿಕವು ವಜ್ರಗಳ ತವರು. ಚಿಲಿ ತಾಮ್ರಕ್ಕಾಗಿ ಹೆಸರಾಗಿದೆ. ಪ್ರತಿ ವರ್ಷವೂ ಅದು 2,72,000 ಟನ್ ತಾಮ್ರವನ್ನು ಪ್ರಪಂಚಕ್ಕೆ ನೀಡುತ್ತಿದೆ. ಅತಿ ಒಣ ಹಾಗೂ ಅತಿ ಶೀತದ ಅಟಕಾಮಾ ಮರಳು ಭೂಮಿಯಿಂದ ಗಣನೀಯ ಪ್ರಮಾಣದ ನೈಟ್ರೇಟ್ ಹಾಗೂ ಗಂಧಕವನ್ನು ಹೊರದೆಗೆಯಲಾಗುತ್ತಿದೆ.

ಕೆಲವು ಖನಿಜಗಳಂತೂ ಮರಳಿನಲ್ಲಿ ಮಾತ್ರವೇ ಲಭ್ಯ. ಜಿಪ್ಸಂ, ನೈಟ್ರೇಟ್, ಫಾಸ್ಫೇಟ್ ಮುಂತಾದವುಗಳು ಕ್ಯಾಲಿಫೋರ್ನಿಯದ ಮೋಜೇವ್ ಮರುಭೂಮಿಯಲ್ಲಿ ಸಿಗುತ್ತವೆ. ಅಲ್ಲದೆ ಅಲ್ಲಿ ಪ್ರತಿವರ್ಷ ಹತ್ತು ಕೋಟಿ ಡಾಲರು ಬೆಲೆಯ ಬೊರಾಕ್ಸ್ ಸಿಗುತ್ತದೆ. ಇದನ್ನು, ಉಷ್ಣತೆಯನ್ನು ತಡೆದುಕೊಳ್ಳುವ ಗಾಜನ್ನು ತಯಾರಿಸಲು ಬಳಸಲಾಗುತ್ತಿದೆ. ವಸ್ತು ವಿದ್ಯುತ್ ಅವಾಹಕಗಳನ್ನು ತಯಾರಿಸುವಲ್ಲಿಯೂ ಇದರ ಉಪಯೋಗವುಂಟು.

ಅಮೇರಿಕದ ಆಗ್ನೇಯದಲ್ಲಿ ಹರಡಿಕೊಂಡ ಕೊಲರಾಡೋ ಮರಳುಗಾಡಿನಲ್ಲಿ ಶತಮಾನಗಳಿಂದ ರೆಡ್ ಇಂಡಿಯನ್ನರು ನೆಲೆಸಿದ್ದಾರೆ. 1950ರಲ್ಲಿ ಇಲ್ಲಿ ಯುರೇನಿಯಂ ಇರುವುದು ಗೊತ್ತಾದಾಗ ಈ ಭೂಮಿಗೆ ಬೆಲೆ ಬಂತು. ಇಲ್ಲಿಯವರೆಗೆ ಸುಮಾರು ಒಟ್ಟು 45 ಟನ್ನುಗಳಷ್ಟು ಯುರೇನಿಯಮ್ಮನ್ನು ಇಲ್ಲಿಂದ ಹೊರದೆಗೆಯಲಾಗಿದೆ. ಇಂಥ ಹೆಚ್ಚಿನ ಸಂಪತ್ತನ್ನು ಹೊರತೆಗೆಯಲು ಅತ್ಯಾಧುನಿಕ ತಾಂತ್ರಿಕತೆಯ ಅಗತ್ಯವಿದೆ. ಖನಿಜಗಳು ನಿರ್ಜನ ಪ್ರದೇಶಗಳಲ್ಲಿ ಲಾಭದಾಯಕವು ಹೌದು. ಆದರೆ ಅದಕ್ಕೆ ಅಗತ್ಯವಾದ ಬಂಡವಾಳವೂ ಅಗಾಧ ಪ್ರಮಾಣದಲ್ಲಿ ಬೇಕು.

ಆದರೆ ಮಾನವನ ಅತಿಯಾಸೆ ಇಂಥ ಸಂಪದ್ಭರಿತ ಮರುಭೂಮಿಯನ್ನು ಬೆಂಗಾಡನ್ನಾಗಿ ಬದಲಾಯಿಸುವ ಕಾಲವೂ ದೂರವಿಲ್ಲ. ●

(ಸಾಧಾರ)

# ಇದುವೇ ಜೀವ ಇದು ಜೀವನ

ಸರಕಾರಿ ಸೇವೆಯಿಂದ ನಿವೃತ್ತಿ ಪಡೆದು ನನ್ನ ಮಾವನವರು ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಮೊಮ್ಮಕ್ಕಳನ್ನು ಶಾಲೆಗೆ ಬಿಡುವುದು, ಕರೆ ತರುವುದು, ಕಾಯಿಪಲ್ಲೆ ತರುವುದು ಮುಂತಾದ ಚಿಲ್ಲರೆ ಕೆಲಸಗಳನ್ನು, ಕಾಲ ಹಾಕಿದಂತೆಯೂ ಆಯಿತು, ಚುರುಕಾಗಿದ್ದಂತೆಯೂ ಆಯಿತು ಎಂದು ತಾವೇ ವಹಿಸಿಕೊಂಡಿದ್ದರು. ಕಳೆದ ಮೇ ತಿಂಗಳ ಒಂದು ದಿನ ಯಾವುದೋ ತುರ್ತು ಕೆಲಸವೊಂದಕ್ಕೆ 'ಸಿಟಿ'ಗೆ ಹೋಗುವ ಪ್ರಸಂಗ ಬಂತು. ಅವರಿಗೆ ಬೇಕಾದ ವಸ್ತು ಗಲ್ಲಿಯೊಂದರ ಅಂಗಡಿಯಲ್ಲಿತ್ತು. ಅಂಗಡಿ ಹುಡುಕುವ ಭರದಲ್ಲಿ ಅವರು ಅಲ್ಲೇ ಮೂಲೆಯಲ್ಲಿ ಹಚ್ಚಿದ ನಾಮಫಲಕವೊಂದಕ್ಕೆ ಹಣೆ ಬಡಿಸಿಕೊಂಡರು. ನಾಮಫಲಕದ ಚೂಪಾದ ಕಬ್ಬಿಣದ ಮೂಲೆ ಪಟ್ಟಿ ಹಣೆಯನ್ನು ಕತ್ತರಿಸಿತ್ತು. ಮೊದಲೆ ಮಧ್ಯಾಹ್ನದ ಬಿಸಿಲು. ಒಸರುವ ರಕ್ತ, ಅಸಹನೀಯವಾದ ನೋವನ್ನು ತಡೆದುಕೊಳ್ಳಲಾಗದೆ ಸ್ಮೃತಿ ತಪ್ಪಿ ಅಲ್ಲೇ ಬಿದ್ದುಬಿಟ್ಟರು, ಅಕ್ಕಪಕ್ಕದ ಜನ ನೀರು ಹಾಕಿ ಎಚ್ಚರಿಸಿ ಅಲ್ಲೇ ಪಕ್ಕದ ನರ್ಸಿಂಗ್ ಹೋಮಿಗೆ ಸೇರಿಸಿದರು. ಹೊಲಿಗೆ, ಬ್ಯಾಂಡೇಜು, ಇಂಜೆಕ್ಷನ್ನುಗಳ ಶುಶ್ರೂಷೆಯಿಂದಾಗಿ 2-3 ಗಂಟೆಗಳಲ್ಲೆ ನನ್ನ ಮಾವ ಸುಧಾರಿಸಿಕೊಂಡರು. ಸಂಜೆಯಷ್ಟರಲ್ಲಿ ಮನೆಗೆ ಹೋದೇನು ಎಂಬ ಧೈರ್ಯವೂ ಬಂತು. ನರ್ಸಿಂಗ್ ಹೋಮಿನ ಬಿಲ್ಲನ್ನು ತೆತ್ತು, ಡಾಕ್ಟರರ ಉಪಕಾರ ಸ್ಮರಿಸಿ ಮನೆಗೆ ಹೊರಡುವಾಗ ತಾನು ಯಾವ ನಾಮಫಲಕಕ್ಕೆ ತಲೆ ಕೊಟ್ಟೆ ಎಂದು ಒಮ್ಮೆ ಅವಲೋಕಿಸಿದರು. ಆ ನಾಮಫಲಕ ಅವರು ಅಗಷ್ಟೇ ಶುಶ್ರೂಷೆ ಪಡೆದು ಬಿಲ್ಲ ತೆತ್ತು ಬಂದ ನರ್ಸಿಂಗ್ ಹೋಮಿನದೇ ಆಗಿತ್ತು!

ಸುರೇಶ ಹೆಗಡೆ

ನಾನು ಪ್ರತಿ ತಿಂಗಳಿನಂತೆ ಊರಿಗೆ ಹೋಗುವವನು ಈ ಬಾರಿಯೂ ಸಂಬಳ ತೆಗೆದು

ಕೊಂಡು, ಏರ್‌ಬ್ಯಾಗನ್ನು ಬಗಲಿಗೆ ಸಿಕ್ಕಿಸಿಕೊಂಡು, ಬಸ್ ಖರ್ಚಿಗೆ ಬೇಕಾಗುವಷ್ಟು ಹಣ ಜೇಬಿಗೆ ಹಾಕಿ, ಉಳಿದ ಹಣ ಬ್ಯಾಗಿನಲ್ಲಿಟ್ಟುಕೊಂಡು ಗೊಂದಿ ಕತ್ತರಿಯಿಂದ ಶಿವಮೊಗ್ಗಾಕ್ಕೆ ಹೋಗುವ ಬಸ್ಸನ್ನು ಹತ್ತಿದೆ. ಶಿಕಾರಿಪುರದಲ್ಲಿ ಬಸ್ ನಿಂತಾಗ ಡ್ರೈವರನ್ನು ಕೇಳಿಕೊಂಡು ಬಸ್ ಸ್ಟ್ಯಾಂಡಿನ ಕ್ಯಾಂಟೀನಿಗೆ ಮುಂಜಾನೆಯ ಮಸಾಲೆ ದೋಸೆಯ ರುಚಿ ನೋಡುವ ಆಸೆಯಿಂದ ಹೋಗಿ, ಉಪಾಹಾರ ಮುಗಿಸಿಕೊಂಡು ಬರುವಷ್ಟರಲ್ಲಿ ಬಸ್ ಹೊರಟುಹೋಗಿತ್ತು. ಕಂಗೆಟ್ಟು ದಿಕ್ಕು ತಪ್ಪಿದ ನನಗೆ ಆಗ ನೆರವಿಗೆ ಬಂದವರು ಅಲ್ಲಿಯ ಜನರಿಗೆ ಚಿರಪರಿಚಿತರಾದ ಕೇರಳದ ಕುಟ್ಟಿ ಎಂಬುವವರು. ಅವರು ನನಗಾಗಿ ತುಂಬಾ ಪ್ರಯತ್ನಿಸಿ, ಕೊನೆಗೆ ಪಕ್ಕದಲ್ಲಿಯ ಅಂಗಡಿಯವರಿಂದ ಸೌಳಂಗಕ್ಕೆ ಫೋನ್ ಮಾಡಲು ಹೋದಾಗ ಅಂಗಡಿಯವರು, ''ಮೇಷ್ಟ್ರಾಗಿದ್ದಕ್ಕೆ ನಿಮ್ಮ ಮಧ್ಯಸ್ಥಿಕೆಯಲ್ಲಿ ಫೋನ್ ಕೊಡುತ್ತೇನೆ. ಚಾರ್ಜು ಮೂರುವರೆ ರೂಪಾಯಿಗಳನ್ನು ಎಂಟು ದಿನದಲ್ಲಿ ಕೊಡಬೇಕು ಇಲ್ಲದಿದ್ದರೆ ನಿನ್ನಿಂದ ವಸೂಲಿ ಮಾಡಬೇಕಾಗುತ್ತದೆ,'' ಎಂದಾಗ ಕುಟ್ಟಿಯವರು 'ಸರಿ' ಎಂದರು. ಅಪರಿಚಿತನಾದ ನನ್ನ ಮೇಲೆ ಇಷ್ಟು ವಿಶ್ವಾಸ ತೋರಿಸಿದ್ದಕ್ಕಾಗಿ ಕುಟ್ಟಿಯವರ ಬಗೆಗೆ ಅಭಿಮಾನವೆನಿಸಿತು. ಆದರೆ ಸೌಳಂಗಕ್ಕೆ ಮಾಡಿದ ಫೋನಿನಿಂದ ಅಲ್ಲಿ ಅನುಕೂಲವಾಗದಿದ್ದಾಗ ದಾರಿ ಕಾಣದ ನನಗೆ ಕುಟ್ಟಿಯವರು ಆರಕ್ಷಕದಳದ ವೈರ್‌ಲೆಸ್ಸಿನವರಿಗೆ ನಡೆದುದನ್ನು ತಿಳಿಸಿದಾಗ ಬ್ಯಾಗ್ ಮರಳಿ ನಮಗೆ ಸಿಗುವಂತಾಗಿ ನನ್ನ ಮನಸ್ಸಿನ ತಳಮಳ ದೂರವಾಯಿತು.

ಬಂದ ಪಗಾರದಲ್ಲಿ ತಿಂಗಳು ತಳ್ಳುವುದೆ ಕಷ್ಟವಾಗಿರುವ ನನಗೆ ಅದನ್ನು ಕಳೆದುಕೊಂಡರೆ ಹೇಗಪ್ಪಾ ಎಂದು ಚಿಂತಾಕ್ರಾಂತನಾಗಿದ್ದಾಗ ನನಗೆ ಶಿಕಾರಿಪುರದ ಈ ಘಟನೆಯ ನೆನಪು ಬಂದು ಇಂದಿಗೂ ಮನಸ್ಸು ತುಂಬಿರುತ್ತದೆ.

ಎಂ.ಪಿ.ಧನಂಜಯ

ಎಂದಿನಂತೆ ಕೆಲಸಕ್ಕೆ ಹೊರಟಿದ್ದೆ. ಬೆಳಗಿನ ಹತ್ತು ಗಂಟೆ. ನೋಡಲು ತುಂಬ ಶಿಸ್ತಿನ ಮನುಷ್ಯ, ಸಂಭಾವಿತ ಎಂದೆನಿಸಿಕೊಳ್ಳುವ ನಡುವಯಸ್ಸಿನ ವ್ಯಕ್ತಿಯೊಬ್ಬರು, ''ಸಾರ್, ಬೆಂಗಳೂರಿನ ಕಾಲೇಜೊಂದರಲ್ಲಿ ನಾನು ಪ್ರಾಧ್ಯಾಪಕನಾಗಿದ್ದೇನೆ. ನಿಮ್ಮೂರಿನ ಬಸ್ ಸ್ಟ್ಯಾಂಡಿನಲ್ಲಿ ನಾನು ತಂದ ಹಣವೆಲ್ಲ ಪಿಕ್ ಪಾಕೆಟ್ ಆಗಿ ಹೋಯಿತು. ದಯವಿಟ್ಟು ಒಂದು ಐವತ್ತು ರೂಪಾಯಿ ಸಾಲವಾಗಿ ಕೊಡಿ. ನಿಮ್ಮ ವಿಳಾಸವನ್ನು ಕೊಡಿ. ಊರಿಗೆ ಹೋದ ತಕ್ಷಣ ನಿಮಗೆ ಹಣವನ್ನು ಕಳಿಸುತ್ತೇನೆ,'' ಎಂದರು ಅಳುತ್ತಾ.

ಈ ಹಿಂದೆ ''ಇಂಥ'' ವ್ಯಕ್ತಿಗಳಿಗೆ ಮಾನವ ಸಮಾಜದ ಕರುಣೆ ತೋರಿ ನಾನು ನೀಡಿದ ಹಣ ''ಗುಳುಂ'' ಆಗಿದ್ದು ಜ್ಞಾಪಕಕ್ಕೆ ಬಂದಿತು. ಆದರೂ ಈ ಮನುಷ್ಯ ಸಂಭಾವಿತ, ಪ್ರಾಮಾಣಿಕ ಎಂದು ನನ್ನ ಒಳಮನಸ್ಸು ಹೇಳಿತು. ಹಿಂದೆಮುಂದೆ ನೋಡದೆ ಆತನಿಗೆ ಐವತ್ತು ರೂಪಾಯಿಗಳನ್ನು ನೀಡಿದೆ. ಅಲ್ಲದೆ ಆತನ ವಿಳಾಸ ಪಡೆಯಲು ಮರೆಯಲಿಲ್ಲ. ಈ ಘಟನೆ ನಡೆದು ಹತ್ತು ದಿವಸವಾದರೂ ನಾನು ನೀಡಿದ ವಿಳಾಸಕ್ಕೆ ಹಣ ಬರಲಿಲ್ಲ. ಆಗ ಆತನ ಈ ಮೋಸ ಮಾಡುವ ಕೀಳು ನಡುವಳಿಕೆಯನ್ನು ಖಾರವಾದ ಪದಗಳಿಂದ ಖಂಡಿಸಿ ಆ ವಿಳಾಸಕ್ಕೆ ಒಂದು ಕಾಗದ ಬರೆದೆ. ವಿಚಿತ್ರವೆಂಬಂತೆ ಮಾರನೆಯ ದಿವಸವೇ ನನ್ನ ವಿಳಾಸಕ್ಕೆ 50 ರೂಪಾಯಿಗಳ ಎಂ.ಓ. ಬಂತು. ವೃಥಾ ಅವಸರಪಟ್ಟು ಅವರಿಗೆ ಖಾರವಾಗಿ ಬರೆದದ್ದಕ್ಕಾಗಿ ದುಃಖವಾಯಿತು. ಆತ ಪ್ರತ್ಯೇಕವಾಗಿ ಒಂದು ಪತ್ರವನ್ನೂ ಬರೆದು, ''ತಿಂಗಳ ಸಂಬಳ ತಡವಾದ್ದರಿಂದ ನಿಮಗೆ ಹಣ ಕಳಿಸುವುದು ತಡವಾಗಿದೆ. ದಯವಿಟ್ಟು ಮನ್ನಿಸಿ. ನಿಮ್ಮ ಉಪಕಾರಕ್ಕೆ ನಾನು ಕೃತಜ್ಞ. ಅವಶ್ಯವಾಗಿ ಬೆಂಗಳೂರಿಗೆ ಬಂದಾಗ ನನ್ನನ್ನು ಭೇಟಿಯಾಗಬೇಕು'' ಎಂದೂ ಬರೆದಿದ್ದರು. ನಾನು ನಾಚಿಕೆಯಿಂದ ತಲೆತಗ್ಗಿಸಿದೆ.

ಎಸ್ಸಾರ್ ವಾಸುದೇವರಾವ್

# ಹೀಗೂ ಒಂದು ಲೆಕ್ಕ

ಡಿ.ಎಸ್.ಶಿವಸ್ವಾಮಿರಾವ್

ನಾನು ಹುಡುಗನಾಗಿದ್ದಾಗ ನನ್ನ ಕುತೂಹಲವನ್ನು ಕೆರಳಿಸಿದ್ದ ಹಲವು ಸಂಗತಿಗಳ ಪೈಕಿ 'ಇಂದ್ರ-ವಾಯು' ಲೆಕ್ಕವೂ ಒಂದು. ದುರದೃಷ್ಟವಶಾತ್ ಈ ಲೆಕ್ಕದ ಸಮಾಚಾರ ಏನೆಂದು ತಿಳಿದುಕೊಂಡು ಕುತೂಹಲವನ್ನು ತಣಿಸಿಕೊಳ್ಳುವ ಮಾರ್ಗ ನನ್ನ ಪಾಲಿಗೆ ಬರಿದಾಗಿತ್ತು. ಅಂದಿನ ನನ್ನ ಆ ಅಸಹಾಯಕತೆಗೆ ಕಾರಣ ನನ್ನ ಕುತೂಹಲವನ್ನು ಕೆರಳಿಸಿದ್ದ ಒಂದು ಸರ್ವಜ್ಞನ ಪದ.

**ಅಡಿಯ ನಿಮ್ಮಡಿ ಮಾಡಿ**
**ಒಡಗೂಡಿ ಹನ್ನೊಂದ। ಇನ್ನೂರ ಹತ್ತಕ್ಕೆ ಭಾಗಿಸಲು**
**ನಡೆವ ಗಳಿಗೆ ಬಂದಕ್ಕು ಸರ್ವಜ್ಞ॥**

ಸರ್ವಜ್ಞನ ಪದಗಳ ಸಂಗ್ರಹದಲ್ಲಿ ಈ ಪದ್ಯವನ್ನು ನೋಡಿ, ಅದರ ಅರ್ಥವನ್ನು ಕೇಳಿದಾಗ ದೊಡ್ಡಪ್ಪ ಹೇಳಿದ್ದರು: ''ನೋಡು, ಅಡಿಯ ನಿಮ್ಮಡಿ ಮಾಡಿ ಎಂದರೆ, ಸೂರ್ಯನಿಂದಾಗಿ ಬಿದ್ದ ನಮ್ಮ ಶರೀರದ ನೆರಳನ್ನು ಹೆಜ್ಜೆಯಿಂದ ಅಳೆದು, ಬಂದ ಸಂಖ್ಯೆಯನ್ನು ದ್ವಿಗುಣಗೊಳಿಸಿ 210ನ್ನು ಭಾಗಿಸಿದರೆ ನಡೆಯುವ ಗಳಿಗೆ ತಿಳಿಯುತ್ತದೆ,'' ಎಂದು.

ಸರಿ, ಕುತೂಹಲವನ್ನು ತಣಿಸಿಕೊಳ್ಳಲು ನನ್ನ ನೆರಳಿನ ಉದ್ದವನ್ನು ಹೆಜ್ಜೆಯಿಂದ ಅಳೆದು, ಬಂದ ಸಂಖ್ಯೆಯನ್ನು ಇಮ್ಮಡಿ ಮಾಡಿ 210ನ್ನು ಭಾಗಿಸಿದ್ದಾಯಿತು. ಆದರೆ ಬಂದ ಸಂಖ್ಯೆ ಗಳಿಗೆ ಹೇಗಾಯಿತು ಎಂಬುದು ಮಾತ್ರ ಗೊತ್ತಾಗಲಿಲ್ಲ. ಇರಲಿ ಎಂದು ತಂದೆಯವರನ್ನು ಕೇಳಿದ್ದಾಯಿತು. ಅವರು ಒಮ್ಮೆ ಸಮಾಧಾನದಿಂದ ಹೇಳಿದ್ದರು: ''ಎರಡೂವರೆ ಗಳಿಗೆಗೆ ಎಂದರೆ ಒಂದು ಗಂಟೆ. ನಡೆಯುವ ಗಳಿಗೆ ಎಂದರೆ ಸೂರ್ಯೋದಯದ ನಂತರ ಎಷ್ಟು ಗಳಿಗೆಗಳು ಕಳೆದಿವೆ ಎಂಬುದು ಈ ಪದ್ಧತಿಯಲ್ಲಿ ಹೇಳಿದ ಲೆಕ್ಕಾಚಾರದಿಂದ ತಿಳಿಯುತ್ತದೆ.'' ಎಂದು. ಆದರೆ ಇದರಿಂದಲೂ ನಮ್ಮ ಲೆಕ್ಕ ತಾಳೆಯಾಗಲಿಲ್ಲ. ಮತ್ತೊಮ್ಮೆ ತಂದೆಯವರು ಸಮಾಧಾನದಿಂದಲೇ ಹೇಳಿದರು: ''ಗಳಿಗೆಗಳನ್ನು ಭಾಗಿಸಿದ ಶೇಷ ವಿಗಳಿಗೆಗಳಾಗುತ್ತವೆ.'' ಎಂದ[illegible]. ಅದರಿಂದಲೂ ಈ ಲೆಕ್ಕದ ಸಮಾಧಾನ

ಅರ್ಥ ಬಗೆಹರಿಯದೆ ಪರಿಹಾರಕ್ಕಾಗಿ ಮತ್ತೆ ತಂದೆಯವರನ್ನೇ ಮೊರೆಹೊಕ್ಕಾಗ ಅವರು; ''ಸರಿ, ನಿನಗೇನಾದ್ರೂ ಹೇಳಿದರೆ ಅದರ ತಲೆ-ಬುಡ ಎಲ್ಲಾ ಶೋಧಿಸೋಕೆ ಹೋಗ್ತೀಯ; ಹೋಗೋ ಸಾಕು,'' ಎಂದು ಅಸಹನೆಯಿಂದ ಗದರಿಸಿದ್ದರು. ಅಲ್ಲಿಗೆ ಆ ಪದ್ಯದ ಅರ್ಥದ ಬಗ್ಗೆ ವೈರಾಗ್ಯ ಮೂಡಿಬಂದಿತ್ತಷ್ಟೇ ಅಲ್ಲ, ಇಂಥ ಬೇರೆ ಯಾವುದೇ ವಿಚಾರವನ್ನು ತಂದೆಯವರೆದುರು ಪ್ರಸ್ತಾಪಿಸುವ ಧೈರ್ಯಬಾರದಾಯಿತು.

ಇಂತಹ ಸಂದರ್ಭದಲ್ಲಿಯೇ ಕಿವಿಗೆ ಬಿದ್ದಿತ್ತು. ಈ ''ಇಂದ್ರ - ವಾಯು'' ಲೆಕ್ಕ. ಆ ಹುಡುಗುತನದಲ್ಲಿ ಈ ಹೆಸರಿನಲ್ಲಿಯೇ ಏನೋ ಒಂದು ಮೋಡಿ, ಒಂದು ನಿಗೂಢ ಆಕರ್ಷಣೆ ಅಡಗಿದಂತಿತ್ತು. ಇದರ ರಹಸ್ಯವನ್ನು ಎಂದಾದರೊಂದು ದಿನ ಭೇದಿಸಬಹುದೆಂಬ ಆಸೆ ಮನಸ್ಸಿನಲ್ಲಿ ಇದ್ದೇಇತ್ತು. ಒಮ್ಮೆ ನಮ್ಮ ಸಂಬಂಧಿಕರೊಬ್ಬರು ತಂದೆಯವರೊಂದಿಗೆ ಮಾತನಾಡುತ್ತಾ ಯಾರನ್ನೋ ಕುರಿತು ಹೇಳುವಾಗ, ''ಅದೇ ಆ 'ಇಂದ್ರ - ವಾಯು' ಲೆಕ್ಕದವರು,'' ಎಂದು ಹೇಳಿದ್ದರು. ಆದರೂ ಪ್ರಸಂಗವಶಾತ್ ಅವರನ್ನು ಆಗ ಆ ಬಗ್ಗೆ ಕೇಳಲಾಗಲಿಲ್ಲ. ಅಷ್ಟೇ ಅಲ್ಲ, ಎಷ್ಟೋ ವರ್ಷಗಳ ವರೆಗೆ ಈ ವಿಚಾರ ನನ್ನ ಪಾಲಿಗೆ ಚಿದಂಬರ ರಹಸ್ಯವಾಗಿಯೇ ಉಳಿಯಿತು.

ಆದರೆ ಸುದೈವದಿಂದ ಈ ರಹಸ್ಯ ತಾನಾಗಿಯೇ ಬಯಲಾಗುವ ಸಂದರ್ಭವೊಂದು ಒದಗಿಬಂತು. ನಮ್ಮ ಮನೆಯಲ್ಲಿ ಯಾವುದೋ

| 51 | 46 | 53 | 6 | 1 | 8 | 69 | 64 | 71 |
|---|---|---|---|---|---|---|---|---|
| 52 | 50 | 48 | 7 | 5 | 3 | 70 | 68 | 66 |
| 47 | 54 | 49 | 2 | 9 | 4 | 65 | 72 | 67 |
| 60 | 55 | 62 | 42 | 37 | 44 | 24 | 19 | 26 |
| 61 | 59 | 57 | 43 | 41 | 39 | 25 | 23 | 21 |
| 56 | 63 | 58 | 38 | 45 | 40 | 20 | 27 | 22 |
| 15 | 10 | 17 | 78 | 73 | 80 | 33 | 28 | 35 |
| 16 | 14 | 12 | 79 | 77 | 75 | 34 | 32 | 30 |
| 41 | 18 | 13 | 74 | 81 | 76 | 29 | 36 | 31 |

ಚಿತ್ರ 1 ಹೇಗೇ ಕೂಡಿದರೂ 369

ಸಮಾರಂಭ ನಡೆದಿತ್ತು. ಅನೇಕ ಬಂಧುಗಳು ಬಂದಿದ್ದರು. ಆದಿನ ಮಧ್ಯಾಹ್ನದ ಊಟವನ್ನು ಮುಗಿಸಿ, ನಾನು ನಮ್ಮ ಇನ್ನೋರ್ವ ದೊಡ್ಡಪ್ಪ ಮತ್ತು ಹೆಚ್ಚು ಕಡಿಮೆ ನನ್ನ ಓರಗೆಯ ಬಂಧುಗಳೋರ್ವರು - ಮೂರು ಜನವೂ - ರೂಮಿನಲ್ಲಿ ವಿಶ್ರಾಂತಿಗೆಂದು ಮಲಗಿದ್ದೆವಾದರೂ ಯಾರಿಗೂ ನಿದ್ರೆ ಬರುವ ಸಂಭವವಿರಲಿಲ್ಲ. ಹೀಗಾಗಿ ನಮ್ಮ ದೊಡ್ಡಪ್ಪನವರು ಎದ್ದು ಕುಳಿತು, ''ನಾನು ಒಂದು ಲೆಕ್ಕವನ್ನು ಹೇಳುತ್ತೇನೆ; ಸಾಧ್ಯವಾದರೆ ಇದನ್ನು ಬಿಡಿಸಿ ನೋಡೋಣ,'' ಎಂದರು. ನಾವೆಲ್ಲ ''ಸರಿ'' ಎಂದೆವು.

ಅವರು ಹೇಳಿದ ಸಮಸ್ಯೆಯ ಸಾರಾಂಶ ಹೀಗಿತ್ತು: ಒಬ್ಬ ಶ್ರೀಮಂತನ ಬಳಿ 81 ಹಸುಗಳಿದ್ದವು. ವಿಶೇಷವೇನೆಂದರೆ, ಆ ಹಸುಗಳ ಪೈಕಿ, ಕ್ರಮವಾಗಿ ಒಂದು ಸೇರು, ಎರಡು ಸೇರು, ಮೂರು ಸೇರು..... ಮತ್ತು 81 ಸೇರು ಹಾಲು ಕರೆಯುವ ಹಸುಗಳು ಸಹ ಇದ್ದವು. ಆ ಶ್ರೀಮಂತನಿಗೆ ಒಂಬತ್ತು ಜನ ಮಕ್ಕಳು. ಆತ ಸಾಯುವಾಗ ತನ್ನೆಲ್ಲ ಮಕ್ಕಳನ್ನು ಕರೆದು, ''ನೀವು ಈ 81 ಹಸುಗಳನ್ನು ಸಮವಾಗಿ ಹಂಚಿಕೊಳ್ಳಿ; ಅಷ್ಟೇ ಅಲ್ಲ, ಇದರಿಂದ ನಿಮಗೆ ಸಿಗುವ ಹಾಲು ಸಮನಾಗಿರುವಂತೆ ನೋಡಿಕೊಳ್ಳಿ,'' ಎಂದು ತಿಳಿಸಿ ಕೊನೆಯುಸಿರನ್ನೆಳೆದ.

ಹೀಗೆ ಹೇಳಿದ ನಮ್ಮ ದೊಡ್ಡಪ್ಪ, ''ಈಗ ಈ ಹಸುಗಳನ್ನು ಆ ಶ್ರೀಮಂತನ ಮಕ್ಕಳು ಹೇಗೆ ಹಂಚಿಕೊಂಡರೆಂಬುದನ್ನು ಹೇಳಿ ನೋಡೋಣ,'' ಎಂದು ಹೇಳಿ ಸುಮ್ಮನಾದರು. ನನ್ನ ಇನ್ನೋರ್ವ ಬಂಧುಗಳು ಹಳೆಯ ಕಾಲದ ಇಂಟರ್‌ಮೀಡಿಯೇಟ್ ಓದಿದವರು. ಗಣಿತ ಅವರ ಅಚ್ಚುಮೆಚ್ಚಿನ ವಿಷಯ. ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷೆಯಲ್ಲಿ ಗಣಿತದಲ್ಲಿ 100ಕ್ಕೆ 100 ಅಂಕಗಳನ್ನು ಪಡೆದವರು. ಅವರಿಗೂ ಈ ಸಮಸ್ಯೆಗೆ ಕೂಡಲೇ ಉತ್ತರ ಹೊಳೆಯಲಿಲ್ಲ. ಅಕಸ್ಮಾತ್ತಾಗಿ ಇದು ಮಾಯಾಚೌಕಕ್ಕೆ ಸಂಬಂಧಿಸಿದ ಸಮಸ್ಯೆಯೆಂದೂ, 9-9 ಮನೆಗಳ ಮಾಯಾಚೌಕವನ್ನು ಬಿಡಿಸಲು ಸಾಧ್ಯವಾದರೆ ಈ ಸಮಸ್ಯೆಯನ್ನು ಸುಲಭವಾಗಿ ಬಿಡಿಸಬಹುದೆಂದೂ ನನಗೆ ಹೊಳೆಯಿತು. ಇದಕ್ಕೆ ಮೊದಲೇ ಮಾಯಾಚೌಕಗಳನ್ನು ತುಂಬುವ ಬಗ್ಗೆ ಸ್ವಲ್ಪ ಪರಿಚಿತನಾಗಿದ್ದುದರಿಂದಲೂ, ಇದು ಬೆಸಸಂಖ್ಯೆಯ ಮನೆಗಳುಳ್ಳ ಮಾಯಾಚೌಕವಾದುದರಿಂದಲೂ, ಇದನ್ನು ಸುಲಭವಾಗಿಯೇ ಚಿತ್ರ 1ರಲ್ಲಿ ತೋರಿಸಿರುವಂತೆ ತುಂಬಿ ಅವರ ಸಮಸ್ಯೆಗೆ ಸರಿಯುತ್ತರವನ್ನು ನೀಡಿದೆ. ಆದರೆ ದೊಡ್ಡಪ್ಪನವರಿಗೆ ಇದರಿಂದ ಅಷ್ಟೇನೂ ಸಮಾಧಾನವಾಗಲಿಲ್ಲ. ಅದಕ್ಕೆ ಬದಲಾಗಿ ಈ ಮಾಯಾಚೌಕವನ್ನು ತುಂಬಲು ಸಂಸ್ಕೃತ ಶ್ಲೋಕವೊಂದನ್ನು ಹೇಳಿ ತಾವು ಬೇರೆ ವಿಧಾನದಿಂದ ಮಾಯಾಚೌಕವನ್ನು ತುಂಬುವ ಕ್ರಮವನ್ನು ವಿವರಿಸಿದರು. ಹೀಗಾಗಿ ಇಂದ್ರ - ವಾಯು ಲೆಕ್ಕದ ಚಿದಂಬರ ರಹಸ್ಯ ತಾನಾಗಿಯೇ ಬಯಲಾಯಿತು. ಆ ಸಂಸ್ಕೃತ ಶ್ಲೋಕ ಹೀಗಿದೆ:

**ಇಂದ್ರೋ ವಾಯು ಯಮಶ್ಚೈವ**
**ನೈರುತ್ಯೋಮಧ್ಯಮೇವಚ**
**ಈಶಾನ್ಯಶ್ಚ ಕುಬೇರಶ್ಚ ಅಗ್ನಿರ್ವರುಣಮೇವಚ**

**ಶ್ಲೋಕವನ್ನು ಅನ್ವಯಿಸುವ ವಿಧಾನ:**

ಇಲ್ಲಿ ಕೊಟ್ಟಿರುವ ಚಿತ್ರಗಳನ್ನು ನೋಡಿ. 9-9ರ ಚೌಕವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅದು 3-3ರ 9 ಸಣ್ಣ ಸಣ್ಣ ಚೌಕಗಳಿಂದ ಆಗಿರುವುದು ಕಂಡುಬರುತ್ತದೆ. ಅಂದರೆ ಈ ಪ್ರತಿ 9 ಸಣ್ಣ ಚೌಕಗಳಲ್ಲೂ 9-9 ಮನೆಗಳಿರುತ್ತವೆ.

ಶ್ಲೋಕದಲ್ಲಿ ಅಷ್ಟದಿಕ್ಪಾಲಕರ ಹೆಸರುಗಳು (ಇಂದ್ರ, ವಾಯು, ಯಮ, ನೈರುತ್ಯ, ಈಶಾನ, ಕುಬೇರ, ಅಗ್ನಿ ಮತ್ತು ವರುಣ) ಇವೆ. ಹಾಗೂ ಮಧ್ಯ ಎಂಬ ಒಂದು ದಿಕ್ಕೂ ಅಥವಾ ಹೆಸರೇ ಸೂಚಿಸುವಂತೆ ಮಧ್ಯ ಭಾಗವನ್ನು ಸೂಚಿಸುತ್ತದೆ. ಇಂದ್ರನು ಪೂರ್ವ ದಿಕ್ಕಿನ ಅಧಿಪತಿಯಾದ್ದರಿಂದ ಪೂರ್ವ ದಿಕ್ಕನ್ನು ಇಂದ್ರ ದಿಕ್ಕು ಎಂದೂ ಕರೆಯುತ್ತಾರೆ. ಹೀಗೆಯೇ ವಾಯುವು ವಾಯುವ್ಯ ದಿಕ್ಕನ್ನೂ ಯಮನು




ಚಿತ್ರ - 2.

ದಕ್ಷಿಣ ದಿಕ್ಕನ್ನೂ ಕುಬೇರನು ಉತ್ತರ ದಿಕ್ಕನ್ನೂ ಪ್ರತಿನಿಧಿಸುತ್ತಾನೆ. ಈಶಾನ್ಯ ಹಾಗೂ ಅಗ್ನಿ ಕ್ರಮವಾಗಿ ಈಶಾನ ಮತ್ತು ಆಗ್ನೇಯ ದಿಕ್ಕನ್ನೂ ವರುಣನು ಪಶ್ಚಿಮ ದಿಕ್ಕನ್ನೂ ಪ್ರತಿನಿಧಿಸುತ್ತಾನೆ.

81 ಮನೆಯ ಚೌಕವನ್ನು 3-3 ಮನೆಗಳ 9 ಸಣ್ಣ ಚೌಕವನ್ನಾಗಿ ಕಲ್ಪಿಸಿದ ನಂತರ, ಈ 9 ಚೌಕಗಳಲ್ಲಿ ಯಾವ ಚೌಕವನ್ನು ಮೊದಲು ತುಂಬಬೇಕು ಎಂಬ ಪ್ರಶ್ನೆಯೇಳುತ್ತದೆ. ಇದಕ್ಕೆ ಶ್ಲೋಕದಲ್ಲಿರುವ ಮೊದಲ ಸಾಲು ಇಂದ್ರೋ ಎಂಬುದು ಉತ್ತರ ನೀಡುತ್ತದೆ. ಇಂದ್ರ ದಿಕ್ಕಿನ ಚೌಕವನ್ನು ಮೊದಲು ತುಂಬಲು ಪ್ರಾರಂಭಿಸಿದ ನಂತರ, ಯಾವ ಕ್ರಮದಲ್ಲಿ ತುಂಬಬೇಕು ಎಂಬ ಪ್ರಶ್ನೆಗೂ ಸಹ ಈ ಶ್ಲೋಕವೇ ಉತ್ತರ ನೀಡುತ್ತದೆ. ಅಂದರೆ ಶ್ಲೋಕದಲ್ಲಿರುವ ದಿಕ್ಕುಗಳ ಕ್ರಮದಲ್ಲಿಯೇ ಮನೆಗಳನ್ನು ತುಂಬಬೇಕು.

ಇಂದ್ರ ದಿಕ್ಕಿನ ಚೌಕವನ್ನು ಮೊದಲು. ಆಮೇಲೆ ವಾಯು, ಆಮೇಲೆ ಯಮ, ಆಮೇಲೆ ನೈರುತ್ಯ ಈ ಕ್ರಮದಲ್ಲಿ ವರುಣ ಎಂಬವರೆಗೆ ತುಂಬಬೇಕು. ಅಲ್ಲಿಗೆ 9 ಅಂಕೆಗಳಾಗಿರುತ್ತ. 10ನೆಯ ಸಂಖ್ಯೆಯನ್ನು ಎಲ್ಲಿಂದ ಪ್ರಾರಂಭಿಸಬೇಕೆಂದರೆ ಇದಕ್ಕೂ ಶ್ಲೋಕವೇ ಉತ್ತರ ಹೇಳುತ್ತದೆ. ಇಂದ್ರ ಎಂಬ ಸಣ್ಣ ಚೌಕವನ್ನು ತುಂಬಿದ ಮೇಲೆ, ವಾಯು ಎಂಬ ಸಣ್ಣ ಚೌಕವನ್ನು ತುಂಬಲು ಪ್ರಾರಂಭಿಸಬೇಕು. 10 ಎಂಬ ಸಂಖ್ಯೆಯನ್ನು ಇಂದ್ರ ಎಂಬ ಮನೆಯಲ್ಲಿಯೂ, ಹನ್ನೊಂದನ್ನು ವಾಯುವ್ಯ ದಿಕ್ಕಿನಲ್ಲಿಯೂ ಹನ್ನೆರಡನ್ನು ಯಮ ಎಂದರೆ ದಕ್ಷಿಣ ದಿಕ್ಕಿನಲ್ಲಿನ ಮನೆಯಲ್ಲಿಯೂ ಶ್ಲೋಕದಲ್ಲಿರುವ ಕ್ರಮದಲ್ಲಿಯೇ ತುಂಬಬೇಕು. ಹಾಗೆಯೇ 18 ಮನೆಗಳ

ನಂತರ, 19 ಎಂಬ ಸಂಖ್ಯೆಯನ್ನು ಯಮ ಎಂದರೆ ದಕ್ಷಿಣ ದಿಕ್ಕಿನ ಚೌಕದಲ್ಲಿ ಶ್ಲೋಕದಲ್ಲಿ ಹೇಳಿರುವಂತೆ ಎಂದರೆ ಇಂದ್ರೋ ವಾಯು... ಕ್ರಮದಲ್ಲಿಯೇ ತುಂಬಬೇಕು. ಹೀಗೆ ಕ್ರಮವಾಗಿ ತುಂಬಿದಾಗ 81 ಎಂಬ ಸಂಖ್ಯೆ ವರುಣ ದಿಕ್ಕಿನ ಚೌಕದಲ್ಲಿ ವರುಣನ ಸ್ಥಾನದಲ್ಲಿಯೇ ಬರುತ್ತದೆ.

ಸಮಸ್ಯೆ ಒಂದು ಸೇರಿನಿಂದ 81 ಸೇರಿನ ಹಾಲು ಕರೆಯುವ ಹಸುಗಳನ್ನು 9 ಜನ ಮಕ್ಕಳು ಹಾಲು ಸಹ ಸಮ ಪ್ರಮಾಣದಲ್ಲಿ ಬರುವಂತೆ ಹೇಗೆ ಹಂಚಿಕೊಳ್ಳಬೇಕು? ಎಂದಿರುವುದರಿಂದ, ಒಂದು ಸೇರು ಹಾಲು ಕರೆಯುವ ಹಸುವನ್ನು ಇಂದ್ರ ದಿಕ್ಕಿನ ಚೌಕದಲ್ಲಿ ಇಂದ್ರ ಸ್ಥಾನದಲ್ಲಿಯೂ ಉಳಿದ ಹಸುಗಳನ್ನು ವಾಯು, ಯಮ ಇತ್ಯಾದಿ ಕ್ರಮದಲ್ಲಿ ನಿಲ್ಲಿಸಬೇಕೆಂದು, ಅನಂತರ 9 ಸಾಲುಗಳಲ್ಲಿ ಬರುವ ಹಸುಗಳನ್ನು ಒಬ್ಬೊಬ್ಬರು ಒಂದೊಂದು ಸಾಲಿನ ಹಸುವನ್ನು ತೆಗೆದುಕೊಂಡಲ್ಲಿ ಸಮಸ್ಯೆ ಬಗೆಹರಿಯುತ್ತದೆ. ಪ್ರತಿಯೊಬ್ಬರಿಗೂ 369 ಸೇರು ಹಾಲು ಸಿಗುತ್ತದೆ. ಇನ್ನೂ ಒಂದು ಮೋಜಿನ ವಿಷಯವೆಂದರೆ, ಈ ಸಣ್ಣ ಚೌಕಗಳೂ ತಮಗೆ ತಾವೇ ಮಾಯಾ ಚೌಕಗಳಾಗಿವೆ. ಉದಾಹರಣೆಗೆ ಇಂದ್ರ ದಿಕ್ಕಿನಲ್ಲಿರುವ 3-3 ಮನೆಯಲ್ಲಿ ಯಾವ ಉದ್ದ ಸಾಲನ್ನಾಗಲಿ ಅಥವಾ ಅಡ್ಡ ಸಾಲನ್ನಾಗಲಿ ಕೂಡಿದರೂ ಮೂಲೆಯ ಮೇಲೆ ಕೂಡಿದರೂ 15 ಬರುತ್ತದೆ. ವಾಯುವ್ಯ ದಿಕ್ಕಿನ ಮಾಯಾ ಚೌಕದಲ್ಲಿ ಹೇಗೆ ಕೂಡಿದರೂ 42 ಬರುತ್ತದೆ. ಯಮ ಈ ಮಾಯಾಚೌಕದ 69ನ್ನು ಕೊಡುತ್ತದೆ. ನೈರುತ್ಯ ದಿಕ್ಕಿನ ಮಾಯಾಚೌಕ 96ರ ಸಂಖ್ಯೆಯದು. ಮಧ್ಯದಲ್ಲಿರುವ ಮಾಯಾಚೌಕ 123ರ ಸಂಖ್ಯೆಯದು. ಈಶಾನ್ಯ ದಿಕ್ಕಿನ ಮಾಯಾ ಚೌಕ 150ರ ಸಂಖ್ಯೆಯದು. ಕುಬೇರ ಮಾಯಾ

| | | | | | | | | |
|---|---|---|---|---|---|---|---|---|
| | | | | | | | | |
| ಈ | ಶಾ | ನ್ಯ | | ಇಂ | ದ್ರ | | ಅ | ಗ್ನಿ |
| | | | | | | | | |
| | | | | | | | | |
| ಕು | ಬೇ | ರ | | ಮ | ಧ್ಯ | | ಯ | ಮ |
| | | | | | | | | |
| | | | | | | | | |
| ವಾ | ಯು | | ವ | ರು | ಣ | ನೈ | ರು | ತ್ಯ |
| | | | | | | | | |

ಚಿತ್ರ 3

| ಈ | ಇಂ | ಅ | ಈಶಾನ್ಯ | ಇಂದ್ರ | ಅಗ್ನಿ | ಈ | ಇಂದ್ರ | ಅ |
|---|---|---|---|---|---|---|---|---|
| ಕು | ಮ | ಯ | ಕುಬೇರಶ್ಯ | ಮಧ್ಯ | ಯಮ | ಕು | ಮ | ಯ |
| ವಾ | ವ | ನೈ | ವಾಯು | ವರುಣ | ನೈರುತ್ಯ | ವಾ | ವ | ನೈ |
| ಈ | ಇಂ | ಅ | ಈ | ಇಂ | ಅ | ಈ | ಇಂ | ಅ |
| ಕು | ಮ | ಯ | ಕು | ಮ | ಯ | ಕು | ಮ | ಯ |
| ವಾ | ವ | ನೈ | ವಾ | ವ | ನೈ | ವಾ | ವ | ನೈ |
| ಈ | ಇ | ಅ | ಈ | ಇಂ | ಅ | ಈ | ಇಂ | ಅ |
| ಕು | ಮ | ಯ | ಕು | ಮ | ಯ | ಕು | ಮ | ಯ |
| ವಾ | ವ | ನೈ | ವಾ | ವ | ನೈ | ವಾ | ವ | ನೈ |

ಚಿತ್ರ 4

ಚೌಕ 177ಅನ್ನು ಕೊಡುತ್ತದೆ. ಆಗ್ನೇಯದಿಕ್ಕಿನ ಮಾಯಾಚೌಕ 204ಅನ್ನು ಕೊಡುತ್ತದೆ. ವರುಣ ದಿಕ್ಕಿನ ಮಾಯಾಚೌಕ 231ಅನ್ನು ಕೊಡುತ್ತದೆ.

ಜರ್ಮನಿಯ ಆಧುನಿಕ ಗಣಿತ ಶಾಸ್ತ್ರಜ್ಞರು 3 ಮನೆಗಳಿಂದ ಹಿಡಿದು ಎಷ್ಟೋ ಮನೆಯ ಮಾಯಾಚೌಕಗಳನ್ನಾಗಲಿ ತುಂಬಲು ಶಾಸ್ತ್ರೀಯ ವಿಧಾನಗಳನ್ನು ಶೋಧಿಸಿದ್ದಾರೆ. ಆ ಪೈಕಿ ಬೆಸಸಂಖ್ಯೆಯ ಮನೆಗಳ ಚೌಕವನ್ನು ತುಂಬುವುದು ಬಹಳ ಸುಲಭವಾದ ಕೆಲಸ. ಸಮ ಸಂಖ್ಯೆಯ ಮನೆಗಳನ್ನು ತುಂಬುವುದು ಕೊಂಚ ಕಷ್ಟಕರ. ಆದರೆ 9-9-ರ ಚೌಕವನ್ನು ಶ್ಲೋಕದ ಪ್ರಕಾರ ತುಂಬಿದಾಗ ಉಂಟಾಗುವ 9 ಸಣ್ಣ ಚೌಕಗಳು ಸಹ ಮಾಯಾ ಚೌಕಗಳಾಗಿವೆಯೆಂಬುದೆ ನಮ್ಮ ಈ ಭಾರತೀಯ ಕ್ರಮದ ವೈಶಿಷ್ಟ್ಯ. ಎಷ್ಟು ಸೋಜಿಗದ ವಿಷಯ! ಭಾರತೀಯರಾದ ನಮ್ಮ ಪೂರ್ವಜರು ಎಂಥ ಮೇಧಾವಿಗಳು! ಏನಿದ್ದರೂ ಪ್ರಪಂಚದ ಗಣಿತ ಲೋಕಕ್ಕೆ ಶೂನ್ಯದ ಕೊಡುಗೆಯಿತ್ತವರಲ್ಲವೇ ನಮ್ಮ ಭಾರತೀಯರು! ಇಲ್ಲವಾದಲ್ಲಿ ದೊಡ್ಡ ಸಂಖ್ಯೆಗಳನ್ನು ಬರೆಯಲು ಏನೇನು ಪಾಡುಪಡಬೇಕಿತ್ತು ಎಂಬುದು ಯಾರಿಗೆ ತಾನೇ ಗೊತ್ತಿಲ್ಲ?

---

ಅತಿಮಾನವನಾಗಲು ಯುಕ್ತಿ ಫಲೀಸದು. ಏಕೆ ಮನುಷ್ಯನಾಗುವುದು ಮುಖ್ಯ ಈ ಜಗತ್ತಿನಲ್ಲಿ

- ಆರ್ಟುರೊ ಟೊಸ್ಕಾನಿನಿ



# ಕಾಲಾ ಪಹಾಡ

**ಪ್ರಾ**ಚೀನ ಭಾರತದಲ್ಲಿ ಹಿಂದು-ಮುಸಲ್ಮಾನ ರಾಜರಲ್ಲಿ ಸತತ ಸಂಘರ್ಷ, ಮತಭ್ರಾಂತಿಯ ಕಾಲ. ಬಂಗಾಲದಲ್ಲಿ ಒಬ್ಬ ಮುಸಲ್ಮಾನ ರಾಜಪುತ್ರಿ ದುಲಾರಿ, ಹಿಂದೂ ಸೈನಿಕ ಕಾಲಚಂದನಲ್ಲಿ ಅನುರಕ್ತಳಾದಳು. ಅವಳನ್ನು ವಿವಾಹವಾದದ್ದಕ್ಕಾಗಿ ಬ್ರಾಹ್ಮಣ ಸಮಾಜ ಕಾಲಚಂದನಿಗೆ ಬಹಿಷ್ಕಾರ ಹಾಕಿತು. ಅವರ ಮೇಲೆ ಸೇಡು ತೀರಿಸಿಕೊಳ್ಳಲು ಆತ ಮುಸಲ್ಮಾನನಾಗಿ ಮೂರ್ತಿಭಂಜಕನಾದ. ಆತನ ಕೃತ್ಯಗಳಿಂದ ಮನನೊಂದ ಪತ್ನಿ ಕಾಲಚಂದನನ್ನು ಪರಿತ್ಯಜಿಸಿದುದರಿಂದ ಆತ ಏಕಾಕಿಯಾಗಿ, ಪಶ್ಚಾತ್ತಾಪಪಟ್ಟು ಕೊನೆಗೆ ಹಿಮಾಲಯ ಸೇರಿದ ದುರಂತ ಕಥೆಯಿದು.

**ಡಾ**ರ್ಜೀಲಿಂಗ್ ಜಿಲ್ಲೆಯ ಹಿಮಾಲಯ ಪರ್ವತ ಶ್ರೇಣಿಯಲ್ಲಿ ಉದ್ಭವಿಸುವ ಮಹಾನಂದಾ ನದಿ ನಿಧಾನವಾಗಿ ದಕ್ಷಿಣದತ್ತ ಹರಿಯುವುದು. ಉಗಮಸ್ಥಾನದಿಂದ ಎರಡು ನೂರಾ ಐವತ್ತು ಮೈಲಿ ಕ್ರಮಿಸಿದ ಬಳಿಕ ಕೊನೆಗೆ ಗೌರದಲ್ಲಿ ಗಂಗೆಯನ್ನು ಕೂಡುವುದು.

ಗೌರದಿಂದ ಕೆಲವು ಮೈಲು ದೂರ. ಆಗ್ನೇಯ ದಿಕ್ಕಿನಲ್ಲಿ ಮಹಾನಂದಾ ನದಿಯ ದಂಡೆಯ ಮೇಲೆ ಸುಲ್ತಾನ ಸುಲೆಮಾನ ಕರಾನಿಯ ರಾಜಧಾನಿಯಾದ ಟಾಂಡಾ ಪಟ್ಟಣವಿತ್ತು. [illegible]

ಶಕ್ತಿ. ಅನ್ಯಮತೀಯರನ್ನು ಮತಾಂತರಿಸುವ ಚಪಲ. ಸುಲ್ತಾನ ಸುಲೆಮಾನ್ ಸಾಧ್ಯವಿದ್ದಷ್ಟು ಹಿಂದುಗಳನ್ನು ಮತಾಂತರಿಸಿ, ಅವರಿಗೆ ಭೂಮಿಯಲ್ಲದೆ ಸಂಪತ್ತನ್ನೂ ಕಾಣಿಕೆಯಾಗಿತ್ತಿದ್ದ. ದೇವಾಲಯಗಳನ್ನು ಆತ ಭ್ರಷ್ಟಗೊಳಿಸದಿದ್ದರೂ ಮಂದಿರಗಳಲ್ಲಿ ಪೂಜೆ ನಡೆಸುವುದು ಕಠಿಣವಾಗಿತ್ತು. ಆತ ಬಲು ನಿಷ್ಠುರ. ಅವನ ಕ್ರೂರ ಶಾಸನದಲ್ಲಿ ರಾಜ್ಯ [illegible]

ಅವನ ಅಂತಃಪುರ ಸುಂದರ ಸ್ತ್ರೀಯರಿಂದ [illegible]. ಆತ ಕೆಲವರನ್ನು [illegible] ಕೆಲವರು ಆತನ ಉಪಭೋಗಕ್ಕಾಗಿ [illegible]

ದುಲಾರಿ ಹುಟ್ಟಿದ ಬಳಿಕ ಸುಲೆಮಾನ ಕರಾರ ಣಿಯ ಸ್ವಭಾವ ಸ್ವಲ್ಪಮಟ್ಟಿಗೆ ತಿಳಿಯಾಯಿತು. ಆತನ ಧರ್ಮಾಂಧತೆ ಸ್ವಲ್ಪ ಕಡಿಮೆಯಾಗಿ, ಅನ್ಯ ಮತೀಯರ ಬಗೆಗೆ ಹೆಚ್ಚು ಸೈರಣೆಯುಳ್ಳವನಾದ. ತನ್ನ ಸೇನೆಯಲ್ಲಿ ಹಿಂದೂಗಳನ್ನು ಭರ್ತಿ ಮಾಡಿಕೊಳ್ಳತೊಡಗಿದ.

ಉತ್ತರದ ಭಾದುರಿಯಾ ರಾಜ್ಯದಿಂದ ರೂಪವಂತನಾದ ಓರ್ವ ತರುಣ ಬ್ರಾಹ್ಮಣ ಬಂದು ಸುಲ್ತಾನನ ಸೈನ್ಯ ಸೇರಿ ತನ್ನ ಶೌರ್ಯ-ಪರಾಕ್ರಮಗಳಿಂದ ಫೌಜದಾರನ ದರ್ಜೆಗೆ ಏರಿದ. ಅವನ ಹೆಸರು ನಯನಚಂದ ರಾಯಚೌಧರಿ. ಅವನ ಪತ್ನಿ ವಂದಾನಾದೇವಿ; ಮಗನ ಹೆಸರು ಕಾಲಚಂದ. ಅವನದೊಂದು ಸುಖಿ ಸಂಸಾರ.

ಸುಲ್ತಾನ ಸುಲೆಮಾನ ಭಾರಿ ಮಹತ್ವಾಕಾಂಕ್ಷಿ. ಅವನಿಗೆ ಬಂಗಾಲವಷ್ಟೇ ಸಾಕಾಗಲಿಲ್ಲ. ದಕ್ಷಿಣದಲ್ಲಿ ಉತ್ಕಲದ ಮೇಲೆ ಅವನ ಕಣ್ಣು ಬಿದ್ದು ಆ ಕಡೆಗೆ ದಂಡಯಾತ್ರೆ ಮಾಡಿದ. ಆದರೆ ರಾಜಾ ಮುಕುಂದದೇವನಿಂದ ಪರಾಜಿತನಾಗಿ ತಿರುಗಿ ಓಡಿಬಂದ. ತನ್ನ ಸೋಲಿನಿಂದಾದ ಅಪಮಾನಕ್ಕಾಗಿ ಹಲ್ಲುಕಡಿಯುತ್ತ ಮತ್ತೆ ಹಡೆಯುತ್ತುವ ಹಂಚಿಕೆ ಹಾಕುತ್ತಿದ್ದ.

ಮಹಾನಂದಾ ನದಿ ತೀರದಲ್ಲಿರುವ ಅರಮನೆಯ ಮಹಡಿಯ ಮೇಲಿನ ದುಲಾರಿಯ ಕೋಣೆಯಿಂದ ನದಿ ಕಾಣಿಸುತ್ತಿತ್ತು. ಹುಡುಗಿಯಿದ್ದಾಗ ಆಕೆ ಮಹಾನಂದಾ ದಂಡೆಯ ಮೇಲೆ ಆಟವಾಡುತ್ತಿದ್ದಳು. ಬೆಳೆದು ಯುವತಿಯಾದಾಗ ಸಾಯಂಕಾಲ ನೀರಲ್ಲಿ ನಾವೆಯನ್ನು ಚಲಿಸುತ್ತ ವಿಹರಿಸುತ್ತಿದ್ದಳು. ಹದಿನೇಳರ ವಯಸ್ಸಿನಲ್ಲಿ ತನ್ನ ಕಿಟಕಿಯ ಬಳಿ ಕುಳಿತು ಮಂತ್ರಮುಗ್ಧಳಾದಂತೆ ನದಿಯನ್ನು ನೋಡುತ್ತಿರುತ್ತಿದ್ದಳು.

ನದಿಯೊಂದಿಗೆ ಆಕೆಗೆ ಯಾವುದೋ ಒಂದು ರೀತಿಯ ಆತ್ಮೀಯ ಭಾವ. ಸುಖಿಯಾಗಿದ್ದರೂ ಏಕಾಕಿ. ತಂದೆಯ ಅಚ್ಚುಮೆಚ್ಚಿನ ಪುತ್ರಿಯಾಗಿದ್ದಳು ನಿಜ. ತಾಯಿಗೂ ದುಲಾರಿಯೆಂದರೆ ಪಂಚಪ್ರಾಣ. ಆದರೂ ಆಕೆ ಏಕಾಕಿ. ಅವಳ ಏಕಾಂತತೆ ಅಸಹನೀಯವಾದಾಗ ನದಿಯೊಂದಿಗೆ ಮಾತನಾಡುತ್ತಿದ್ದಳು. ಅದರ ಗುಳು ಗುಳು ನಿನಾದದಲ್ಲಿ ಅವ್ಯಕ್ತ ಸ್ವರಗಳನ್ನು ಕೇಳಿಸಿಕೊಳ್ಳುತ್ತ ಲೋಕವನ್ನೇ ಮೈಮರೆಯುತ್ತಿದ್ದಳು.

ಈ ಹದಿನೇಳು ವರ್ಷಗಳಲ್ಲಿ ಸಂಭವಿಸಿದ ಘಟನೆಗಳು ಅನೇಕ. ಫೌಜದಾರ ನಯನಚಂದ ರಾಯಚೌಧರಿ ತೀರಿಕೊಂಡಿದ್ದ. ಅವನ ಪುತ್ರ ಸೈನ್ಯಸೇರಿ ಸಿಪಾಯಿಯಾಗಿದ್ದ. ಅಲ್ಲದೆ ಕಾಲಚಂದ ಬ್ರಾಹ್ಮಣ ಧರ್ಮದ ಕಟ್ಟಾಭಿಮಾನಿ. ವೇದ-ಪುರಾಣ ಓದಿದ್ದ. ಹೋಮ-ಹವನಗಳಲ್ಲೂ ಧಾರ್ಮಿಕ ಉಪನ್ಯಾಸಗಳಲ್ಲೂ ಭಾಗವಹಿಸುತ್ತಿದ್ದ. ಎಳೆಯ ವಯಸ್ಸಿನವನಾದರೂ ಪಂಡಿತನೆಂದು ಹೆಸರು ಗಳಿಸಿದ್ದ.

ಕಾಲಚಂದ ಹದಿನಾರು ವರ್ಷದವನಿದ್ದಾಗ ಆತನ ತಾತ ಜ್ಞಾನೇಂದ್ರನಾಥ ಭಾದುರಿಯ ಇಚ್ಛೆಯ ಮೇರೆಗೆ ಮದುವೆಯಾಗಿದ್ದ. ರೂಪಾಲಿ, ರೂಪಾನಿ ಎಂಬ ಸೋದರಿಯರಿಬ್ಬರು ಆತನ ಪತ್ನಿಯರಾಗಿದ್ದರು. ಇವರು ಅವನ ತಾತನ ಹಳೆಯ ಮಿತ್ರರ ಪುತ್ರಿಯರು. ವಿವಾಹ ವಯಸ್ಕರಾಗಿದ್ದರೂ ಅವರಿಗೆ ಯೋಗ್ಯ ವರಗಳು ಸಿಕ್ಕಿದ್ದಿಲ್ಲ. ಕಾರಣ ಅವರಿಬ್ಬರನ್ನೂ ಕಾಲಚಂದನಿಗೆ ಕೊಡುವುದಾಗಿ ನಿಶ್ಚಿತವಾಯಿತು.

ತಾತನ ಎಲ್ಲ ಮಾತುಗಳನ್ನೂ ಆತ ವಿಧೇಯವಾಗಿ ಪಾಲಿಸುತ್ತಿದ್ದನಾದುದರಿಂದ ಈ ಅಸಂಬದ್ಧ ಪ್ರಸ್ತಾಪವನ್ನು ಕಾಲಚಂದ ವಿರೋಧಿಸಲಿಲ್ಲ.

ಆತ ಅರ್ಚಕನಾಗಬೇಕೆಂದು ಎಲ್ಲರ ಅಪೇಕ್ಷೆ. ಆದರೆ ಆ ಸುದೀರ್ಘ ಯಜ್ಞ-ಹೋಮಗಳು, ಧಾರ್ಮಿಕ ಚರ್ಚೆಗಳು ಅವನಿಗೆ ಹಿಡಿಸಲಿಲ್ಲ. ಅವನಿಗೆ ಯುದ್ಧ ಮಾಡುವದರಲ್ಲೆ ಹೆಚ್ಚಿನ ಒಲವು. ಹದಿನೆಂಟನೆಯ ವರ್ಷದಲ್ಲಿ ಕಾಲಚಂದ ಸೈನ್ಯ ಸೇರುವುದಾಗಿ ನಿರ್ಧರಿಸಿದ. ಟಂಡಾಕ್ಕೆ ಪ್ರಯಾಣ ಮಾಡಿ ಸುಲ್ತಾನನ ಸಂದರ್ಶನಕ್ಕೆ ಹೋದಾಗ ಅವನ ತಂದೆಯ ಬಗೆಗಿನ ಗೌರವದಿಂದಾಗಿ ಸುಲೆಮಾನ ಆತನನ್ನು ಸೈನ್ಯಕ್ಕೆ

ಭರ್ತಿಮಾಡಿಕೊಂಡ. ಇಪ್ಪತ್ತುಮೂರರ ಪ್ರಾಯದಲ್ಲಿ ಆತನೂ ಫೌಜದಾರನಾದ.

ಕಳವಳಗೊಂಡ ಆತನ ಪರಿವಾರದವರು ಕಾಲಚಂದನು ಫೌಜದಾರನ ದರ್ಜೆಗೆ ಏರಿದಾಗ ಸಂತಸಪಟ್ಟರು. ಆತನ ಪತ್ನಿಯರಿಬ್ಬರೂ ಅವನೊಟ್ಟಿಗೆ ಇರಲು ಬಂದರು. ಅವರ ಜತೆಯಾಗಿರಲು ಇಂದುಬಾಲಾದೇವಿ ಎಂಬ ಆತನ ವೃದ್ಧ ವಿಧವೆಯಾದ ಸಂಬಂಧಿಕಳೂ ಬಂದಳು. ಕಾಲಚಂದ ಸುಖವಾಗಿ ತುಂಬು ಜೀವನ ಸಾಗಿಸತೊಡಗಿದ.

★

ಮಹಾನಂದಾ ನದೀತೀರದಲ್ಲಿ ಹಿಂದುಗಳ ಸ್ನಾನದ ಘಟ್ಟವೊಂದಿತ್ತು. ದಿನಾಲು ಬೆಳಿಗ್ಗೆ ದುಲಾರಿ ಆ ದೃಶ್ಯ ನೋಡುತ್ತಿದ್ದಳು. ಅಲ್ಲಿ ಬ್ರಾಹ್ಮಣರು ಸ್ನಾನ ಪೂಜಾವಿಧಿಗಳನ್ನು ನಡೆಸುತ್ತಿದ್ದರು. ಅದನ್ನು ನೋಡುವುದೆಂದರೆ ದುಲಾರಿಗೊಂದು ವಿನೋದ.

ಕಾಲಚಂದ ರಾಯಚೌಧರಿ ಶುಭ್ರವಾದ ಧೋತರ ಧರಿಸಿ ಘನ ಗಾಂಭೀರ್ಯದಿಂದ ಘಟ್ಟದತ್ತನಡೆಯುತ್ತಿದ್ದ. ಬರೀ ಮೈ ಮೇಲೆ ಯಜ್ಞೋಪವೀತ ಕಾಣಿಸುತ್ತಿತ್ತು. ಆತನ ದೇಹದಲ್ಲಿ ಸ್ನಾಯುಗಳು ಎದ್ದುಕಾಣುತ್ತಿದ್ದವು. ಭುಜದವರೆಗೆ ಇಳಿಬಿದ್ದ ತಲೆಗೂದಲು, ದಪ್ಪ ಮೀಸೆ, ಶಾಂತ, ಪ್ರಸನ್ನ ಮುಖಚರ್ಯೆ, ಕಂಗಳಲ್ಲಿ ಅಲೌಕಿಕ ಕಳೆ.

ಕಿಟಕಿಯಿಂದ ದುಲಾರಿ ಆತನನ್ನು ನೋಡಿದಾಗ ಆತ ಅತಿ ರೂಪವಂತ ಅನಿಸಿದ. ಆತನನ್ನು ದಿಟ್ಟಿಸುತ್ತಿದ್ದಂತೆ ಅವಳ ಕೈಗಳು ಕಂಪಿಸುತ್ತ, ಮುಖ ರಂಗೇರಿ, ದೇಹ ಪುಲಕಿತಗೊಂಡಿತು.

ಆತ ಸ್ನಾನ ಪೂಜಾದಿಗಳನ್ನೆಲ್ಲ ತೀರಿಸಿ ತಿರುಗಿ ನಡೆದ. ಆಕೆ ಎವೆಯಿಕ್ಕದೆ ಆತನನ್ನು ನೋಡುತ್ತಿದ್ದಳು. ಆತ ಕಣ್ಮರೆಯಾದಾಗ ಮನಸ್ಸು ವ್ಯಾಕುಲಗೊಂಡಿತ್ತು. ಆತ ಯಾರು? ಎಲ್ಲಿಂದ ಬಂದಿದ್ದ? ಎಲ್ಲಿರುತ್ತಿದ್ದ? ಏನು ಮಾಡುತ್ತಿದ್ದ? ಮುಂತಾದ ನೂರಾರು ಪ್ರಶ್ನೆಗಳು ಅವಳ ಮನದಲ್ಲಿ ಸುಳಿದಾಡಿದವು. ಏಕೋ ಏನೋ ಅವಳ ಹೃದಯ ವೇಗದಿಂದ ಸ್ಪಂದಿಸುತ್ತಿತ್ತು.

ಮರುದಿನ ಆತ ಬರುವನೆಂಬ ಆಸೆಯಿಂದ ಕಿಟಕಿಯಲ್ಲಿ ದಾರಿಕಾಯುತ್ತ ಕುಳಿತಳು. ಆತ ಬಂದ. ಪ್ರತಿಸಲ ಆತನನ್ನು ನೋಡಿದಾಗ ಅವಳದು ಅದೇ ಅವಸ್ಥೆ. ಆತನನ್ನು ನೋಡುವುದು ಅವಳ ನಿತ್ಯಕ್ರಮವಾಯಿತು.

ಆತ ಯಾರೆಂದು ತಿಳಿಯಲು ತನ್ನ ಸೇವಕಿಯರಿಗೆ ಆದೇಶಿಸಿದಳು.

''ರಾಜಕುಮಾರಿ, ಅವನ ಹೆಸರು ಕಾಲಚಂದ ರಾಯ,'' ಹೇಳಿದಳು ಗುಲ್ಶನ್.

''ಅವನ ಮದುವೆ ಆಗಿದೆಯೇ?''

''ಹೌದು ರಾಜಕುಮಾರಿ, ಅವನಿಗೆ ಇಬ್ಬರು ಪತ್ನಿಯರುಂಟು.''

''ಹಾಗಾದರೆ ನಾನು ಆತನ ಮೂರನೆ ಪತ್ನಿಯಾಗುವೆ. ನಾನು ಆತನನ್ನು ಪ್ರೇಮಿಸುವೆ,'' ದುಲಾರಿ ಕಿಲಕಿಲನೆ ನಕ್ಕಳು.

''ಆದರೆ ರಾಜಕುಮಾರಿ, ಆತ ಹಿಂದೂ,'' ಅಂದಳು ರೆಹಾನಾ, ''ಕಾಫಿರ್''! ದುಲಾರಿಯ ಕಣ್ಣುಗಳು ಕೆಂಪಗಾದವು. ''ಆದರೇನಾಯಿತು? ಒಂದು ಗಂಡು, ಒಂದು ಹೆಣ್ಣು ಎಂಬುದಿಲ್ಲವೇ? ಪ್ರೇಮ ಇಲ್ಲವೇ? ಹಿಂದೂ-ಮುಸಲ್ಮಾನ ಎಂಬ ಪ್ರಶ್ನೆಯಿಲ್ಲ. ಆತ ಗಂಡು, ನಾನು ಹೆಣ್ಣು ಎಂಬುದೇ ಮಹತ್ವವಾದದ್ದು.''

''ಆದರೆ ರಾಜಕುಮಾರಿ, ಸುಲ್ತಾನರಿಗೆ ನಿನ್ನ ಅಭಿಲಾಷೆಯನ್ನು ತಿಳಿಸುವ ಧೈರ್ಯ ಯಾರಿಗೆ?''

''ಉತ್ಕಲದ ದಂಡಯಾತ್ರೆಯಿಂದ ಮರಳಿ ಬಂದೊಡನೆ ನಾನೇ ತಿಳಿಸುವೆ.'' ಅವರ ಬಾಯಿ ಕಟ್ಟಿಬಿಟ್ಟಿತು. ಇದು ದಿಟ್ಟತನವಷ್ಟೇ ಅಲ್ಲ, ಶುದ್ಧ ಹುಚ್ಚತನವೆಂದು ಅವರು ಅಂದುಕೊಳ್ಳದೆ ಇರಲಿಲ್ಲ.

''ಆತನ ಉದ್ಯೋಗವೇನು?'' ಕೇಳಿದಳು ದುಲಾರಿ.

''ರಾಜಕುಮಾರಿ, ಆತ ಫೌಜದಾರನಾಗಿದ್ದಾನೆ. ಆತ ಬ್ರಾಹ್ಮಣ.''

"ಬ್ರಾಹ್ಮಣನೆಂದು ಬಲ್ಲೆ. ಬ್ರಾಹ್ಮಣನು ಮುಸಲ್ಮಾನಳನ್ನು ಮದುವೆಯಾಗಬಾರದೆ?"

"ನಿಮ್ಮನ್ನು ವಿವಾಹವಾದರೆ ಆತ ಜಾತಿ ಭ್ರಷ್ಟನಾಗುವನು."

ದುಲಾರಿಯ ಮುಖದಲ್ಲಿ ತಿರಸ್ಕಾರ ಮೂಡಿತು. "ನಾವು ಜಾತಿಭ್ರಷ್ಟರಾಗೋಣ. ಧರ್ಮವನ್ನು ಅಪವಿತ್ರಗೊಳಿಸೋಣ. ಈ ಮೂಢ ಸಂಪ್ರದಾಯಗಳನ್ನು ಉಲ್ಲಂಘಿಸೋಣ. ನಮ್ಮ ಪ್ರೇಮದಲ್ಲಿ ಹಿಂದೂ-ಮುಸಲ್ಮಾನರ ಮಿಲನವಾಗಲಿ."

"ಇದು ಅಪಾಯಕಾರಿ ವಿಚಾರ, ರಾಜಕುಮಾರಿ," ಪರ್ವೀನ್ ಉಸುರಿದಳು.

'ಮರಣದಷ್ಟು ಅಪಾಯಕಾರಿಯೇ? ಹಾಗಾದರೆ ನಾನು ಸಾಯುವೆ. ನಾವೆಲ್ಲರೂ ಒಂದಿಲ್ಲೊಂದು ದಿನ ಸಾಯಲೇಬೇಕು. ಪ್ರೇಮಕ್ಕೋಸ್ಕರ ಯಾಕೆ ಸಾಯಬಾರದು?"

"ಆದರೆ, ರಾಜಕುಮಾರಿ, ಆತನಿಗೆ ನಿನ್ನ ಪ್ರೇಮದ ಅರಿವಿದೆಯೇ? ನಿನ್ನ ಪ್ರೇಮ ಏಕಮುಖವಾದದ್ದು," ಖುದ್ಸಿಯಾ ಹೇಳಿದಳು.

"ಹಾಗಾದರೆ ಇಂದು ಸಂಜೆ ನಾವೆಯಲ್ಲಿ ಹೋಗೋಣ, ಗುಲ್ಶನ್, ನಾನು ಬರುವವರೆಗೆ ಅಲ್ಲಿಯೇ ಇರಬೇಕೆಂದು ನೀನು ಹೇಳು."

ದುಲಾರಿ ನಸುನಗುತ್ತಿದ್ದಳು. ಅಂದು ಸಂಜೆ ಆತ ಅವಳನ್ನು ನೋಡುತ್ತಿದ್ದ! ಅವಳಂತೆ ಆತನೂ ಅವಳಲ್ಲಿ ಅನುರಕ್ತನಾಗುತ್ತಿದ್ದ!

ಆದರೆ ಅವರ ಉಪಾಯ ವ್ಯರ್ಥವಾಯಿತು. ಆತ ಬಂದು ಸುಮ್ಮನೆ ಶೂನ್ಯ ದೃಷ್ಟಿಯಿಂದ ನೋಡುತ್ತ ನಿಂತನೆ ಹೊರತು ಆತ ಅವಳತ್ತ ನೋಡಲಿಲ್ಲ. ಅವನ ಮುಖ ನಿರ್ಲಿಪ್ತವಾಗಿ, ಮುಖವಾಡದಂತಿತ್ತು. ಅವಳ ಕಣ್ಣುಗಳು ಹನಿಗೂಡಿದವು. ಅವಳ ಹೃದಯ ಅಳುಕಿತು. ಆದರೂ ಇನ್ನಷ್ಟು ಆಳವಾಗಿ ಆತನನ್ನು ಪ್ರೇಮಿಸಿದಳು. ಆತ ಬಹಳೇ ಸಚ್ಚರಿತ. ಇಂಥ ಘನತೆ, ಪುರುಷನಲ್ಲಿ ಅದೂ ಓರ್ವ ಸೈನಿಕನಲ್ಲಿ ಇರುವುದು ಅಪರೂಪ. ಆಕೆ ಆತನನ್ನು ಹೊರತಾಗಿ ಮತ್ತಾರನ್ನೂ ಮದುವೆಯಾಗಲಾರೆ ಎಂದು ನಿರ್ಧರಿಸಿದಳು.

2

ಸುಲ್ತಾನ ಮತ್ತೆ ಪರಾಜಿತನಾಗಿ ತಿರುಗಿ ಬಂದಾಗ ಸ್ವಾಭಾವಿಕವಾಗಿಯೆ ಕೋಪಾವಿಷ್ಟನಾಗಿದ್ದ. ಆತನ ಗರ್ಜನೆಯಿಂದ ಇಡೀ ನಗರ ನಡುಗಿತು. ಆದರೆ ದುಲಾರಿಯನ್ನು ಕಂಡಾಗ, ತನ್ನ ಸೋಲು, ದುಃಖ, ನಿರಾಶೆಯನ್ನೆಲ್ಲಾ ಮರೆತುಬಿಟ್ಟ. ಆತನ ಮುಖ ವಾತ್ಸಲ್ಯಪೂರ್ಣವಾಯಿತು.

ದುಲಾರಿ ಮುಂದೆ ಬಂದು, "ಅಬ್ಬಾಜಾನ್,



ನಾನು ನಿಮಗೊಂದು ಮಾತು ಕೇಳಬೇಕಾಗಿದೆ,'' ಎಂದು ಮೆಲ್ಲಗೆ ಅಂದಳು. ತಂದೆ ಅವಳತ್ತ ನೋಡಿ ಮುಗುಳ್ನಕ್ಕ.

''ಅಬ್ಬಾಜಾನ್, ನಾನು ಮದುವೆಯಾಗುವೆ.''

ಆತನ ಮುಖ ಬಿಗುವಾಯಿತು. ''ಪಠಾಣಳರ ಹುಡುಗಿಗೆ ಇದು ವಿಚಿತ್ರ ಕೋರಿಕೆ,'' ಗಡುಸಾಗಿ ಅಂದ.

''ನಾನು ಒಬ್ಬನನ್ನು ಪ್ರೇಮಿಸುತ್ತಿದ್ದೇನೆ, ಅಬ್ಬಾಜಾನ್''

''ಯಾರವ?'' ಸ್ವಲ್ಪ ಸಿಡುಕಿನಿಂದ ಕೇಳಿದ.

''ಆತನ ಹೆಸರು ಕಾಲಚಂದ ರಾಯಚೌಧರಿ.''

''ಆ ಫೌಜದಾರನೆ?''

''ಹೌದು, ಅಬ್ಬಾಜಾನ್.''

''ಆದರೆ ಆತ ಹಿಂದುವಾಗಿದ್ದಾನೆ, ಮಗಳೆ.''

''ಹೌದು, ಅಬ್ಬಾಜಾನ್.''

''ಹಾಗೂ ಮಾಮೂಲಿ ಯುವಕ.''

''ಇಲ್ಲ, ಅಬ್ಬಾಜಾನ್. ಆತ ಭಾರಿ ಕುಲೀನ. ಗೌರವಸ್ಥ. ಆತ ಬ್ರಾಹ್ಮಣನಾದರೇನಾಯಿತು? ಪಂಡಿತನಿದ್ದುದಂತೂ ನಿಜ. ಅಲ್ಲದೆ ಅತಿ ರೂಪವಂತ. ನಾನು ಮದುವೆಯಾದರೆ ಆತನನ್ನೇ.''

''ಆತನನ್ನೇ?'' ಎಂದು ತಮಾಷೆಯಿಂದ ಅವಳ ತೋಳು ತಟ್ಟಿದ. ಆದರೆ ಅವಳು ಗಂಭೀರವಾಗಿ, ''ಹೌದು, ಆತನನ್ನೇ'' ಅಂದಳು.

ಸುಲೆಮಾನ ನಿಟ್ಟುಸಿರುಬಿಟ್ಟ. ''ನೀನು ಬಲು ಹಟಮಾರಿ ಮಗು, ಆತನೂ ನಿನ್ನನ್ನೂ ಪ್ರೇಮಿಸುವನೆ?''

ಆಕೆ ತಲೆ ತಗ್ಗಿಸಿ, ''ಅಬ್ಬಾಜಾನ್, ನಿಜ ಹೇಳಬೇಕೆಂದರೆ ಆತನಿಗೆ ನನ್ನ ಅಸ್ತಿತ್ವದ ಅರಿವು ಸಹ ಇಲ್ಲ,'' ಎಂದು ತಲೆಯೆತ್ತಿದಾಗ ಕಣ್ಣಲ್ಲಿ ನೀರು ತುಂಬಿತ್ತು. ''ಯಾ ಅಲ್ಲಾ!'' ಸುಲ್ತಾನ ಉದ್ಗರಿಸಿದ. ಈ ವಿಕಟ ಪರಿಸ್ಥಿತಿ ಅವನಿಗೆ ಮೋದಪಡಿಸಿತೇನೋ, ಸುಲೇಮಾನ್ ಜೋರಾಗಿ ನಗಹತ್ತಿದ: ''ಹುಚ್ಚು ಹುಡುಗಿ! ನಿನಗೆ ಹುಚ್ಚು ಹಿಡಿದಿದೆ.''

ಆಕೆ ಮೌನವಾಗಿದ್ದಳು. ಅವಳ ಮುಖ ಗಂಭೀರವಾಗಿರುವುದನ್ನು ನೋಡಿ ಆತ ನಗುವುದನ್ನು ಬಿಟ್ಟು, ''ಸರಿ. ಪಠಾಣನ ಪುತ್ರಿಯ ಪ್ರೇಮ ಅನ್ಯೋನ್ಯವಾಗಿರಬೇಕು. ಇಲ್ಲವಾದರೆ ಆತನನ್ನು ಸೀಳಿಹಾಕುವೆ. ನೋಡೋಣ,'' ಅಂದ.

ಮರುದಿನ ಸುಲ್ತಾನ ತನ್ನ ವಜೀರ ಸಯ್ಯದ ಹೈದರ ಹುಸೇನನಿಗೆ ಹೇಳಿಕಳಿಸಿದ. ವಜೀರ ವೃದ್ಧ. ಉದ್ದ ಬಿಳಿಯ ಗಡ್ಡ. ಯತಿಯ ಮುಖ. ಒಣಗಿದ ಕಟ್ಟಿಗೆಯಂತಹ ಶರೀರ. ಸುಲ್ತಾನ ತನ್ನ ಸಮಸ್ಯೆಯನ್ನು ಆತನಿಗೆ ತಿಳಿಸಿದ.

''ಮಹಾರಾಜ, ರಾಜಕುಮಾರಿ ದುಲಾರಿಯು ಒಬ್ಬ ಕಾಫೀರನನ್ನು ವಿವಾಹವಾಗಲು ಒಪ್ಪಿರಾ?'' ವೃದ್ಧ ಕೇಳಿದ.

ಸುಲ್ತಾನ ನಸುನಗುತ್ತ, ''ಆತ ಧೀರ. ಅವನ ತಂದೆ ಒಳ್ಳೆ ಫೌಜದಾರನಾಗಿದ್ದ. ಅಲ್ಲದೆ ಪ್ರೇಮಿಗಳಿಗೆ ಎಂತಹ ಧರ್ಮ?''

''ಕಾಲಚಂದನಿಗೆ ರಾಜಕುಮಾರಿ ದುಲಾರಿಯ ಮೇಲೆ ಕಣ್ಣಿಡುವ ಧೈರ್ಯವೆ?''

''ಇಲ್ಲ, ಸಯ್ಯದ ಸಾಹೀಬ್, ಪರಿಸ್ಥಿತಿ ತಿರುವು ಮುರುವು ಆಗಿದೆ. ದುಲಾರಿಯೆ ಆತನ ಮೇಲೆ ಕಣ್ಣಿಟ್ಟಿದ್ದಾಳೆ.''

ವಜೀರ ಗಡ್ಡ ನೇವರಿಸಿಕೊಂಡ. ''ಅವನು ನಮ್ಮ ಧರ್ಮಕ್ಕೆ ಮತಾಂತರಗೊಂಡರೆ ಇದು ಸಾಧ್ಯವಾಗಬಹುದು.''

''ಏನಾದರೂ ಮಾಡಿ ದುಲಾರಿಯ ಮದುವೆ ಮಾಡಿಸಿ. ಆಕೆ ಅತಿ ದುಃಖಿತಳಾಗಿದ್ದಾಳೆ.''

ವಜೀರ ಕಾಲಚಂದನನ್ನು ಕರೆ ಕಳಿಸಿದ. ಆತ ಬಂದು ಮಂತ್ರಿಗೆ ಸಲಾಮು ಸಲ್ಲಿಸಿದ. ಅತಿ ರೂಪವಂತ ಯುವಕ. ಯಾವ ಹೆಣ್ಣನ್ನಾದರೂ ಮನಸ್ಸೆಳೆಯುವಂಥ ವ್ಯಕ್ತಿ. ದುಲಾರಿ ಆತನನ್ನು ಮೆಚ್ಚಿದ್ದು ಆಶ್ಚರ್ಯವೇನಿಲ್ಲ. ತನ್ನ ಹತ್ತಿರ ಕುಳಿತುಕೊಳ್ಳಲು ಆದೇಶಿಸಿದ.

ಯುವಕ ದಿಗಿಲುಗೊಂಡು, ''ನಾನು ನಿಂತುಕೊಳ್ಳುವುದೇ ಒಳ್ಳೆಯದು ಹುಜೂರ್,'' ಅಂದ.

"ನಾನು ಹೇಳಿದ ಹಾಗೆಯೆ ನೀನು ಕೇಳಬೇಕು. ನನ್ನ ಹತ್ತಿರ ಕೂಡು ಬಾ."

ಮನಸ್ಸಿಲ್ಲದಿದ್ದರೂ ಕಾಲಚಂದ ಹಾಗೆಯೆ ಮಾಡಿದ.

"ಸುಲ್ತಾನ ನಿನ್ನನ್ನು ಅನುಗ್ರಹಿಸಿರುವರು." ವಜೀರ ಮುಂದುವರಿದ. "ನೀನು ರಾಜಕುಮಾರಿಯನ್ನು ವಿವಾಹವಾಗಬೇಕೆಂದು ಸುಲ್ತಾನರ ಅಪೇಕ್ಷೆ."

"ವಿವಾಹ!" ಯುವಕನಿಗೆ ವಿಸ್ಮಯವಾಯಿತು.

"ಹೌದು. ಆದರೆ ಅದಕ್ಕೆ ಮುಂಚೆ ನೀನು ಮುಸಲ್ಮಾನನಾಗಬೇಕು."

ಆತನ ಮುಖದಲ್ಲಿ ರೌದ್ರಭಾವ ತುಳುಕಾಡಿತು. ಆತ ಹಠಾತ್ತನೆ ಎದ್ದು ನಿಂತು, "ಇಲ್ಲ ಎಂದಿಗೂ ಸಾಧ್ಯವಿಲ್ಲ," ಅಂದ.

"ಸುಲ್ತಾನನ ಆದೇಶ ನಿರಾಕರಿಸಿ ಯಾರೂ ಜೀವಿಸುವುದು ಅಸಾಧ್ಯ, ಕಾಲಚಂದ." ವಜೀರ ಎಚ್ಚರಿಸಿದ.

"ಇದೊಂದು ಅಸಂಬದ್ಧ ಪ್ರಸ್ತಾಪ. ಸುಲ್ತಾನರ ಪುತ್ರಿಯನ್ನು ನಾನೇಕೆ ಮದುವೆಯಾಗಬೇಕು? ಮೇಲಾಗಿ ನನಗೆ ಈಗಾಗಲೆ ಇಬ್ಬರು ಪತ್ನಿಯರಿದ್ದಾರೆ. ಮೂರನೆಯವಳು ಏತಕ್ಕಾಗಿ ಬೇಕು? ಅದೂ ಮುಸಲ್ಮಾನಳು?"

"ಅದು ರಾಜಕುಮಾರಿಯ ಇಚ್ಛೆ."

"ನಾನೇ ಏಕೆ? ಸೈನ್ಯದಲ್ಲಿ ನೂರಾರು ತರುಣರುಂಟು. ಅವರಲ್ಲಿ ಯಾರನ್ನಾದರೂ ಅವಳು ಆರಿಸಿಕೊಳ್ಳಬಹುದು."

ವೃದ್ಧ ಸಿಟ್ಟಿಗೇಳದೆ, ಶಾಂತವಾಗಿ, ಹೇಳಿದ: "ನೀನೊಬ್ಬ ಮೂರ್ಖ ಕಾಲಚಂದ, ಇದರ ಪರಿಣಾಮ ಏನಾಗುತ್ತದೆಂಬುದು ನಿನಗೆ ಗೊತ್ತಿಲ್ಲ."

"[illegible]"

"[illegible]"

ವಾಗಿ ನಾನು ನಿನ್ನೊಂದಿಗೆ ಪ್ರಸ್ತಾಪಿಸಿದ್ದು.''

ಕಾಲಚಂದ ತಲೆ ಅಲ್ಲಾಡಿಸಿದ. ಅವನಿಗೇನೂ ಅರ್ಥವಾಗಲಿಲ್ಲ. ಎಲ್ಲವೂ ದೊಡ್ಡ ಒಗಟಾಗಿತ್ತು. ''ನಾನೇನೂ ಹೇಳಲಾರೆ. ನನಗೆ ಹೋಗಲು ಅಪ್ಪಣೆ ಕೊಡಿ,'' ಎಂದು ಹೊರಟು ಹೋಗಲು ತಿರುಗಿದ.

ಆಗ ಜೋರಾಗಿ ತಟ್ಟಿದ ಚಪ್ಪಾಳೆ ಕೇಳಿಸಿತು. ಎಲ್ಲ ಕಡೆಯಿಂದಲೂ ಸೈನಿಕರು ಬಂದು ಆತನನ್ನು ಸುತ್ತುವರಿದರು. ಕಾಲಚಂದ ತಿರುಗಿ ವಜೀರನತ್ತ ದುರುಗುಟ್ಟಿ ನೋಡಿದ.

''ಆತನನ್ನು ಕಾರಾಗೃಹಕ್ಕೆ ತಳ್ಳಿರಿ,'' ವೃದ್ಧ ಮೆಲ್ಲನೆ ಅಂದ. ಕಾಲಚಂದನ ಖಡ್ಗ-ಕಠಾರಿಗಳನ್ನು ಕಸಿದುಕೊಂಡು ಆತನನ್ನು ಸೆರೆ ಮನೆಗೆ ಕರೆದೊಯ್ಯಲಾಯಿತು. ಆತ ದಿಙ್ಮೂಢನಾಗಿದ್ದ.

''ಮಹಾಪ್ರಭು, ಆತ ಭಾರಿ ಹಟಮಾರಿ. ಕಾರಾಗೃಹದಲ್ಲಿ ಕೆಲ ದಿನವಿದ್ದರೆ ದಾರಿಗೆ ಬರುವನು. ಅವನ ಉದ್ಧಟತನವೆಲ್ಲ ಮಾಯವಾಗುವುದು,'' ವಜೀರ ಸುಲ್ತಾನನಿಗೆ ಹೇಳಿದ.

ಸುಲ್ತಾನ ತಲೆಯಲ್ಲಾಡಿಸಿದ. ''ದುಲಾರಿಗೆ ಏನು ಹೇಳಲಿ? ಆತ ಮುಸಲ್ಮಾನನಾಗುವುದು ಮಹತ್ವದ್ದಲ್ಲ, ನನ್ನ ಅಳಿಯನಾಗುವುದು ಮುಖ್ಯ.''

''ಆತ ದಾರಿಗೆ ಬಾರದಿದ್ದರೆ?''

''ಅವನಿಗೆ ಮರಣವೇ ಗತಿ ಮಹಾರಾಜ. ಆತ ಬದುಕಿದ್ದು ನಿಮ್ಮನ್ನು ಪರಿಹಾಸ್ಯಕ್ಕೀಡು ಮಾಡಲಾರ.''

''ನಾನೇಕೆ ಪರಿಹಾಸ್ಯಕ್ಕೀಡಾಗುವೆ?''

''ಆತ ನಡೆದದ್ದನ್ನು ಎಲ್ಲರಿಗೂ ಹೇಳುವನು. ಇಲ್ಲ, ಮಹಾಪ್ರಭು, ಅವನಿಗೆ ಮರಣವೇ ಯೋಗ್ಯ.''

ಸುಲ್ತಾನನಿಗೆ ಇದೆಲ್ಲ ಸರಿಬರಲಿಲ್ಲ. ತನ್ನ ಪುತ್ರಿಯ ಚಿಂತೆ ಆತನಿಗೆ.

''ಕಾಜಿ ಅತಾಉಲ್ಲಾಖಾನ ಕಚೇರಿಯಲ್ಲಿ ಅವನ ವಿಚಾರಣೆ ನಡೆಸುವನು. ಮಹಾರಾಜರ ಆಜ್ಞೆಯನ್ನು ಭಂಗಗೊಳಿಸಿದ್ದಕ್ಕೆ ಅವನಿಗೆ ಮರಣದಂಡನೆ ವಿಧಿಸಲಾಗುವುದು.''

''ಸಯ್ಯದ ಸಾಹಿಬ್, ನನ್ನ ಕಾನೂನು ಕ್ರೂರವಾಗಿದ್ದರೂ ಅನ್ಯಾಯದ್ದಾಗಿಲ್ಲ. ಇಂಥ ಅನ್ಯಾಯಕ್ಕೆ ನಾನು ಒಳಗಾಗಬೇಕೆ?''

ಗತ್ಯಂತರವಿಲ್ಲ ಮಹಾಪ್ರಭು. ಆತನಿಗೆ ಮರಣ ದಂಡನೆ. ಇಲ್ಲವೆ ಕಾರಾಗೃಹವಾಸ.''

''ಕಾಯದೆಯಿಂದ ಕೊಲ್ಲುವುದು ಖೂನಿಗಿಂತ ಕೀಳಲ್ಲವೆ, ಸಯ್ಯದ ಸಾಹಿಬ್.''

ವಜೀರ ಭುಜ ಹಾರಿಸಿದ. ''ಫೌಜದಾರನನ್ನು ತೀರಿಸಿಬಿಡಲು ನನಗೆ ಬೇರೆ ದಾರಿ ತೋಚದು ಮಹಾಪ್ರಭು.''

ಸುಲ್ತಾನ ದೀರ್ಘವಾಗಿ ಉಸಿರೆಳೆದುಕೊಂಡು ವಿಚಾರಮಗ್ನನಾದ. ವಜೀರನಿಗೆ ಸುಲ್ತಾನನ ಮನೋಭಾವ ಅರ್ಥವಾಗಲಿಲ್ಲ. ಇಡೀ ದೇಶವನ್ನು ಆಳುವ ಸುಲ್ತಾನ ತನ್ನ ಪುತ್ರಿಯ ಗುಲಾಮನಾಗಿದ್ದ. ಇಷ್ಟು ಪಾಶವೀ ಸ್ವಭಾವದ ಮನುಷ್ಯನ ಹೃದಯದಲ್ಲಿ ಮಮತೆಯ ಭಾವನೆ ಇರುವುದು ವಿಚಿತ್ರವೆ. ವಜೀರ ತಲೆಯಲ್ಲಾಡಿಸಿದ. ಕಟ್ಟಕಡೆಗೆ ಸುಲ್ತಾನ ಮೇಲೆ ನೋಡಿದಾಗ ಬರಿ ಗೋಣು ಹಾಕಿ, ವಂದಿಸಿ ಅಲ್ಲಿಂದ ನಿರ್ಗಮಿಸಿದ.

★

ಮರುದಿನ ನ್ಯಾಯವಿಚಾರಣೆಯ ಅಣಕು ನಾಟಕ ನಡೆಯಿತು. ಕಾಜಿ ಅತಾಉಲ್ಲಾಖಾನ ನ್ಯಾಯಾಧೀಶನಾದ. ತೀರ ಮುದುಕ. ಮರಣ ದಂಡನೆ ವಿಧಿಸುವಾಗ ಆತನ ಕಣ್ಣುಗಳು ಹರ್ಷದಿಂದ ಹೊಳೆಯುತ್ತಿದ್ದವು. ಇದಂತೂ ಒಂದು ನಾಟಕೀಯ ನ್ಯಾಯ ವಿಚಾರಣೆ. ತೀರ್ಮಾನ ಮೊದಲೆ ನಿರ್ಧಾರಿತವಾಗಿತ್ತು.

ಕಚೇರಿಯಲ್ಲಿ ಆಸ್ಥಾನಿಕರು, ಗಣ್ಯ ನಾಗರಿಕರು ಕಿಕ್ಕಿರಿದು ತುಂಬಿದ್ದರು. ಸುಲ್ತಾನ, ವಜೀರರೂ ಹಾಜರಿದ್ದರು. ಒಂದು ಬದಿಗೆ ಆರೋಪಿ. ಆತನ ಸುತ್ತಲೂ ಸೈನಿಕರು. ದುಲಾರಿಗೆ ಇದಾವುದೂ ಗೊತ್ತಿರಲಿಲ್ಲ.

ವಜೀರ ದೋಷಾರೋಪಣೆಯನ್ನು ಓದಿದ. ಆ ದೀರ್ಘ ಪಟ್ಟಿಯಲ್ಲಿ ಎಲ್ಲವೂ ಅಸಮಂಜಸವಾಗಿತ್ತು. ಕಾಲಚಂದ ಮಹಾರಾಜರ ಆಜ್ಞೆಯನ್ನು ಮುರಿದಿದ್ದನೆಂಬುದೆ ಮುಖ್ಯ

ಆರೋಪ. ''ನಾನೆಂದೂ ಮಹಾರಾಜರ ಆಜ್ಞೆಯನ್ನು ಉಲ್ಲಂಘಿಸಿಲ್ಲ. ಒಂದು ನಿರ್ದಿಷ್ಟ ಕಾರಣಕ್ಕೆ ಮಾತ್ರ ಅವರ ಮಾತು ಮೀರಿದೆ. ಕಾಜಿಯವರಿಗೆ ಅದನ್ನು ತಿಳಿಸಲೆ?'' ಕಾಲಚಂದ ಹೇಳಿದ.

ಕಾಜಿ ಆ ಮಾತನ್ನು ಅಲಕ್ಷಿಸಿದ. ''ಆಜ್ಞೆಯನ್ನು ಮುರಿದದ್ದನ್ನು ನೀನೇ ಒಪ್ಪುತ್ತಿ ತಾನೆ? ಅಷ್ಟೇ ಸಾಕು. ಅದು ರಾಜದ್ರೋಹ. ಅದೇ ಆಪಾದನೆಗೆ ನಿನ್ನ ವಿಚಾರಣೆಯಾಗುವುದು.''

''ಆದರೆ ಅಲ್-ಜನಾಬ-ಏ-ಕಾಜಿ, ಅದೊಂದು ಆಪ್ತವಿಷಯ. ರಾಜ್ಯಾಡಳಿತಕ್ಕೆ ಸಂಬಂಧಪಟ್ಟದ್ದಲ್ಲ.''

''ನೀನು ಸುಲ್ತಾನನ್ನು ವಿರೋಧಿಸಿರುವಿ. ಅದು ರಾಜದ್ರೋಹ. ನಿನಗೆ ಮರಣದಂಡನೆಯೇ ಸರಿಯಾದ ಶಿಕ್ಷೆ.''

ಈಗ ಏನು ಹೇಳಿದರೂ ವ್ಯರ್ಥವೆಂದು ಕಾಲಚಂದನಿಗೆ ಗೊತ್ತು. ಸುಲ್ತಾನ ತನಗೆ ಬೇಡಾದವರನ್ನು ಮುಗಿಸುವುದು ಇದೇ ರೀತಿ. ಆತನ ಮುಖದಲ್ಲಿ ತಿರಸ್ಕಾರ ಮೂಡಿತು.

''ಮೂರನೆಯ ದಿನ ನಿನ್ನನ್ನು ಗಲ್ಲಿಗೇರಿಸಲಾಗುವುದು. ಅಷ್ಟರಲ್ಲಿ ನೀನು ಮನಸ್ಸನ್ನು ಬದಲಿಸಿದರೆ ಪುನಃ ವಿಚಾರಣೆಯಾಗುವುದು.''

ಕಾಲಚಂದನನ್ನು ಮತ್ತೆ ಸೆರೆಮನೆಗೆ ಕರೆದೊಯ್ಯಲಾಯಿತು. ಬಹು ಬೇಗನೆ ಅಂತಃಪುರಕ್ಕೆ ಸುದ್ದಿ ತಲುಪಿತು.

''ರಾಜಕುಮಾರಿ, ಮೂರನೆ ದಿನ ಆತನ ಶಿರಚ್ಛೇದವಾಗುವುದಂತೆ,'' ಗುಲ್ಮನ್ ಭಯಾಕ್ರಾಂತಳಾಗಿ ಹೇಳಿದಳು.

''ಯಾಕೆ?'' ಕಾತರದಿಂದ ಕೇಳಿದಳು ದುಲಾರಿ.

''ಯಾಕೆಂದರೆ ಆತ ನಿಮ್ಮನ್ನು ವಿವಾಹವಾಗಲು ನಿರಾಕರಿಸಿದ ಎಂದೆನಿಸುತ್ತದೆ.''

''ಮೂರ್ಖಿ ನೀನು. ನಿಜವಾದ ಕಾರಣ ವೇನು?''

''ಗೊತ್ತಿಲ್ಲ ರಾಜಕುಮಾರಿ. ಮಹಾರಾಜರನ್ನು ಆತ ವಿರೋಧಿಸಿದನೆಂದು ಕಾಜಿ ಅಂದರು. ಅದು ರಾಜದ್ರೋಹ.''

''ನನ್ನ ಮದುವೆಯಾಗದಿದ್ದವನನ್ನು ತಂದೆ




''ನಾನು ಮಂತ್ರಿಯಾಗಿದ್ದಾಗ ಹಾಕಿದ ಅಡಿಗಲ್ಲು ಈಗ ಉಪಯೋಗಕ್ಕೆ ಬಂತು ನೋಡಿ.''

ಯಾಕೆ ಕೊಲ್ಲಬೇಕು?'' ದುಲಾರಿ ದಿಗಿಲು, ಅಪನಂಬಿಕೆಯಿಂದ ತಲೆ ಅಲ್ಲಾಡಿಸಿದಳು.

''ಮೊದಲಿಗೆ ಆತ ಮುಸಲ್ಮಾನನಾಗಬೇಕೆಂದರಂತೆ. ಆತ ನಿರಾಕರಿಸಿದ.''

ದುಲಾರಿಯ ಮುಖದ ಮೇಲೆ ಕಿರುನಗೆ ಮೂಡಿತು. ''ಅಂದರೆ ಆತ ನನ್ನ ಮದುವೆ ಆಗಲು ನಿರಾಕರಿಸಿಲ್ಲ. ಮತಾಂತರವಾಗಲು ನಿರಾಕರಿಸಿದ್ದು. ಆತ ಮಾಡಿದ್ದು ಒಳ್ಳೆಯದೇ.''

ಸೇವಕಿಯರು ಗೋಣು ಹಾಕಿದರು.

''ಆದರೆ ಆತ ಸಾಯಲಾರ. ನಾನು ಆತನನ್ನು ಸಾಯಲು ಬಿಡುವುದಿಲ್ಲ,'' ದುಲಾರಿ ದೃಢವಾಗಿ ಹೇಳಿದಳು.

''ಅದ್ಹೇಗೆ, ರಾಜಕುಮಾರಿ?'' ರಜಿಯಾ ಕೇಳಿದಳು.

''ಗೊತ್ತಿಲ್ಲ. ಆದರೆ ದಾರಿ ಹುಡುಕುವೆ.''

ಸೇವಕಿಯರೆಲ್ಲ ನಿರ್ಗಮಿಸಿದರು. ದುಲಾರಿ ಕಿಟಕಿಯತ್ತ ಹೋಗಿ ನಿಂತಳು. ಮಹಾನಂದಾ ನದಿ ನಿಶ್ಚಿಂತೆಯಿಂದ ಹರಿಯುತ್ತಿತ್ತು. ಆಕೆ ಮೌನವಾಗಿ ಕುಳಿತಳು. ಅವಳ ಮನಸ್ಸು ತಮುಲಗೊಂಡಿತ್ತು. ಕೊನೆಗೊಂದು ವಿಚಾರ ಹೊಳೆಯಿತು. 'ಹೌದು, ಹಾಗೇ ಮಾಡುವುದು. ಆತನ ರಕ್ಷಿಸುವುದು ಅದೊಂದೇ ದಾರಿ,' ಅಂದುಕೊಂಡಳು.

ಅಂದು ರಾತ್ರಿ ತಂದೆಗೆ ಮೊರೆಯಿಟ್ಟಳು. ''ಅದು ನನ್ನ ಕೈಯಲ್ಲಿಲ್ಲ ಮಗು,'' ಎಂದಾತ, ಅವಳ ಸಂತಾಪ ಕಂಡು ನರಳಿದ.

''ಅಬ್ಬಾಜಾನ್, ನೀನು ಬಂಗಾಲ, ಬಿಹಾರದ ಸುಲ್ತಾನ. ಮನಸ್ಸು ಮಾಡಿದರೆ ಕಾಜಿಯ ತೀರ್ಮಾನ ರದ್ದುಪಡಿಸಬಹುದು. ಆತನನ್ನು ರಕ್ಷಿಸು, ಅಬ್ಬಾಜಾನ್.''

''ಇಲ್ಲ, ಮಗು, ಸಮಯ ಮೀರಿದೆ.''

''ಏನಾಯಿತು, ಅಬ್ಬಾಜಾನ್? ಅವನಿಗೆ ಏನಾಯಿತು ಅಬ್ಬಾಜಾನ್?'' ತವಕದಿಂದ ಕೇಳಿದಳು.

ಸುಲ್ತಾನ ಭುಜ ಹಾರಿಸಿದ. ಅವಳೊಡನೆ ಮಾತನಾಡಲು ಭಯವಾಗಿತ್ತು. 'ಕಾಲಚಂದ ಸಾಯಬೇಕು. ಆಕೆ ಸ್ವಲ್ಪ ದುಃಖಿಸುತ್ತಿದ್ದಳೇನೋ. ಅನಂತರ ಮರೆತುಬಿಡುವಳು. ಹುಡುಗಿ ತಾನೆ? ಕಾಲಕ್ರಮೇಣ ಗಾಯವೆಲ್ಲ ಮಾಯುವುದು,' ಅಂದುಕೊಂಡ.

ಆಕೆ ಸುಮ್ಮನಾದಳು. ತಾನು ನಿರ್ಧರಿಸಿದ್ದನ್ನು ಮಾಡಿಯೇ ಬಿಡುವುದು. ತನ್ನ ತಂದೆ, ವಜೀರ, ಕಾಜಿ, ಎಲ್ಲರಿಗೂ ಒಂದು ಪಾಠ ಕಲಿಸುವುದು ಎಂದಾಕೆ ನಿರ್ಧರಿಸಿದಳು.

ಕಾಲಚಂದನ ಮಾವ ಭಾದುರಿಯಾದಿಂದ ಲಗುಬಗೆಯಿಂದ ಬಂದು ರೂಪಾಲಿ, ರೂಪಾನಿ ಸಮೇತನಾಗಿ ಸುಲ್ತಾನನನ್ನು ಸಂದರ್ಶಿಸಿ ಕಣ್ಣೀರು ಸುರಿಸಿದ. ''ಆದರೆ ಆಜ್ಞೆ ಬದಲಿಸುವುದು ಅಸಾಧ್ಯ.'' ''ಆತ ನಿಮ್ಮ ಆಜ್ಞೆಯನ್ನು ಮುರಿದ ಕಾರಣವನ್ನಾದರೂ ಹೇಳಿ, ಮಹಾರಾಜ. ನಾನು ಅವನೊಡನೆ ಮಾತಾಡುವೆ. ಆತನ ಮನಸ್ಸು ಬದಲಾಯಿಸುವೆ. ಆತ ನನ್ನ ಮಾತು ಮೀರುವುದಿಲ್ಲ.'' ಜ್ಞಾನೇಂದ್ರನಾಥರೂ ಅಂದರು. ''ಈಗ ಸಮಯ ಮೀರಿಬಿಟ್ಟಿದೆ.''

ವೃದ್ಧ ಪುತ್ರಿಯರೊಡನೆ ಮನೆಗೆ ಹಿಂತಿರುಗಿದ. ಅವರೆಲ್ಲರಿಗೂ ಕತ್ತಲು ಕವಿದಂತಾಗಿತ್ತು.

ಮೂರನೆ ದಿನ ಕಾಲಚಂದನಿಗೆ ಬೇಡಿ ತೊಡಿಸಿ ಅರಮನೆಯ ಒಳಾಂಗಣಕ್ಕೆ ಕರೆತರಲಾಯಿತು. ಸುತ್ತಲೂ ಸೈನಿಕರು. ಎತ್ತರವಾದ ಆಸನದ ಮೇಲೆ ಸುಲ್ತಾನ. ಅವನ ಹತ್ತಿರ ಗಡ್ಡ ನೇವರಿಸುತ್ತ ವಜೀರ ನಿಂತಿದ್ದ. ಆಸ್ಥಾನಿಕರು, ಶ್ರೀಮಂತ ನಾಗರಿಕರು ಕಿಕ್ಕಿರಿದು ನೆರೆದಿದ್ದರು. ಜನಸಮೂಹದಲ್ಲಿ ಜ್ಞಾನೇಂದ್ರನಾಥನೂ ಇದ್ದ. ಅವನ ಕಣ್ಣಿನಿಂದ ನೀರು ಹರಿಯುತ್ತಿತ್ತು. ಆತ ಸಂಪೂರ್ಣ ಎದೆಗುಂದಿದ್ದ.

ಕಾಲಚಂದ ನೆಟ್ಟಗೆ, ಎದೆ ಸೆಟೆಸಿಕೊಂಡು ನಿಂತಿದ್ದ. ರಾಜನನ್ನೊಮ್ಮೆ, ವಜೀರನನ್ನೊಮ್ಮೆ. ಶಾಂತ, ನೆಟ್ಟ ನೋಟದಿಂದ ವೀಕ್ಷಿಸಿದ.

ಆತ ಎಲ್ಲರಿಗೂ ಪ್ರೀತಿ ಪಾತ್ರನಾಗಿದ್ದ. ಎಲ್ಲರೂ ಆತನಿಗೋಸ್ಕರ ಕನಿಕರಪಟ್ಟರು. ರಾಜನನ್ನು ವಿರೋಧಿಸಲು ಅವನೇನು ಮಾಡಿ

ದ್ದನೋ ಎಂದು ಎಲ್ಲರೂ ಯೋಚಿಸುತ್ತಿದ್ದರು.

ಶಿರಚ್ಛೇದಕ ಮುಂದೆ ಬಂದ. ಕಪ್ಪು, ದಷ್ಟ ಪುಷ್ಟ ಆಳು. ಕಪ್ಪು ಬಟ್ಟೆ ತೊಟ್ಟಿದ್ದ. ಮುಖ ವಾಡ ಹಾಕಿಕೊಂಡಿದ್ದ. ಕೈಯಲ್ಲಿ ದೊಡ್ಡ-ದೊಂದು ಕೊಡಲಿ. ಕಾಲಚಂದನ ಎದುರಾಗಿ ನಿಂತ. ಕಾಲಚಂದ ಅವಿಚಲಿತನಾಗಿ ಆತನನ್ನು ನೋಡಿದ. ಸಾಮಾಪಾಗಿ ಎಲ್ಲ ಆರೋಪಿಗಳು ಧೃತಿಗೆಟ್ಟಿರುತ್ತಿದ್ದರು. ಆದರೆ ಈತ ನಿರ್ಭೀತ ನಾಗಿದ್ದ. ಶಿರಚ್ಛೇದಕನಿಗೆ ಆಶ್ಚರ್ಯವಾಯಿತು.

ಕಾಜಿ ಮತ್ತು ವಜೀರ ಕಾಲಚಂದನ ಮುಂದೆ ಹೋಗಿ ನಿಂತರು. ವಜೀರ ಕೇಳಿದ: ''ಇನ್ನೂ ನೀನು ಮುಸಲ್ಮಾನನಾಗಲು ನಿರಾಕರಿಸುವಿಯಾ?''

ಹಾಗಾದರೆ ಇದು ಕಾರಣ! ಅಲ್ಲಿ ನೆರೆದವರೆಲ್ಲ ಕರುಬಿದರು. ವೃದ್ಧ ತಾತ ನೆಲಕ್ಕೆ ಕುಸಿದು ಬಿದ್ದ.

ಕಾಲಚಂದ ನಸುನಕ್ಕ 'ಕೊಡಲಿ ಎತ್ತಿ ಏಟು ಹಾಕಿ. ಅನುಮಾನ ಬೇಡ. ಮತಾಂತರಗೊಳ್ಳುವುದಕ್ಕಿಂತ ಸಾಯುವುದೇ ಮೇಲು,'' ಅಂದ.

ಸುಲ್ತಾನ ತನ್ನ ಕಾಲಿಗೆ ಬಿದ್ದದ್ದರೂ ಈ ಮಾತು ಹೇಳಲು ಸಾಧ್ಯವಾಗುತ್ತಿರಲಿಲ್ಲವೆಂದು ಮುದುಕ ಮೊಮ್ಮಗನ ಮಾತನ್ನು ಮೆಚ್ಚಿದ. ಅವನ ಧೈರ್ಯಕ್ಕಾಗಿ ಹೆಮ್ಮೆಪಟ್ಟ.

ವಜೀರ ಮತ್ತು ಕಾಜಿ ಶಿರಚ್ಛೇದಕನಿಕೆ ಸಂಜ್ಞೆ ಮಾಡಿದರು. ಆತ ಕೊಡಲಿಯ ಅಲಗು ಪರೀಕ್ಷಿಸುತ್ತಿದ್ದ. ಕಾಲಚಂದ ನಿಶ್ಚಿಂತೆಯಿಂದ ನಿಂತಿದ್ದ.

''ಮಂಡೆಯೂರು,'' ಎಂದೊಬ್ಬ ಸೈನಿಕ ಅವನಿಗೆ ಹೇಳಿದ.

ಕಾಲಚಂದ ನಕ್ಕ. ''ಸಾಧ್ಯವಿಲ್ಲ. ನಾನು ನಿಂತಂತೆಯೇ ನನ್ನ ಶಿರಚ್ಛೇದ ಮಾಡಬೇಕು.''

ಶಿರಚ್ಛೇದಕನಿಗೆ ದಿಗಿಲಾಯಿತು. ಕೊಡಲಿ ಸರಿಯಾಗಿ ಬೀಸಲು ಹಿಂದಕ್ಕೆ ಸರಿದು ಕೊಡಲಿ




''ನಾನು ಸ್ವರ್ಗಸ್ಥನಾದೆ ಅಂತ ಜನ ತಿಳ್ಕೊಂಡಿದ್ರೆ, ನೀವು ನರಕಕ್ಕೆ ದೂಡ್ತಿರಲ್ಲಾ!''

ಎತ್ತಿದ.

''ತಡೆ!'' ಕೀರಲು ಸ್ವರವೊಂದು ಕೇಳಿಸಿತು.

ಕೊಡಲಿ ನಡುವೆಯೇ ನಿಂತಿತು. ಎಲ್ಲರೂ ವಿಸ್ಮಯಗೊಂಡು ಯಾರೆಂದು ತಿರುಗಿ ನೋಡಿದರು. ಸುಲ್ತಾನ ಎದ್ದು ನಿಂತ. ಆ ಕೀರಲು ಧ್ವನಿ ಪರಿಚಿತವೆನಿಸಿತು.

ಬಿರುಗಾಳಿಯಂತೆ ಹುಡುಗಿಯೊಬ್ಬಳು ಮುನ್ನುಗ್ಗಿ ಕಾಲಚಂದನ ಎದುರು ಬಂದು ನಿಂತಳು.

''ದುಲಾರಿ!'' ಸುಲ್ತಾನ ಗಡುಸು ಧ್ವನಿಯಲ್ಲಿ ಅಂದ.

ಆಕೆ ಶಾಂತವಾಗಿ ನಿಂತಿದ್ದಳು. ''ಮೊದಲು ನನ್ನನ್ನು ಕೊಲ್ಲದೆ ಆತನನ್ನು ಯಾರೂ ಕೊಲ್ಲಲಾರರು,'' ಗದ್ಗದಿತವಾಗಿ ಅಂದಳು ದುಲಾರಿ.

''ಓಹ್, ರಾಜಕುಮಾರಿ!'' ಎಂದು ಜನಸ್ತೋಮದಲ್ಲಿ ಗುಜು ಗುಜು ನಡೆಯಿತ್ತು. ಅವಳ ಬಗ್ಗೆ ಕೇಳಿದ್ದರೂ ಯಾರೂ ಅವಳನ್ನು ನೋಡಿರಲಿಲ್ಲ.

''ದುಲಾರಿ!'' ಸುಲ್ತಾನ ಕೂಗಿದ. ಈ ಚೋಟುದ್ದ ಹುಡುಗಿ ತನ್ನನ್ನು ವಿರೋಧಿಸಿದಳಲ್ಲ ಎಂದು ಸಿಟ್ಟಿಗೆದ್ದ.

''ಅಬ್ಬಾಜಾನ್, ನನ್ನನ್ನು ಕೊಲ್ಲುವ ಹೊರತು ಯಾರೂ ಆತನನ್ನು ಕೊಲ್ಲಲಾರರು.''

ಆಸ್ಥಾನಿಕರು, ನಾಗರಿಕರು, ಗಾಬರಿಗೊಂಡರು. ಸುಲ್ತಾನನಿಗೆ ಏನು ಮಾಡಬೇಕೆಂಬುದು ತೋಚಲಿಲ್ಲ. ಆತ ದಿಗ್ಭ್ರಮೆಗೊಂಡಿದ್ದ.

ಕಾಲಚಂದ ಅವಳ ದಿಟ್ಟತನಕ್ಕೆ ಆಶ್ಚರ್ಯಚಕಿತನಾದ. ಹಾಗಾದರೆ ಇವಳೇ ಸುಲ್ತಾನನ ಪುತ್ರಿ, ದುಲಾರಿ! ತನ್ನನ್ನು ವಿವಾಹವಾಗಬೇಕೆಂದವಳು. ತಾನು ನಿರಾಕರಿಸಿದವಳು! ಅವಳೊಂದು ಮೃದು, ಮಂದ, ಮುದ್ದಾಡಿದ ಮಗು ಎಂದುಕೊಂಡಿದ್ದ. ಆದರೆ ಇವಳು ಸಾಹಸಿಯೆಂಬುದು ಈಗ ಗೊತ್ತಾಯಿತು.

''ದುಲಾರಿ! ಅಲ್ಲಿಂದ ಸರಿದು ನಿಲ್ಲು,'' ಸುಲ್ತಾನ ಮತ್ತೆ ಕೂಗಿಕೊಂಡ.

''ಇಲ್ಲ ಅಬ್ಬಾಜಾನ್, ನನ್ನ ಮೇಲೆ ಯಾವನು ತನ್ನ ತಂಟೆಗೆ ಬರುವನೋ ನೋಡುವೆ,'' ಆಕೆ ತಿರುಗಿ ಕೂಗಿದಳು.

ಸುಲ್ತಾನ ರೋಷಾವಿಷ್ಟನಾಗಿ ಮಗಳ ಹತ್ತಿರ ದಾಪುಗಾಲು ಹಾಕಿದ. ವಜೀರ ಮತ್ತು ಕಾಜಿ ಸ್ತಂಭೀಭೂತರಾಗಿದ್ದರು.

''ಸುಲ್ತಾನರು ನನ್ನ ಹಿಂದಿನ ತಪ್ಪನ್ನು ಮನ್ನಿಸಿದರೆ ನಾನವರ ಮಗಳ ಮದುವೆಯಾಗುವೆ,'' ಕಾಲಚಂದ ನುಡಿದ.

ಸುಲ್ತಾನನಿಗೆ ಸ್ಮೃತಿ ತಪ್ಪಿದಂತಾಯಿತು. ''ಹೌದೇ? ನಿಜಕ್ಕೂ ಅವಳನ್ನು ಮದುವೆಯಾಗುವಿಯಾ?'' ಅಪನಂಬಿಕೆಯಿಂದ ಕೇಳಿದ.

''ಹೌದು, ಮಹಾರಾಜ.''

''ಹಾಗಾದರೆ ನೀನು ನಮ್ಮ ಧರ್ಮಕ್ಕೆ ಸೇರುವೆಯಾ?''

''ಬೇಡ ಅಬ್ಬಾಜಾನ್, ಆತ ಹಾಗೆ ಮಾಡುವುದು ಬೇಡ. ಆತ ಸದ್ಯ ಇದ್ದಂತೆಯೇ ಇರಲಿ.''

''ನೀನು ಭಾರಿ ದಿಟ್ಟೆ,'' ಸುಲ್ತಾನ ಅವಳ ಧೈರ್ಯ ಸಾಹಸ ಮೆಚ್ಚುತ್ತಲೆಂದ. ಸೈನಿಕರತ್ತ ತಿರುಗಿ, ''ಅವನನ್ನು ಬಿಟ್ಟುಬಿಡಿ,'' ಎಂದು ಆಜ್ಞಾಪಿಸಿದ.

ಬೇಡಿಯನ್ನು ಕಳಚಲಾಯಿತು. ಕಾಲಚಂದ,

ದುಲಾರಿ ಒಬ್ಬರನ್ನೊಬ್ಬರು ನೋಡಿದರು. ದುಲಾರಿ ಅಂದಳು ''ನೀನು ಮತಾಂತರವಾಗಿ ನನ್ನನ್ನು ಮದುವೆ ಆಗುವುದು ಅವಶ್ಯವಿಲ್ಲ. ಕನಿಕರದಿಂದ ನನ್ನ ವಿವಾಹವಾಗುವುದು ಬೇಡ. ಪ್ರೇಮ, ವಾತ್ಸಲ್ಯ, ಸಂತೋಷದಿಂದ ನನ್ನ ಪತಿಯಾಗಬೇಕೇ ಹೊರತು ಕರುಣೆಯಿಂದಲ್ಲ.''

''ನನಗೆ ಕನಿಕರವಿಲ್ಲ, ಪ್ರೇಮವೂ ಇಲ್ಲ. ನನಗೆ ಮೆಚ್ಚುಗೆಯಾದದ್ದು ನಿನ್ನ ಧೈರ್ಯ. ಕಾಲಕ್ರಮೇಣ ನಿನ್ನನ್ನು ಪ್ರೀತಿಸುವೆ,'' ಆತ ಮೆಲ್ಲನೆ ಅಂದ.

3

ಅವಳು ಸುಲ್ತಾನರ ಏಕಮೇವ ಪುತ್ರಿ ಎಂದ ಮೇಲೆ ಕೇಳಬೇಕೆ!

ಕಾಲಚಂದ-ದುಲಾರಿಯರ ವಿವಾಹ ರಾಜ ವೈಭವದಿಂದ ನೆರವೇರಿತು. ರಾಜ್ಯವೆಲ್ಲ ಪರಮಾನಂದದಲ್ಲಿ ನಲಿದಾಡಿತು. ಆದರೆ ಅವರ ಮದುವೆ ಮಾತ್ರ ಇಸ್ಲಾಮ್ ಧರ್ಮದ ಪ್ರಕಾರ ನೆರವೇರಿತು.

ರೂಪಾಲಿ, ರೂಪಾನಿ ಕಳವಳಗೊಂಡರು. ಜ್ಞಾನೇಂದ್ರನಾಥ ಭಾದುರಿ ದುಃಖಸಂತಪ್ತನಾದ. ಇಂದುಬಾಲಾದೇವಿ ರೊಚ್ಚಿಗೆದ್ದಳು. ಮದುವೆಗೆ ಮುಂಚಿತವಾಗಿ ಅವರೆಲ್ಲರೂ ಭಾದುರಿಯಾಕ್ಕೆ ತೆರಳಿದರು.

ಕಾಲಚಂದ ಅವರ ಗೋಜಿಗೆ ಹೋಗಲಿಲ್ಲ. ಅವರ ಬಗ್ಗೆ ವಿಚಾರಿಸಲೂ ಈಗ ಆತನಿಗೆ ಸಮಯವಿರಲಿಲ್ಲ. ಆತನನ್ನು ವಿವಾಹವಾದವಳು ಭಾರಿ ಭಾವುಕಳಾಗಿದ್ದಳು. ಆತ ಸಂಪೂರ್ಣ ಅವಳ ಸೊತ್ತಾಗಿ ಹಗಲಿರುಳು ಅವಳ ಸಹವಾಸದಲ್ಲಿ ಕಳೆಯತೊಡಗಿದ.

ಕೆಲದಿನಗಳ ನಂತರ ಕಾಲಚಂದನಿಗೆ ತನ್ನ ಬಂಧು ಬಳಗ, ಪತ್ನಿಯರು, ಆಪ್ತೇಷ್ಟರ ನೆನಪಾಯಿತು. ಅವರನ್ನು ಭೇಟಿಯಾಗಲು ಮನೆಗೆ ಹೋದಾಗ ಅವರೆಲ್ಲರೂ ಸಿಟ್ಟಿನಿಂದ ಮನೆ ಬಿಟ್ಟು ಹೋಗಿಬಿಟ್ಟಿದ್ದರೆಂದು ತಿಳಿಯಿತು. ತನ್ನ ಊರಿಗೆ ಹೋಗಿ ಇಬ್ಬರು ಪತ್ನಿಯರನ್ನೂ ಕರೆದುಕೊಂಡು ಬರುವುದಾಗಿ ದುಲಾರಿಗೆ ಹೇಳಿದಾಗ ಅವಳೇನೂ ಪ್ರತಿಭಟಿಸಲಿಲ್ಲ.

ಭಾದುರಿಯಾದ ಹಳೆಗಾಲದ ತನ್ನ ಆ ಮನೆಯಲ್ಲಿ ಭಾರಿ ತುಮುಲವೆದ್ದಿತ್ತು. ಬ್ರಾಹ್ಮಣ ಸಮಾಜ ಆತನಿಗೆ ಬಹಿಷ್ಕಾರ ಹಾಕಿತು. ಇಂಥ ಆಘಾತವನ್ನು ಆತ ನಿರೀಕ್ಷಿಸಿರಲಿಲ್ಲ.

''ನೀನು ಮುಸಲ್ಮಾನಳನ್ನು ಮದುವೆಯಾಗಿ ನಮ್ಮ ಧರ್ಮವನ್ನು ಅಪವಿತ್ರಗೊಳಿಸಿರುವಿ. ಜಾತಿಭ್ರಷ್ಟನೂ ಆಗಿರುವಿ, ಪ್ರಧಾನ ಅರ್ಚಕ ಒದರಾಡಿದ.''

''ನಾನು ಮತಾಂತರಗೊಂಡಿಲ್ಲ.''

''ಆದರೂ ಅವಳು ಮುಸಲ್ಮಾನಳು. ಪರಜಾತಿಯವಳು ಮತ್ತು ನೀನು ಧರ್ಮಭ್ರಷ್ಟ.''

ಕಾಲಚಂದನ ಕಣ್ಣುಗಳು ಕೋಪಾವಿಷ್ಟವಾದವು: ''ನನಗೆ ಬೈದಾಡುತ್ತಿದ್ದೀರಿ. ಧರ್ಮಶಾಸ್ತ್ರದಲ್ಲಿ ನಿಂದಿಸಬೇಕೆಂದು ಹೇಳಿಲ್ಲ,'' ಎಂದು ಬುಸುಗುಟ್ಟಿದ.

''ನಿನ್ನ ಹೇಯ ಕೃತಿಗೆ ವೇದ, ಪುರಾಣ, ಉಪನಿಷತ್ತುಗಳ ಸಮರ್ಥನೆ ನೀಡುವಿಯಾ?''

''ಹೌದು. ನಾನು ನನ್ನ ಧರ್ಮವನ್ನು ಹೇಗೆ ಅಪವಿತ್ರಗೊಳಿಸಿರುವೆನೆಂಬುದನ್ನಷ್ಟು ಹೇಳಿ? ನಾನೊಂದು ಹೆಣ್ಣನ್ನು ಮದುವೆಯಾಗಿದ್ದೇನಷ್ಟೆ.''



''ಆ ಮ್ಲೇಚ್ಛಳೊಡನೆ ಮದುವೆಯೇ? ನಾವು ನಮ್ಮ ಮಕ್ಕಳನ್ನು ಮುಸಲ್ಮಾನರೊಂದಿಗೆ ಮದುವೆ ಮಾಡುವುದಿಲ್ಲ.''

ವಾದಿಸುವದರಲ್ಲಿ ಅರ್ಥವಿರಲಿಲ್ಲ. ಇದು ಧರ್ಮಶಾಸ್ತ್ರಗಳೊಂದಿಗೆ ಹೋರಾಟವಲ್ಲ, ಮತಾಂಧರ ಅಭಿಪ್ರಾಯದೊಂದಿಗೆ ಹೋರಾಟ. ರೋಷದಿಂದ ಆತ ಖಡ್ಗ ಹಿರಿದ. ಬ್ರಾಹ್ಮಣರೆಲ್ಲ ನಡುಗಿದರು. "ನಿಮ್ಮನ್ನೆಲ್ಲ ತುಂಡರಿಸಿ ನಿಮ್ಮ ಹೆಣಗಳನ್ನು ಹದ್ದುಗಳಿಗೆ ಬಿಸಾಡುತ್ತಿದ್ದೆ. ಆದರೆ ನಿಮ್ಮ ದೇಹಗಳಿಂದ ನನ್ನ ಖಡ್ಗವನ್ನು ಅಶುದ್ಧಗೊಳಿಸುವದಿಲ್ಲ,'' ಅಂದ ಕಾಲಚಂದ.

ಪುರೋಹಿತರು ಸ್ವಲ್ಪ ಬೆದರಿದರೂ ಹಿಮ್ಮೆಟ್ಟಲಿಲ್ಲ. ಕಾಲಚಂದನ ಮುಖದ ಮೇಲೆ ತಾತ್ಸಾರ ಮೂಡಿತು.

''ಒಂದು ದಾರಿಯುಂಟು, ಕಾಲಚಂದ,'' ಎಂದು ಚಿತ್ತರಂಜನದತ್ತ ಎಂಬ ಮತ್ತೊಬ್ಬ ಪಂಡಿತ ಹೇಳಿದ.

''ಅದೇನು?''

''ಜಗನ್ನಾಥನ ಮಂದಿರಕ್ಕೆ ಹೋಗು. ಏಳು ದಿನ ಉಪವಾಸವಿರು. ನಿನಗೆ ದಿವ್ಯದರ್ಶನವಾಗುವುದು. ಆಗ ನೀನು ಶುದ್ಧನಾಗುವಿ.''

''ಹಾಗೆಯೇ ಮಾಡುವೆ,'' ಎಂದು ಹೇಳಿ. ಬಳಿಕ ಅಜ್ಜನ ಮುಂದೆ ಹೋದ. ''ತಾತ, ನಾನು ಪಾಪ ಮಾಡಿರುವೆನೆ?''

''ಇಲ್ಲ,ಮಗು. ಆದರೆ ನಾವು ಸಮಾಜವನ್ನು ಎದುರುಹಾಕಿಕೊಳ್ಳುವುದು ಸಾಧ್ಯವಿಲ್ಲ. ಅದರ ಇಚ್ಛೆಯ ಪ್ರಕಾರವೇ ನಡೆಯಬೇಕು.''

''ನಾನಿನ್ನೂ ಬ್ರಾಹ್ಮಣ. ಮತಾಂತರಗೊಂಡಿಲ್ಲ.''

''ಆ ಮುಸಲ್ಮಾನ ಹುಡುಗಿಯನ್ನು ಮದುವೆಯಾದರೆ ಹೀಗಾಗುವದೆಂದು ನಿನಗೆ ತಿಳಿದಿರಲಿಲ್ಲವೆ?''

''ಇಲ್ಲ, ನನ್ನ ಜನರ ಈ ಮೂರ್ಖತನವನ್ನು ನೋಡುವದಕ್ಕಿಂತ ನಾನು ಸಾಯುವುದೇ ಲೇಸಿತ್ತು.''

''ನೀನು ಕಠೋರನಾಗಿರುವಿ, ಚಂದು.''

''ಮತ್ತೇನು ಮಾಡಲಿ? ಕೈ ಕಾಲುಗಳ ಮೇಲೆ ತೆವಳುತ್ತ ಕ್ಷಮೆ ಕೋರಲೆ? ಎದೆ ಎದೆ ಬಡಿದುಕೊಂಡು ತಲೆಗೂದಲು ಕಿತ್ತುಕೊಳ್ಳಲೆ? ಪಂಡಿತರ ದೃಷ್ಟಿಯಲ್ಲಿ ನಾನು ಪಾಪಿಷ್ಠನೆಂದು ಗೋಳಾಡಲೆ? ಏನು ಮಾಡಲಿ ಹೇಳು, ತಾತ.''

''ಜಗನ್ನಾಥ ಮಂದಿರಕ್ಕೆ ಹೋಗಿ ಬಾರಯ್ಯ, ಅದೇ ನಿನಗೆ ಪ್ರಾಯಶ್ಚಿತ್ತ.''

ಆತನ ಪತ್ನಿಯರು ಕಣ್ಣೀರು ಸುರಿಸಿದರು.

''ನೀವೂ ನನ್ನನ್ನು ದ್ವೇಷಿಸುತ್ತೀರಲ್ಲವೇ?'' ಸಿಡುಕಿನಿಂದ ಕೇಳಿದ ಕಾಲಚಂದ.

''ಇಲ್ಲ, ನಾವು ನಿಮ್ಮ ದಾಸಿಯರು. ಪತಿಪತ್ನಿಯರ ಅನುಬಂಧವನ್ನು ಯಾವ ಧರ್ಮವೂ ಬದಲಾಯಿಸಲಾರದು.''

''ಹಾಗಾದರೆ ನನ್ನ ಸಂಗಡ ಬರುವಿರಾ?''

''ಸಂತೋಷದಿಂದ.''

ಆದರೆ ಇದನ್ನು ಜ್ಞಾನೇಂದ್ರನಾಥ ವಿರೋಧಿಸಿದ. ''ಪತಿಯ ಸಂಗಡ ಪತ್ನಿಯಿರಬೇಕು ನಿಜ. ಆದರೆ ಮುಂದೆ ನಿಮ್ಮ ಮಕ್ಕಳ ಗತಿ ಏನು?''

ಕಾಲಚಂದ ಭುಜ ಹಾರಿಸಿದ. ''ನನಗೆ ಮಕ್ಕಳಾಗುವುದೇ ಬೇಡ.''

''ಹಾಗಾದರೆ ಮದುವೆ ಏಕೆ? ಪತ್ನಿಯರೇತಕ್ಕೆ?''

''ಈ ಮನೆಯಲ್ಲಿ ನೀನು ಕಾಲಿರಿಸಿದ್ದರಿಂದ ಅದರ ಶುದ್ಧೀಕರಣವಾಗಬೇಕು. ಈ ಹುಡುಗಿಯರನ್ನು ನೀನು ಮುಟ್ಟಿದರೆ ಅವರು ಪುನಃ ಈ ಮನೆಯಲ್ಲಿ ಕಾಲಿಡಲಾರರು,'' ಆತನ ವೃದ್ಧ ಅತ್ತೆ ಅಂದಳು.

''ಯಾಕೆ, ಅಜ್ಜೀ?''

''ನಿನ್ನ ಅಜ್ಜ ಸತ್ತು ಹೋಗಿದ್ದಾಳೆ. ನೀನು ನಮ್ಮ ಧರ್ಮಶಾಸ್ತ್ರಗಳನ್ನೆಲ್ಲ ಭ್ರಷ್ಟಗೊಳಿಸಿದ್ದೀ.''

ಆತನ ತಾಯಿ ಸ್ವಲ್ಪ ಸೌಮ್ಯವಾಗಿ ಹೇಳಿದಳು ''ಚಂದು. ಜಗನ್ನಾಥಮಂದಿರಕ್ಕೆ ಹೋಗಿ ಭಗವಂತನ ಕ್ಷಮೆ ಕೋರು. ಎಲ್ಲವೂ ಸರಿಯಾಗುವುದು.''

ಕಾಲಚಂದ ಏಕಾಕಿಯಾಗಿ ಪುರಿಗೆ ದೀರ್ಘ ಪ್ರಯಾಣ ಕೈಕೊಂಡ.

★

ಪುರಿಯಿರುವುದು ಉತ್ಕಲದಲ್ಲಿ. ಸಾವಿರಾರು ವರ್ಷಗಳಿಂದ ಹಿಂದೂಗಳಿಗೆ ಪವಿತ್ರ ತೀರ್ಥ ಕ್ಷೇತ್ರ. ಭಾರತದಾದ್ಯಂತ ಜಗನ್ನಾಥಪುರಿ ಎಂದು ಖ್ಯಾತಿಪಡೆದ ಈ ಯಾತ್ರಾಸ್ಥಳ ಸಮುದ್ರತೀರದಲ್ಲಿರುವ ಪಟ್ಟಣ. ಅದರ ಮಧ್ಯೆ ಜಗನ್ನಾಥನ ಮಹಾಮಂದಿರ. ದೇವಾಲಯದ ಸುತ್ತಲೂ ದೊಡ್ಡ ಕಲ್ಲಿನ ಗೋಡೆ. ಪ್ರಾಕಾರದೊಳಗೆ ಮತ್ತೆ ಸುಮಾರು ನೂರಾಇಪ್ಪತ್ತು ಸಣ್ಣ ಮಂದಿರಗಳು. ದೇವಾಲಯದೊಳಗೆ ನಟಮಂದಿರ, ಭೋಗಮಂದಿರ, ಜಗಮೋಹನ ಮತ್ತು ಗರ್ಭಗೃಹವೆಂದು ನಾಲ್ಕು ಸಭಾಂಗಣಗಳು. ನಟಮಂದಿರದಲ್ಲಿ ದೇವದಾಸಿಯರು ನೃತ್ಯ, ಸಂಗೀತಗಾರರು ಭಜನೆ ಪ್ರಸ್ತುತಪಡಿಸುವರು. ಭೋಗಮಂದಿರದಲ್ಲಿ ಪ್ರಸಾದ ಸ್ವೀಕರಿಸುವುದು. ಜಗಮೋಹನದಲ್ಲಿ ಜಗನ್ನಾಥನ ದರ್ಶನಕ್ಕೆ ಕುಳಿತುಕೊಳ್ಳುವುದು. ಗರ್ಭಗೃಹದಲ್ಲಿ ಜಗನ್ನಾಥ, ಬಲಭದ್ರ ಹಾಗೂ ಸುಭದ್ರಾ - ಮೂರು ಮೂರ್ತಿಗಳುಂಟು. ಸುತ್ತಲೂ ಸ್ನಾನದ ಅನೇಕ ಪವಿತ್ರ ಹೊಂಡಗಳು.

ಕಾಲಚಂದ ಹೊಂಡಗಳಲ್ಲಿ ಸ್ನಾನ ಮಾಡಿ ಜಗಮೋಹನದಲ್ಲಿ ಕುಳಿತ. ಆ ಮೇಲೆ ಕಣ್ಣು ಮುಚ್ಚಿ ನೆಲದ ಮೇಲೆ ಸಾಷ್ಟಾಂಗ ಹಾಕಿದ. ಏಳು ದಿನ ಯಾವುದರ ಪರಿವೆಯಿಲ್ಲದೆ ಹಾಗೇ ಸಾಷ್ಟಾಂಗ ಬಿದ್ದುಕೊಂಡಿದ್ದ. ದಿವ್ಯದರ್ಶನಕ್ಕಾಗಿ ಕಾಯ್ದೇ ಕಾಯ್ದ. ಏಳು ದಿನಗಳ ನಂತರ, ಕ್ಷೀಣ, ನಿರ್ವಿಣ್ಣನಾಗಿ ಎದ್ದ. ಕಣ್ಣು ಗುಳಿಬಿದ್ದು, ತುಟಿಗಳು ಒಣಗಿ ಸೀಳಿಬಿಟ್ಟಿದ್ದವು. ಮುಖ ವಿವರ್ಣವಾಗಿತ್ತು. ಹುಚ್ಚು ಹಿಡಿದವನಂತೆ ಕಾಣಿಸುತ್ತಿದ್ದ.

ಎದ್ದು, ಕಂಬವೊಂದಕ್ಕೆ ತತ್ತರಿಸುತ್ತ ಹೋಗಿ ಅದಕ್ಕೆ ಆತು ನಿಂತ. ಕಣ್ಣು ಮುಂದೆ ಎಲ್ಲವೂ ಸುತ್ತಿದಂತೆನಿಸಿತು. ಕಷ್ಟಪಟ್ಟು ಕಣ್ಣು ತೆರೆದಾಗ ಅವನೆದುರು ಪಂಡಿತರ ಗುಂಪು ನಿಂತಿದ್ದು. ಕಾ



"ಏನಿಲ್ಲಾ ಪೂಜಾರ್ರೆ... ನಾನು ಪಾಸಾದ್ರೆ ದೇವರಿಗೆ 'ಟೈ' ಕೊಡಿಸ್ತೇನಿ ಅಂತ ಬೇಡಿಕೊಂಡಿದ್ದೆ."

ಸಿತು. ಅವರ ಮುಖಗಳು ನಿಷ್ಠುರವಾಗಿದ್ದವು.

ಗರ್ಭಗೃಹದ ಬಾಗಿಲು ಮುಚ್ಚಿದ್ದು ಕಂಡು ಆಶ್ಚರ್ಯಪಟ್ಟ. "ನೀವು ಬಾಗಿಲು ಮುಚ್ಚಿದಿರಾ?" ಎಂದು ಗಡುಸು ಧ್ವನಿಯಲ್ಲಿ ಕೇಳಿದ.

"ಹೌದು, ನಿನ್ನ ಬಗ್ಗೆ ಕೇಳಿದೆವು. ನೀನು ಜಾತಿಗೆಟ್ಟವನು. ಈ ಮಂದಿರದಲ್ಲಿ ನಿನಗೆ ಸ್ಥಾನ ವಿಲ್ಲ, ಮುಖ್ಯ ಅರ್ಚಕ ಬ್ರಿಜೇಶ್ವರ ಸ್ವಾಮಿ ಗರ್ಜಿಸಿದ."

"ಆದರೆ ನಾನು ಬ್ರಾಹ್ಮಣ."

"ಮೊದಲು ಬ್ರಾಹ್ಮಣನಾಗಿದ್ದಿ. ಈಗಲ್ಲ. ಈಗ ನಿನ್ನ ಧರ್ಮ ಬೇರೆ. ನಮ್ಮ ಮುಂದೆ ನೀನು ನಿಲ್ಲುವುದೇ ಬೇಡ."

"ಆದರೆ ನಾನು ನಿಮ್ಮ ಮುಂದಿಲ್ಲ. ನಾನು ಇದ್ದದ್ದು ಜಗನ್ನಾಥನ ಮುಂದೆ.

"ಎಲ್ಲ ಒಂದೇ. ನಾವು ಆತನ ಅರ್ಚಕರು."

"ನೀವು ನನ್ನ ಮುಕ್ತಿಮಾರ್ಗವನ್ನು ಅಡ್ಡಗಟ್ಟುವಿರಾ?"

"ಆದರೆ ನಿನಗೆ ಮುಕ್ತಿಯೆ ಇಲ್ಲ."

"ಜಗನ್ನಾಥ ನನ್ನ ಪಶ್ಚಾತ್ತಾಪಕ್ಕೆ ಅನುಗ್ರಹಿಸುವನೆಂದು ನನ್ನ ನಂಬಿಕೆ."

"ನಿನ್ನಂಥ ದುರುಳನ ಉದ್ಧಾರವಾಗಬೇಕೆಂಬುದು ದೇವರಿಚ್ಛೆ ಇಲ್ಲ."

"ವೇದಪಾರಂಗತನಾದ ಪಂಡಿತನಿಗಿಂತ ಶ್ರದ್ಧಾಭಕ್ತಿ ಇರುವ ಕೀಳು ಮಾನವನೆ ನನಗೆ ಪ್ರಿಯ ಎಂದು ದೇವರು ನುಡಿದಿಲ್ಲವೇ?" ಕಾಲಚಂದ ಕೋಪ ಹತ್ತಿಕ್ಕಿಕೊಂಡು ಹೇಳಿದ.

ಪಂಡಿತರು ನಕ್ಕರು. ಕಾಲಚಂದ ಹಲ್ಲು ಕಡಿದ.

"ನೀನು ಮಂದಿರವನ್ನು ಅಶುದ್ಧಗೊಳಿಸಿರುವಿ. ನೀನೀಗ ಧರ್ಮಭ್ರಷ್ಟ."

"ದೇವರ ಮುಂದೆ ಎಲ್ಲರೂ ಒಂದೆ."

ಧರ್ಮಶಾಸ್ತ್ರ ಉಲ್ಲೇಖಿಸುವದರಿಂದ ನಿನಗೇನೂ ಪ್ರಯೋಜನವಿಲ್ಲ. ಇಲ್ಲಿಂದ ಹೊರಬೀಳು. ಇಲ್ಲವಾದರೆ ಹೊರಹಾಕಿಸಬೇಕಾಗುತ್ತದೆ," ಬ್ರಿಜೇಶ್ವರ ಸ್ವಾಮಿ ನಿಷ್ಠುರವಾಗಿ ಅಂದ.

ಕಾಲಚಂದನ ತಲೆ ಸುತ್ತಿತು. ಅವನಲ್ಲಿ ಕ್ರೋಧ ಕುದಿಯಿತು. ಪಂಡಿತರನ್ನು ದಿಟ್ಟಿಸುತ್ತ, "ನೀವು ನನಗೆ ಬಾಗಿಲು ಮುಚ್ಚಿದಿರಿ. ದೇವರನ್ನು ಬೀಗ ಹಾಕಿಟ್ಟಿರಿ. ಸರಿ, ನಾನು ಹೋಗುವೆ," ಎಂದು ರೋಷಪೂರಿತ ಧ್ವನಿಯಲ್ಲಿ ಅಂದ. ಬಳಿಕ ಸೆಟೆದು ನಿಂತು ಹೇಳಿದ: "ನಾನೀಗ ಹೋಗುವೆ. ಆದರೆ ಪುನಃ ಬರುವೆ. ಸ್ನೇಹ, ಶಾಂತಿಯ ಸ್ವರಗಳಿಂದಲ್ಲ; ಖಡ್ಗ, ಉರಿಯುವ ಜ್ವಾಲೆಗಳಿಂದ."

ಪಂಡಿತರು ತಿರಸ್ಕಾರದಿಂದ ನಕ್ಕರು. "ನಿನ್ನ ಬಡಾಯಿಯನ್ನು ಮತ್ತೆಲ್ಲಿಯಾದರೂ ಹೋಗಿ ಕೊಚ್ಚು," ಎಂದು ಪರಿಹಾಸ್ಯ ಮಾಡಿದರು.

ಆತ ತಿರುಗಿ ಟಂಡಾಕ್ಕೆ ಹೋದ. "ಅವರು ನನ್ನನ್ನು ಬಹಿಷ್ಕರಿಸಿದರು. ನಾನು ಜಾತಿಗೆಟ್ಟವನೆಂದರು. ಈಗ ನಾನು ಹಿಂದೂ ಅಲ್ಲ. ಮುಸಲ್ಮಾನನೂ ಅಲ್ಲ," ಎಂದು ದುಲಾರಿಗೆ ಹೇಳಿದ.

ಆಕೆ ಅವನನ್ನು ಸಂತೈಸಲು ಪ್ರಯತ್ನಿಸಿದಳು. ಹೀಗಾಗುವುದೆಂದು ಅವಳಿಗೂ ಗೊತ್ತಿರಲಿಲ್ಲ. ''ಕಾಲಕ್ರಮೇಣ ಎಲ್ಲ ಮರೆಯುವರು. ಒಂದೆರಡು ವರ್ಷದಲ್ಲಿ ಎಲ್ಲವೂ ಸರಿಯಾಗುವುದು,'' ಅಂದಳು ಆಕೆ.

''ದುಲಾರಿ, ನಿನಗೆ ನಮ್ಮ ಜನರ ಸ್ವಭಾವ ಗೊತ್ತಿಲ್ಲ. ಕಲ್ಲು ಕರಗಿಸಬಹುದು. ಆದರೆ ಪುರೋಹಿತರ ಮನಸ್ಸನ್ನು ಬದಲಾಯಿಸುವುದು ಸಾಧ್ಯವಿಲ್ಲ,'' ಕಟುವಾಗಿ ಅಂದ ಕಾಲಚಂದ.

''ಹೀಗೆಲ್ಲ ಅನ್ನಬೇಡಿ ಸ್ವಾಮಿ, ಸ್ವಲ್ಪ ತಾಳಿ, ಎಲ್ಲವೂ ಸರಿಹೋಗುವುದು.''

ಕಾಲಚಂದ ಸುಲ್ತಾನನನ್ನು ಭೇಟಿಯಾಗಿ, ''ಮಹಾಪ್ರಭು, ನಾನು ಅವಮಾನಿತನಾಗಿದ್ದೇನೆ. ಇಡೀ ಆಯುಷ್ಯದಲ್ಲಿ ಇಂಥ ಅಪಮಾನ ಕಂಡಿರಲಿಲ್ಲ. ಅವರ ತಿರಸ್ಕಾರ ಪರಿಹಾಸ್ಯಗಳಿಂದಾಗಿ ಚಬಕದಿಂದ ಹೊಡೆದಂತೆನಿಸುತ್ತದೆ. ನಾನು ಸೇಡು ತೀರಿಸಿಕೊಳ್ಳುವೆ,'' ಅಂದ.

''ಇಂಥ ಸಣ್ಣ ಮಾತಿಗೆ ಸೇಡು ತೀರಿಸಿಕೊಳ್ಳುವುದೆ? ಕಾಲಕ್ರಮೇಣ ನಿನ್ನ ಗಾಯ ಮಾಯುವುದು.''

''ಇಲ್ಲ, ಮಹಾರಾಜ. ನಿಮ್ಮಲ್ಲಿ ನನ್ನದೊಂದು ಅರಿಕೆ.''

''ಅದೇನು?''

''ನಾನು ಮುಸಲ್ಮಾನನಾಗಬೇಕು.''

''ಏನು!'' ಸುಲ್ತಾನನಗೆ ಆಘಾತವಾಯಿತು.

''ಹೌದು ಮಹಾರಾಜ, ನನಗೆ ಮತಾಂತರವಾಗಲು ಅನುಕೂಲ ಮಾಡಿಕೊಡಿ.''

''ದುಲಾರಿಯನ್ನು ಕೇಳಿದಿಯಾ?''

''ಇಲ್ಲ. ಎಲ್ಲದಕ್ಕೂ ಹೆಂಗಸರನ್ನೇನು ಕೇಳುವುದು? ನನಗೆ ಸಹಾಯಮಾಡಿ ಮಹಾರಾಜ.''

''ಸರಿ ನಿನ್ನಿಷ್ಟ,'' ಎಂದು ಸುಲ್ತಾನ ಕಾಜಿಗೆ ಹೇಳಿಕಳಿಸಿದ.

ಕಾಜಿ ಉತ್ಸಾಹಭರಿತನಾಗಿದ್ದ. ವಜೀರನೂ ಅಷ್ಟೆ. ಎಲ್ಲ ಆಸ್ಥಾನಿಕರ ಸಮ್ಮುಖದಲ್ಲಿ ಕಾಲಚಂದ ಮುಸಲ್ಮಾನ ಧರ್ಮಕ್ಕೆ ಪರಿವರ್ತಿತನಾಗಿ ತನ್ನ ಹೆಸರನ್ನು ಮಹಮ್ಮದ ಫರ್ಮುಲಿ ಎಂದು ಬದಲಾಯಿಸಿಕೊಂಡ.

ದುಲಾರಿಯ ಭೇಟಿಯಾದಾಗ ಆಕೆ ಕುಪಿತಳಾಗಿದ್ದಳು.

''ನಿಮಗೆ ಹುಚ್ಚು ಹಿಡಿದಿದೆ. ಮತಾಂತರವಾಗುವ ಅವಶ್ಯಕತೆಯಾದರೂ ಏನಿತ್ತು.''

''ನಾನು ಜಾತಿಭ್ರಷ್ಟನಾಗಿರಬೇಕು ದುಲಾರಿ. ಹಿಂದುಗಳು ನನ್ನನ್ನು ತ್ಯಜಿಸಿದಾಗ ಮುಸಲ್ಮಾನರು ನನಗೆ ಆಶ್ರಯ, ನೈತಿಕ ಆಧಾರ ನೀಡಿದರು. ಈಗ ನಾನು ಕುಲೀನ.''

''ಈ ಕಾರಣದ ಹೊರತಾಗಿ ಇನ್ನೊಂದು ಉದ್ದೇಶವೂ ಉಂಟು, ಅದೇನು ಸ್ವಾಮಿ?''

''ಏನೂ ಇಲ್ಲ, ದುಲಾರಿ. ಎಲ್ಲಾ ನಿನ್ನ ಕಲ್ಪನೆ.''

''ಇಲ್ಲ. ಈ ನಿಮ್ಮ ಮತಾಂತರದಲ್ಲಿ ಮತ್ತೇನೋ ಉದ್ದೇಶವಿದೆಯೆಂದು ನನ್ನ ಒಳಮನಸ್ಸು ಹೇಳುತ್ತಿದೆ.''

''ನೀನು ಬಹಳೇ ಪ್ರಶ್ನೆ ಕೇಳುತ್ತಿರುವಿ.''

''ನೀವು ಬಲು ರಹಸ್ಯಾತ್ಮಕವಾಗಿರುವಿರಿ. ನಾನು ನಿಮ್ಮ ಪತ್ನಿ. ನನ್ನ ಮುಂದೇಕೆ ಮುಚ್ಚುಮರೆ?''

''ಈಗ ನಾನು ಮುಸಲ್ಮಾನ. ಒಳ್ಳೆ ಧರ್ಮಿಷ್ಠನಾಗಬೇಕು. ಅಷ್ಟೇ.''

ಕಾಲಚಂದನ ತಾತ, ತಾಯಿ, ಅತ್ತೆ, ಪತ್ನಿಯರು ಈ ಸುದ್ದಿಯನ್ನು ಕೇಳಿ ದಂಗುಬಡಿದಂತಾದರು. ಅತ್ತು ಕರೆದು ಎದೆ ಎದೆ ಬಡಿದುಕೊಂಡು ಗೋಳಾಡಿದರು. ಆತನನ್ನು ಸಂಪೂರ್ಣವಾಗಿ ಕಳೆದುಕೊಂಡೆವೆಂದು ನರಳಾಡಿದರು.

4

ಮಹಮ್ಮದ ಫರ್ಮುಲಿ ಭಾರಿ ದೊಡ್ಡ ಸೈನ್ಯ ಕೂಡಿಸಿ ಉತ್ಕಲದ ಮೇಲೆ ದಂಡೆತ್ತಿ ಹೋದ. ಅಲ್ಲಿಯ ರಾಜಾ ಮುಕುಂದದೇವ ವೃದ್ಧನಾಗಿದ್ದರೂ ಇನ್ನೂ ಪ್ರಬಲನಾಗಿದ್ದ. ''ಸುಲೆಮಾನ ಕರಾರಣಿಗೆ ಕಳೆದ ಸಲದ ಸೋಲಿನಿಂದ ಇನ್ನೂ ಬುದ್ಧಿಬಂದಿಲ್ಲವೆಂದು ಕಾಣಿಸುತ್ತದೆ. ಈಗೊಬ್ಬ ಕಾಚುಮುಂಚಾದವನನ್ನು ಕಳಿಸಿದ್ದಾನೆ. ಆ ಕುನ್ನಿಗೊಂದು ಸರಿಯಾದ ಪಾಠ

ಕಲಿಸೋಣ. ಆತ ಬರಲಿ, ನೋಡೋಣ,'' ಎಂದ ಮುಕುಂದದೇವ.

''ಮಹಾರಾಜ, ಮೊಹಮ್ಮದ ಘರ್ಮುಲಿ ಮೊದಲು ಹಿಂದೂ ಆಗಿದ್ದ,'' ಮಂತ್ರಿ ವಿಶ್ವನಾಥದಾಸ ಹೇಳಿದ.

''ಯುದ್ಧದಲ್ಲಿ ಧರ್ಮದ್ರೋಹಿಯೆಂದೂ ಯಶಸ್ವಿಯಾಗಲಾರ ವಿಶ್ವನಾಥ. ಈ ಸಲವೂ ಆತನನ್ನು ಸೋಲಿಸೋಣ. ಸಡಿಲು ಬಿಟ್ಟಷ್ಟು ಈ ಜನ ತಿರುತಿರುಗಿ ಬರುತ್ತಾರೆ.''

''ಹಾಗಾದರೆ ಸಾಧ್ಯವಿದ್ದಷ್ಟು ಸೈನ್ಯ ಒಟ್ಟು ಗೂಡಿಸಬೇಕು ಮಹಾರಾಜ,'' ಮಂತ್ರಿಪುತ್ರ ರಾಮಚಂದ್ರದೇವ ಅಂದ.

''ಹಾಗೆಯೆ ಆಗಲಿ ರಾಮಚಂದ್ರ. ರಾಜ್ಯದ ರಕ್ಷಣೆಗೆ ಎಲ್ಲ ಸಿದ್ಧತೆ ಮಾಡು.''

ಉತ್ಕಲದ ರಾಜಧಾನಿ ಜಾಜಪುರದಲ್ಲಿ ಘೋರ ಹೋರಾಟ ನಡೆಯಿತು. ಮಹಮ್ಮದ ಘರ್ಮುಲಿ ಸೈತಾನನಂತೆ ಕಾದಾಡಿದ. ಹಿಂದೂ ಸೈನ್ಯವೂ ರಭಸದಿಂದ ಹೋರಾಡಿದರೂ ಪ್ರತೀಕಾರಕ್ಕೆ ಹಸಿದವನಿಗೆ ಸರಿಸಮವಾಗಲಿಲ್ಲ. ರಾಜಾ ಮುಕುಂದದೇವ ಶತ್ರುಸೈನ್ಯವನ್ನು ಸಾಕಷ್ಟು ಸಂಹರಿಸಿ ಕೊನೆಗೆ ಮಹಮ್ಮದ ಘರ್ಮುಲಿಯೊಂದಿಗೆ ನಡೆದ ದ್ವಂದ್ವಯುದ್ಧದಲ್ಲಿ ವೃದ್ಧನಾದ ಮುಕುಂದದೇವ ಕುಸಿದುಬಿದ್ದ. ಮಹಮ್ಮದ ಆತನ ತಲೆ ತುಂಡರಿಸಿ ಭರ್ಚಿಗೆ ಚುಚ್ಚಿ ಎತ್ತಿ ಹಿಡಿದ. ಹಿಂದೂ ಸೈನ್ಯ ದಿಕ್ಕೆಟ್ಟು ಓಡಿತು. ಉತ್ಕಲದಲ್ಲಿ ಮೊಗಲರ ಆಳಿಕೆ ಪ್ರಾರಂಭವಾಯಿತು.

ಅಲ್ಲಿಂದ ಮುಸ್ಲಿಮ್ ಸೈನ್ಯ ಪುರಿಯತ್ತ ನಡೆಯಿತು. ಅದೊಂದು ಹಿಂದೂಗಳಿಗೆ ಯಾತ್ರಾಸ್ಥಳ ಮಾತ್ರವಾಗಿತ್ತು. ಈ ವರೆಗೆ ಪುರಿಗೆ ಯಾವ ಹೊರನಾಡಿನವನೂ ಬಂದಿರಲಿಲ್ಲ. ಹೀಗಾಗಿ ಈ ಸೈನ್ಯ ಅಲ್ಲೇಕೆ ಬರುತ್ತಿದೆಯೆಂಬುದು ಅಲ್ಲಿನ ಬಹುಪಾಲು ಜನರಿಗೆ ಅರ್ಥವಾಗಲಿಲ್ಲ.

ಜಗನ್ನಾಥ ದೇವಾಲಯದ ಮುಂದೆ ನಿಂತು ಮಹಮ್ಮದ ಘರ್ಮುಲಿ ಕತ್ತೆಕಿರುಬನಂತೆ ನಕ್ಕ. ಬಳಿಕ ತನ್ನ ಉಪನಾಯಕ ನೂರುಲ್ ಹಸನನಿಗೆ ಅದನ್ನು ನಾಶಪಡಿಸಲುಡಲು ಆಜ್ಞಾಪಿಸಿ, ''ಜನರನ್ನೆಲ್ಲ ಕೊಂದು ಹಾಕು. ಪುರೋಹಿತರನ್ನು ಮಾತ್ರ ಉಳಿಸು,'' ಎಂದು ಆದೇಶಿಸಿದ.

ಸೈನಿಕರೆಲ್ಲ ಕ್ರಮಬದ್ಧವಾಗಿ ಕಾರ್ಯೋನ್ಮುಖರಾದರು. ದೇವಾಲಯದ ಬಾಗಿಲು ಮುರಿದು ದೇವರ ವಿಗ್ರಹಗಳನ್ನು ಒಡೆದುಹಾಕಿದರು. ಅಲ್ಲಿಯ ಪ್ರತಿಯೊಬ್ಬರೂ ಅವರ ಖಡ್ಗಕ್ಕೆ ತುತ್ತಾದರು. ಅರ್ಚಕರನ್ನು ಕೈದಿಗಳಂತೆ ಬಂಧಿಸಿ ಬಳಿಕ ಮಂದಿರಕ್ಕೆ ಕೊಳ್ಳೆಯಿಡಲಾಯಿತು.

ಮಹಮ್ಮದ ಘರ್ಮುಲಿ ಅರ್ಚಕರನ್ನು ಬಂಧಿಸಿಟ್ಟಲ್ಲಿ ಹೋಗಿ, 'ನನ್ನ ನೆನಪಿದೆಯೆ?' ಬ್ರಿಜೇಶ್ವರ ಸ್ವಾಮಿಯನ್ನು ಕೇಳಿದ.

''ನಿನ್ನ ಮುಖವನ್ನು ಎಲ್ಲೋ ನೋಡಿದ ಹಾಗಿದೆ.''

''ಒಂದು ವರ್ಷದ ಹಿಂದೆ ಇಲ್ಲಿಗೆ ಬಂದಿದ್ದೆ. ನಾನು ಧರ್ಮಭ್ರಷ್ಟ, ಜಾತಿಗೆಟ್ಟವನು, ಮುಸಲ್ಮಾನ ಪ್ರಿಯ.''

''ಕಾಲಚಂದ?'

''ಆಗ ಕಾಲಚಂದ. ಈಗ ಮಹಮ್ಮದ ಘರ್ಮುಲಿ. ನಾನು ಕೊಟ್ಟ ವಚನದ ಪ್ರಕಾರ ಮತ್ತೆ ಬಂದಿದ್ದೇನೆ.''

''ನೀನು ಮಂದಿರವನ್ನು ನಾಶಗೊಳಿಸಿರುವಿ. ಜಗನ್ನಾಥ ನಿನ್ನನ್ನು ಕ್ಷಮಿಸಲಾರ,'' ಬ್ರಿಜೇಶ್ವರ ಸ್ವಾಮಿ ಅಂದ.

''ಸರಿ ಬ್ರಿಜೇಶ್ವರ. ಮುಕ್ತಿ ನೀಡಿದಾತ ನಾಶ ಮಾಡಲಾರ. ಈ ದ್ವೇಷ ನೋಡು. ನನ್ನನ್ನು ಪರಿಹಾಸ್ಯ ಮಾಡಿದ್ದಕ್ಕೆ ನನ್ನ ಸೇಡು ತೀರಿಸಿಕೊಳ್ಳುವೆ,'' ಎಂದು ನೂರುಲ್ ಹಸನನನ್ನು ಕರೆದು, ''ಸೈನಿಕರಿಂದ ಆಳವಾದ ತಗ್ಗು ತೋಡಿಸಿ, ಈ ಅರ್ಚಕರನ್ನು ಕುತ್ತಿಗೆಯವರೆಗೆ ಜೀವಂತ ಹುಗಿಯಲು ಹೇಳು,'' ಎಂದು ಹೇಳಿದ. ಮೇಲೆ ಸೂರ್ಯಗೋಳ ಪ್ರಖರವಾಗಿ ಉರಿಯುತ್ತಿತ್ತು.

ಅರ್ಚಕರನ್ನು ಕುತ್ತಿಗೆಯವರೆಗೆ ಹುಗಿಯಲಾ

ಯಿತು. "ನಿಮ್ಮಲ್ಲಿ ಪ್ರತಿಯೊಬ್ಬನೂ ನೀರು, ದಯೆ, ಜೀವದಾನಕ್ಕಾಗಿ ಮೊರೆಯಿಡುವವರೆಗೂ ನಾನಿಲ್ಲಿಂದ ಕದಲುವದಿಲ್ಲ," ಎಂದಾತ ವಿಕಟವಾಗಿ ನಕ್ಕ.

ಪುರೋಹಿತರು ಗಟ್ಟಿಮನಸ್ಸಿನವರಾಗಿದ್ದು ಯಾತನೆಯನ್ನು ಸಹಿಸಿಕೊಂಡರು. ಆದರೆ ಕ್ರೂರ ಸೂರ್ಯ ಅವರನ್ನು ಸುಡುತ್ತಿದ್ದ. ಅವರ ಬಾಯಿಗಳು ಒಣಗಿ, ತುಟಿಗಳು ಸೀಳಿದವು. ಚರ್ಮ ಕೆಂಪಾಗಿ ಹುಣ್ಣುಗಳು ಒಡೆದವು. ಹಸಿವು, ಬಾಯಾರಿಕೆಯಿಂದ ಬಾಧೆಪಡುತ್ತಿದ್ದರೂ ಸಾಧ್ಯವಿದ್ದಷ್ಟು ಸಹಿಸಿಕೊಂಡರು. ಮರುದಿನ ಮತ್ತೆ ಸೂರ್ಯನ ಬಿಸಿಲಿನಲ್ಲಿ ಬೇಯತೊಡಗಿದರು. ಈಗ ಭೀಕರ ಹಿಂಸೆಯನ್ನು ತಾಳದಾದರು. ನೀರು ಬೇಕೆಂದು ಕಿರುಚಿದರು. ದಯೆ ತೋರಬೇಕೆಂದು ಅರಚಿದರು. ಅವರ ಧ್ವನಿಗಳು ಒಡೆದು ಅಡಗಿಹೋಗಿದ್ದವು.

ಮಹಮ್ಮದ ನಗೆಯಾಡಿದ. "ಅವರ ಕಣ್ಣುಗಳನ್ನು ಕೀಳು," ಎಂದು ನೂರುಲ್ ಹಸನನಿಗೆ ಆದೇಶಿಸಿದ.

ಕಣ್ಣುಗಳಿಂದ ರಕ್ತ ಹರಿದು ಬಿಸಿಲಲ್ಲಿ ಹೆಪ್ಪುಗಟ್ಟಿತು. ಮೂರನೆ ದಿನ ಬಹುತೇಕ ಎಲ್ಲರೂ ಸತ್ತುಹೋಗಿದ್ದರು. ಕೊನೆಯದಾಗಿ ಬ್ರಿಜೇಶ್ವರ ಪ್ರಾಣ ನೀಗಿದ. ಅವನ ಕಿವಿಯಲ್ಲಿ ಮಹಮ್ಮದನ ನಗೆಯಾಟ ನಗಾರಿಯಂತೆ ಬಡಿಯುತ್ತಿತ್ತು. ಪುರಿಯ ಇತಿಹಾಸದಲ್ಲಿ ಇಂಥ ಘಟನೆ ಎಂದೂ ನಡೆದಿರಲಿಲ್ಲ. ಮಂದಿರದಲ್ಲಿ ರಕ್ತದ ಹೊಳೆ ಹರಿಯಿತು.

ಕೆಲವು ದಿನಗಳ ನಂತರ ಆತ ಭಾದುರಿಯಾದ ಮೇಲೆ ದಂಡೆತ್ತಿ ಹೋದ. ಉತ್ತರ ಬಂಗಾಲದಲ್ಲಿ ಅದೊಂದು ಸಣ್ಣ ರಾಜ್ಯ. ಅದರ ರಾಜಾ ಸಮರಜೀತ ಭಾದುರಿಯಾ ಆತ ಯುದ್ಧದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ. ಪುರಿಯ ಬ್ರಾಹ್ಮಣರ ಅವಸ್ಥೆ ಕೇಳಿ ತಮಗೂ ಅದೇ ಗತಿ ಬಂದೀತೆಂದು ಎಲ್ಲ ಪುರೋಹಿತರೂ ಅವರ ಮುಖ್ಯಸ್ಥನಾದ ಸುರಪ್ರಸಾದನೂ ಥರಥರ ನಡುಗಿದರು. ಭಯಾಕ್ರಾಂತರಾಗಿ ಜ್ಞಾನೇಂದ್ರನಾಥನೆಡೆಗೆ ಹೋದರು.

"ಜ್ಞಾನೇಂದ್ರ, ನೀವು ನಮಗೆ ಸಹಾಯ



ಮಾಡಬೇಕು. ಆತನನ್ನು ಭೇಟಿಯಾಗಿ ಆತ ಮುನ್ನಡೆ ತಡೆಯಬೇಕು,'' ಸುರಪ್ರಸಾದ ಅಂದ.

ಜ್ಞಾನೇಂದ್ರ, ತಾತ್ಸರದಿಂದ ಅವರತ್ತ ನೋಡಿದ. ''ನೀವೇ ಇದಕ್ಕೆಲ್ಲಾ ಕಾರಣ. ನೀವು ವಿವೇಕಿಗಳಾಗಿದ್ದರೆ ಕಾಲಚಂದ ಇನ್ನೂ ನನ್ನ ಮೊಮ್ಮಗನಾಗಿರುತ್ತಿದ್ದ. ಹೀಗೆ ಭಯದಿಂದ ನಡುಗುವುದರ ಬದಲಾಗಿ, ಆತನನ್ನು ಆದರ ದಿಂದ ಸತ್ಕರಿಸುತ್ತಿದ್ದೆವು. ಜನರು ಎಂದೆಂದಿಗೂ ಮಹಮ್ಮದ ಫರ್ಮುಲಿಯನ್ನು ದ್ವೇಷಿಸುವರು; ಆದರೆ ದ್ವೇಷಿಸಬೇಕಾದವರು ನಿಮ್ಮನ್ನು. ನಮ್ಮ ಒಲವಿನ ದೇಶ, ನಮ್ಮ ದೇವತೆಗಳು, ನಮ್ಮ ಮಂದಿರಗಳ ವಿನಾಶದ ಕಾರಣ ನೀವೇ. ಜಾತಿ-ನೀತಿ-ಕುಲದ ಹುಚ್ಚುತನ ಮಾಯವಾದ ದಿನ, ನಮ್ಮ ದೇಶದ ಏಳಿಗೆಯಾಗುವುದು. ನಿಮ್ಮನ್ನು ಕಂಡರೆ ನನ್ನಲ್ಲಿ ಹೇಯ ಭಾವನೆ ಬರುವುದು. ಆದರೆ ನಮ್ಮ ನಾಡಿನ ಸಲುವಾಗಿ ನನ್ನ ಮೊಮ್ಮಗನನ್ನು ತಡೆಯುವೆ,'' ಎಂದು ಅವರನ್ನು ದೂಷಿಸಿದ.

ಅವರು ನಾಚಿಕೆಯಿಂದ ತಲೆ ತಗ್ಗಿಸಿದರು. ಜ್ಞಾನೇಂದ್ರನಾಥ ತನ್ನ ಇಬ್ಬರು ಪುತ್ರಿಯರ ಸಮೇತನಾಗಿ ಅರಮನೆಗೆ ಹೋಗಿ, ರಾಜಾ ಸಮರಜೀತನನ್ನು ಕಂಡು,''ಮಹಾರಾಜ, ನಮ್ಮನ್ನು ಒತ್ತೆಯಾಳುಗಳಾಗಿ ತೆಗೆದುಕೊಳ್ಳಲು ಮಹಮ್ಮದ ಫರ್ಮುಲಿಗೆ ಸಂದೇಶ ಕಳಿಸಿ; ಆತ ತಿರುಗಿ ಹೋಗುವನು,'' ಎಂದು ಹೇಳಿದ.

ರಾಜನಿಗೆ ಇದು ಅಪಮಾನಕರವಾದರೂ ವೃದ್ಧನ ಮಾತಿಗೆ ಸಮ್ಮತಿಸಿದ. ರಾಜ್ಯದ ಗಡಿಯಲ್ಲಿ ರಾಜಾ ಸಮರಜೀತನ ದೂತರು ಮಹಮ್ಮದ ಫರ್ಮುಲಿಯ ಭೇಟಿಯಾಗಿ ರಾಜನ ಸಂದೇಶವನ್ನು ತಿಳಿಸಿದರು.

''ಒತ್ತೆಯಾಳುಗಳೆ?'' ಮಹಮ್ಮದ ಒದರಾಡಿದ. ಆದರೆ ಅದನ್ನು ಕೇಳಿ ಸೇಡಿನ ವಿಚಾರವನ್ನು ಬಿಟ್ಟುಬಿಡಬೇಕಾಯಿತು. ಆದರೆ ಅವನಿಗೆ ತನ್ನ ತಾತನನ್ನೂ ಪತ್ನಿಯರನ್ನೂ ಭೇಟಿಯಾಗುವ ಧೈರ್ಯವಾಗಲಿಲ್ಲ. ಅವನು ಆ ಸೀಮೆ ಬಿಟ್ಟು ಪೂರ್ವದೆಡೆಗೆ ಸಾಗಿದ.

★

ದಿನಜಪುರ, ರಂಗಪುರ, ಕಾಮರೂಪ, ಕೂಚ-ಬಿಹಾರಗಳಲ್ಲಿ ಮುಂದಿನ ಕೆಲ ವರ್ಷಗಳವರೆಗೆ ಎಲ್ಲಿ ನೋಡಿದ್ದರಲ್ಲಿ ಅತ್ಯಾಚಾರ, ಲೂಟಿ, ಮಂದಿರಗಳ ವಿನಾಶ. ಆತನ ಸೈನ್ಯ ಕಾರ್ಮೋಡದಂತೆ ಹರಡಿತು. ಕುದುರೆಯ ಮೇಲೆ ನೆಟ್ಟಗೆ ಕುಳಿತಾತ ಮೃತ್ಯುದೇವತೆಯಾಗಿದ್ದ. ಮೈಲುಗಟ್ಟಲೆ ದೂರದಿಂದ ಬರಿ ಕರಿ ಪೋಷಾಕು ಕಾಣಿಸುತ್ತಿತ್ತು. ಜನರ ಕಲ್ಪನೆಯಲ್ಲಿ ದೂರದಿಂದ ಬರುವ ಆತನ ಭಯಂಕರ ಸೈನ್ಯ ಕಪ್ಪು ಪರ್ವತದಂತೆ ಗೋಚರಿಸುತ್ತಿತ್ತು. ಅದನ್ನು ನಡೆಸಿಕೊಂಡು ಬರುವ ಕಾಲಚಂದನಿಗೆ 'ಕಾಲಾ ಪಹಾಡ್' ಅಂದರೆ 'ಕಪ್ಪು ಬೆಟ್ಟ' ಎಂದೇ ಹೆಸರು ಬಿತ್ತು. ಆತ ಹೋದಲ್ಲೆಲ್ಲಾ ಈ ಮಾತು ಮೊದಲಾಯಿತು.

'ಓಡಿರಿ - ಕಾಲಾ ಪಹಾಡ್ ಬರುತ್ತಿದ್ದಾನೆ!'

''ಅಡಗಿಕೊಳ್ಳಿರಿ - ಕಾಲಾ ಪಹಾಡ್ ಬರುತ್ತಿದ್ದಾನೆ!''

''ಆತ್ಮಹತ್ಯೆಗೆ ಸನ್ನದ್ಧರಾಗಿ - ಇಲ್ಲವಾದರೆ ಕಾಲಾಪಹಾಡ್‌ನಿಂದ ನಿಮ್ಮ ಮತಾಂತರ ಕಟ್ಟಿಟ್ಟದ್ದು!''

ಆತ ಹೋದಲ್ಲೆಲ್ಲ ಮಂದಿರಗಳು, ಪೂಜಾರಿಗಳು ಆತನ ಕ್ರೂರದೃಷ್ಟಿಗೆ ಒಳಗಾಗುತ್ತಿದ್ದರು. ಕೊಲ್ಲುವುದು ಅವನಿಗೊಂದು ಆನಂದದ ಆಟವಾಗಿತ್ತು.

ಆತನ ಸೈನಿಕರೂ ಅವನ ಕ್ರೌರ್ಯವನ್ನು ನೋಡಿ ನಡುಗುತ್ತಿದ್ದರು. ಆತನ ಆಜ್ಞೆ ಪಾಲಿಸಲು ಅವರಿಗೆ ಹೇಸಿಕೆಯೆನಿಸುತ್ತಿತ್ತು. ಆದರೆ ನಿರ್ವಾಹವಿರಲಿಲ್ಲ. ನೂರುಲ್ ಹಸನ್ ಆತನಿಗೆ ವಿಧೇಯನಾಗಿದ್ದರೂ ಅವನಿಂದ ದೂರವಿರುತ್ತಿದ್ದ. ಕಾಲಾಪಹಾಡನ ರೋಷಕ್ಕೊಳಗಾದ ದುರ್ಭಾಗ್ಯರನ್ನು ಎಷ್ಟೋ ಸಲ ಪಾರಾಗಲು ಬಿಟ್ಟುಬಿಡುತ್ತಿದ್ದ.

ದುಲಾರಿಗೆ ಇದನ್ನು ಸಹಿಸಲು ಅಸಾಧ್ಯವಾದಾಗ ಆಕೆ ಕುಪಿತಳಾಗಿ ತಂದೆಯನ್ನು ಭೇಟಿ

ಯಾಗಿ, ''ಅಬ್ಬಾಜಾನ್, ನಿನ್ನ ಅಳಿಯನ ಅತ್ಯಾಚಾರವನ್ನು ತಡೆಯಬೇಕು,'' ಎಂದು ಹೇಳಿದಳು. ''ಆತನದೇನು ತಪ್ಪಿಲ್ಲ ಮಗು. ನನ್ನ ರಾಜ್ಯವನ್ನಾತ ಅಭಿವರ್ಧಿಸಿ, ಖಜಾನೆ ತುಂಬುತ್ತಿದ್ದಾನೆ.''

''ಅಬ್ಬಾಜಾನ್, ನಿಮ್ಮ ವಿಚಾರ ಅಷ್ಟೇ ತಾನೆ? ಪ್ರಜೆಗಳ ಯೋಗಕ್ಷೇಮದ ಚಿಂತೆಯಿಲ್ಲವೆ? ಅವರ ಸುಖಸಂತೋಷ ಮಹತ್ವದ್ದಲ್ಲವೆ? ಮತಾಂತರವಾಗದಿದ್ದವರನ್ನು ಕೊಲ್ಲುವುದು, ಮತಾಂತರವಾದವರನ್ನು ಬಂಧಿಸುವುದು ನ್ಯಾಯವೆ? ಅಬ್ಬಾಜಾನ್, ಹಾಗಾದರೆ ನಾನು ರಾಕ್ಷಸನನ್ನು ಮದುವೆಯಾದೆನೆ?''

ಸುಲ್ತಾನ ಪುತ್ರಿಯನ್ನು ನೋಡಿದ. ಆಕೆ ಗರ್ಭವತಿಯಾಗಿದ್ದಳು. ''ರಾಕ್ಷಸ ತಂದೆಯಾದವನ ಮಗುವಿಗೆ ಜನ್ಮಕೊಡಲು ನನಗೆ ಇಷ್ಟವಿಲ್ಲ. ಅದು ಅಸಹ್ಯವೆನಿಸುತ್ತದೆ ''ಹೋಗು'' ಮಗು, ವಿಶ್ರಮಿಸು. ನನ್ನಂಥ ವೃದ್ಧನೊಡನೆ ವಾದಿಸಬೇಡ. ಕಾಲಾಪಹಾಡ್ ಬಂದ ನಂತರ ಆತನ ಮೇಲಿನ ನಿನ್ನ ಸಿಟ್ಟೆಲ್ಲಾ ತೀರಿಸಿಕೋ.''

ಟಂಡಾದಲ್ಲಿ ಕಾಲಾಪಹಾಡನಿಗೆ ಭಾರಿ ಸಂಭ್ರಮದ ಸ್ವಾಗತ ಸಿಕ್ಕಿತು. ಆತನ ವಿಜಯಗಳಿಂದ ರಾಜ್ಯವೆಲ್ಲ ಗೆಲುವಿನಿಂದಿತ್ತು. ರಾಜ್ಯದ ಶ್ರೇಷ್ಠ ಸರದಾರನೆಂದು ಸುಲ್ತಾನ ಆತನಿಗೆ ಮರ್ಯಾದೆ ಮಾಡಿದ. ಎಲ್ಲೆಡೆಗೂ ವಿಜಯೋತ್ಸವ ನಡೆಯಿತು.

ಆತ ಅಂತಃಪುರಕ್ಕೆ ಹೋದ. ದುಲಾರಿ ಅಸ್ವಸ್ಥಳಾಗಿದ್ದಳು. ಅವರು ಒಬ್ಬರನ್ನೊಬ್ಬರು ಪ್ರೇಮಿಸುತ್ತಿದ್ದರೂ ಆತನ ಜೀವನದ ಹೊಸ ಕ್ರಮ ಅವಳ ಪ್ರೇಮವನ್ನು ಉಸಿರುಗಟ್ಟಿಸಿತ್ತು. ಆಕೆ ನಿರುತ್ಸಾಹದಿಂದ ಆತನನ್ನು ಬರಮಾಡಿಕೊಂಡಳು.

''ನಿನಗೇನಾಗಿದೆ ದುಲಾರಿ?'' ಆತ ವಿಚಾರಿ

---

ಸಿದ.

''ನನಗೆ ತಲೆಚಿಟ್ಟು ಹಿಡಿದಿದೆ.''

'' ನಾನು ಬೇಸರ ಹಿಡಿಸಿದ್ದೇನೆಯೆ?''

''ಹೌದು, ನೀನು ತಲೆಚಿಟ್ಟು ಹಿಡಿಸಿರುವಿ. ಈಗ ನನ್ನನ್ನು ಸುಮ್ಮನೆ ಬಿಟ್ಟುಬಿಡು.''

''ನಾನು ನಿನ್ನ ಪತಿ ದುಲಾರಿ. ಅಪರಿಚಿತನಲ್ಲ.''

''ಬೇಡ, ಹೋಗು. ನನಗೆ ಪ್ರೈ ಸರಿಯಿಲ್ಲ.''

ಆತ ನಿರ್ವಾಹವಿಲ್ಲದೆ ನಿರ್ಗಮಿಸಿದ. ಆ ಮಹಾಪರಾಕ್ರಮಿ ತನ್ನ ಮನೆಯಲ್ಲಿಯೇ ಪರಾಜಿತನಾಗಿದ್ದ. ಎಷ್ಟೋ ದಿನ ಹಾಗೆಯೆ ಕಳೆದ. ಸುಲ್ತಾನನೊಂದಿಗೆ ರಾಜ್ಯಾಡಳಿತದ ವಿಷಯಗಳನ್ನು ಚರ್ಚಿಸುತ್ತಿದ್ದ. ಆತನ ಪುತ್ರರಿಗೆ ಶಸ್ತ್ರವಿದ್ಯೆ ಕಲಿಸುತ್ತಿದ್ದ. ಆದರೆ ಮನಸ್ಸಿಗೆ ಸಮಾಧಾನವೆ ಬರಲಿಲ್ಲ.

ಅಂತೂ ದುಲಾರಿ ಹೆಣ್ಣು ಮಗುವಿಗೆ ಜನ್ಮವಿತ್ತಳು. ಮಹಮ್ಮದ ಅತ್ಯಂತ ಉತ್ಸಾಹದಿಂದ ಆವಳ ಕೋಣೆಗೆ ಹೋದ. 'ಮಗುವಿಗೆ ಫಾತಿಮಾ' ಎಂದು ಹೆಸರಿಡೋಣ, ಅಂದ.

ಆಕೆ ಇನ್ನೂ ಉದಾಸೀನಳಾಗಿ ಅವನಿಂದ ದೂರವಿದ್ದಳು. ''ಇವಳು ನಮ್ಮ ಪ್ರೇಮದ ಮಗು. ಆದರೆ ನನಗೆ ಮತ್ತೆ ಮಕ್ಕಳು ಬೇಡ,'' ಎಂದಳು.

''ನೀನು ನನ್ನ ಪತ್ನಿ, ದುಲಾರಿ.''

''ಹೆಸರಿಗಷ್ಟೇ. ನಾನು ಕಾಲಚಂದನ ಪತ್ನಿಯಾಗಿದ್ದೆ. ನಾನಿನ್ನೂ ಆತನ ಪತ್ನಿ. ಮಹಮ್ಮದ ಫರ್ಮುಲಿಯ ಪತ್ನಿ ಅಲ್ಲ. 'ಕಾಲಾಪಹಾಡ'ನ ಪತ್ನಿಯಂತೂ ಅಲ್ಲವೇ ಅಲ್ಲ.''

''ಹಾಗಾದರೆ ನಾನು ಮತ್ತೆ ಮದುವೆಯಾಗುವೆ.''

''ನಿನ್ನ ಇಷ್ಟ.''

ಆಗ ಕಾಲಾಪಹಾಡನ ದುಃಖದ ಕಟ್ಟೆಯೊಡೆಯಿತು.

''ನಿನಗೆ ಗೊತ್ತಿಲ್ಲವೆ? ನಾನು ನಿನ್ನನ್ನು ಪ್ರೀತಿಸುವೆ, ದುಲಾರಿ. ನೀನು ನನ್ನನ್ನು ನಿರಾಕರಿಸಿದರೆ ನಾನೆಲ್ಲಿಗೆ ಹೋಗಬೇಕು?'' ಎಂದು ಮಗುವಿನ ಹಾಗೆ ಮೊರೆಯಿಟ್ಟ, ಬೇಡಿಕೊಂಡ. ಆದರೆ ಆಕೆ ವಿಚಲಿತಳಾಗಲಿಲ್ಲ. ''ಇಡೀ ಜಗತ್ತೇ ನಿನ್ನ ಮುಂದಿದೆ,'' ಎಂದು ವ್ಯಂಗ್ಯವಾಗಿ ಹೇಳಿದಳು.

ಆತ ಅವಳ ಮಡಿಲಲ್ಲಿ ತಲೆಯಿರಿಸಿ, ''ನಿಜಕ್ಕೂ ನನ್ನ ನಿರಾಕರಿಸುವಿಯಾ?''

''ಇಂಥ ಕೊಲೆಪಾತಕಿ ವಿಧ್ವಂಸಕ, ಮತಾಂತರಿಸುವ ಮೋಹ ಇದ್ದವನ ಪತ್ನಿಯೆನಿಸಿಕೊಳ್ಳಲೆ? ಎಂಥ ನಾಚುಗೆಗೇಡು?''

''ನಾಚಿಕೆ ಏತಕ್ಕೆ?''

''ಇದಕ್ಕೆಲ್ಲ ಕಾರಣ ನಾನೇ! ನಾನಿಲ್ಲದಿದ್ದರೆ ನೀನಿನ್ನೂ ಹಿಂದೂ ಆಗಿರುತ್ತಿದ್ದಿ. ನಿನ್ನ ಕುಟುಂಬದೊಡನೆ ಸುಖವಾಗಿರುತ್ತಿದ್ದಿ. ನನ್ನ ಮದುವೆ ಆದೆಯೆಂದು ನೀನು ಜಾತಿಭ್ರಷ್ಟನಾದೆ. ಅನಂತರ ಮುಸಲ್ಮಾನನಾಗಿ ಸೇಡು ತೀರಿಸಿಕೊಳ್ಳುವ ಹಟ ತೊಟ್ಟೆ. ಈಗ ಮೂರ್ತಿಭಂಜಕನಾಗಿರುವಿ.''

''ದುಲಾರಿ, ನೀನು ಮುಸಲ್ಮಾನಳು. ಆದರೂ ಹಿಂದೂಗಳತ್ತ ನಿನ್ನ ಒಲವು ಇರುವುದಲ್ಲ!''

ಆಕೆ ಶುಷ್ಕನಗೆ ನಕ್ಕಳು. ''ಹಿಂದುಗಳು ಮಾನವರಲ್ಲವೇ? ನೀನೀಗ ಮನುಷ್ಯನೇ ಅಲ್ಲ. ನಿನ್ನಲ್ಲಿ ಮಾನವತೆಯೆನ್ನುವುದೇ ಸತ್ತು ಹೋಗಿದೆ.''

''ಹಾಗಾದರೆ ಇನ್ನು ನೀನು ನನ್ನನ್ನು ಪ್ರೇಮಿಸುವುದಿಲ್ಲವೆ ದುಲಾರಿ?''

''ಕಾಲಚಂದ ಕೇಳದೆಯೇ ನನ್ನ ಪ್ರೇಮ ಪಡೆದ. ಕಾಲಾಪಹಾಡನು ನನ್ನ ಪ್ರೇಮ ಬೇಡಬೇಕಾಗಿದೆ. ವಿಚಿತ್ರವಲ್ಲವೆ? ನಿನಗೆ ಕಾಣಿಸುವುದು ಕೇವಲ ನನ್ನ ದೇಹ. ನನ್ನ ಆತ್ಮ ಎಂದೋ ಸತ್ತುಹೋಗಿದೆ.''

ಆತ ಎದ್ದು ಹೋದ. ಅವನ ಮುಖದಲ್ಲಿ ಶೂನ್ಯಕಳೆ ಇತ್ತು. ತಾನು ಬಹಳೇ ಏಕಾಕಿ ಎಂದೆನಿಸಿತು. ದುಲಾರಿ ಇಲ್ಲದ ಜೀವನ ಅವನ ಪಾಲಿಗೆ ವ್ಯರ್ಥವಾಗಿತ್ತು.

5

ಕಾಲಾಪಹಾಡ್ ತನ್ನ ದಂಡಯಾತ್ರೆಯನ್ನು ಪುನರಾರಂಭಿಸಿದ. ಜಾಜಪುರದ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡ. ದೇವಾಲಯಗಳನ್ನು ಧ್ವಂಸಮಾಡಿ ಜನರನ್ನು ಮತಾಂತರಿಸಿದ. ಅಲ್ಲಿಂದ ಕಾಶಿಗೆ ನಡೆದ. ಸುದ್ದಿ ತಿಳಿದು ಕಾಶಿಯ ರಾಜಾ ವಿಜಯಸಿಂಹ ಊರು ಬಿಟ್ಟು ಪರಾರಿಯಾದ. ಕಾಶಿಪಟ್ಟಣ ಮುಸಲ್ಮಾನರ ವಶವಾಯಿತು. ಮತ್ತೆ ಕಾಲಾ ಪಹಾಡನ ಸೈನಿಕರು ತಮ್ಮ ಹಿಂಸಾಚಾರಗಳಲ್ಲಿ ನಿರತರಾದರು. ಬೀದಿಗುಂಟ ರಕ್ತದ ಪ್ರವಾಹ ಹರಿಯಿತು. ಗಂಗಾನದಿ ಹೆಣಗಳಿಂದ ತುಂಬಿಹೋಯಿತು. ಕಾಶಿಯಲ್ಲಿ ಎಲ್ಲಿ ನೋಡಿದಲ್ಲಿ ಹಾಹಾಕಾರ.

ಡೇರೆಯಲ್ಲಿ ಕಾಲಾ ಪಹಾಡ ಕುಳಿತಿದ್ದ. ''ನಾಲ್ಕು ಸಾವಿರ ಮರಣ, ಒಂದು ಸಾವಿರ ಮತಾಂತರ,'' ಒಬ್ಬ ದೂತ ವಾರ್ತೆ ತಂದ

''ಕೇದಾರೇಶ್ವರ ಮಂದಿರವನ್ನುಳಿದು ಉಳಿದೆಲ್ಲ ದೇವಾಲಯಗಳು ನೆಲಸಮ,'' ಮತ್ತೊಬ್ಬ ದೂತ ಹೇಳಿದ.

''ಸರಿ. ಕೇದಾರೇಶ್ವರ ಲಿಂಗವನ್ನು ಬಿಟ್ಟುಬಿಡಿ,'' ಕಾಲಾ ಪಹಾಡ ಹೇಳಿದ.

ಅದಕ್ಕೆ ಯಾಕೆ ಹಾನಿ ಮಾಡಕೂಡದೆಂದು ಹೇಳಿದನೆಂಬುದು ಯಾರಿಗೂ ತಿಳಿಯಲಿಲ್ಲ. ಆದರೆ ಅವನ ಇಚ್ಛೆಯ ಮೇರೆಗೆ ಯಾರೂ ಅದಕ್ಕೆ ಧಕ್ಕೆ ಮಾಡಲಿಲ್ಲ. ಅನೇಕ ವರ್ಷಗಳ ಹಿಂದೆ ತನ್ನ ತಾತ ಕಾಶಿಗೆ ಬಂದು ಈ ಮಂದಿರದಲ್ಲಿ ಪ್ರಾರ್ಥಿಸಿದ್ದನೆಂಬ ಕಾರಣದಿಂದ ಕಾಲಾಪಹಾಡ್ ಅದನ್ನು ಮುಟ್ಟಲಿಲ್ಲ. ಡೇರೆಯಲ್ಲಿ ಸೈನಿಕರು ಅತ್ತಿಂದಿತ್ತ ಅಡ್ಡಾಡುತ್ತಿದ್ದರು. ಆ ಗೊಂದಲದಲ್ಲಿ ಒಬ್ಬ ಮುದುಕಿ ತತ್ತರಿಸುತ್ತ ಒಳಗೆ ಬಂದಳು. ಅವಳ ತಲೆಗೂದಲು ಕೆದರಿಕೊಂಡಿತ್ತು. ಬಟ್ಟೆಗಳೆಲ್ಲ ಹರಿದು ರಕ್ತಮಯ

ವಾಗಿದ್ದವು. ಆಕೆ ಅರೆಬತ್ತಲೆಯಾಗಿದ್ದಳು. ಮುಖವೆಲ್ಲ ಗಾಸಿಗೊಂಡಿತ್ತು.

ಕಾಲಾಪಹಾಡ ಆಕೆಯನ್ನು ನೋಡಿದೊಡನೆ ಎದ್ದು ನಿಂತ. ಡೇರೆಯಲ್ಲಿ ಭಾರಿ ಮೌನ ಆವರಿಸಿತು.

''ಕಾಲಾಪಹಾಡ್!'' ಎಂದಾಕೆ ಅರಚಿದಳು.

ಆತ ಸುಮ್ಮನೆ ಇದ್ದು ಆಕೆಯನ್ನು ದಿಟ್ಟಿಸಿದನಷ್ಟೆ.

''ನನ್ನನ್ನು ನೋಡು, ಕಾಲಾಪಹಾಡ್! ನಾನು ಒಬ್ಬ ವೃದ್ಧ ವಿಧವೆ. ನನ್ನ ಮಾನಭಂಗವಾಗಿದೆ. ಯಾಕೆಂದರೆ ನಾನು ಹಿಂದೂ, ಕಾಲಾಪಹಾಡ, ಅದಕ್ಕಾಗಿಯೆ ನಿನ್ನ ಸೈನಿಕರ ಕಾಮಕ್ರೀಡೆಗೆ ಬಲಿಯಾದೆ,'' ಎಂದಾಕೆ ಕೂಗಾಡಿದಳು.

ಆದರೂ ಆತ ಮಾತನಾಡಲಿಲ್ಲ. ಶಿಲಾ ಪ್ರತಿಮೆಯಂತೆ ಸ್ತಬ್ಧವಾಗಿ ನಿಂತಿದ್ದ.

''ನಾನು ಯಾರೆಂದು ಗೊತ್ತೇ, ಕಾಲಾಪಹಾಡ್? ನೋಡು, ಸರಿಯಾಗಿ ನೋಡು. ನನ್ನ ಅವಸ್ಥೆಯನ್ನು ಕಣ್ತುಂಬ ನೋಡು.''

ಆದರೂ ಆತ ಮೌನವಾಗಿದ್ದ. ಅವನ ಕಣ್ಣುಗಳು ಹನಿಗೂಡಿ, ಮೆಲ್ಲನೆ ಕಣ್ಣೀರು ಕಪೋಲಗಳ ಮೇಲೆ ಹರಿಯಿತು. 'ಅಜ್ಜೀ!' ಎಂದಿಷ್ಟೇ ಉಸುರಿದ.

''ಹೌದು, ಕಾಲಾ ಪಹಾಡ್, ನಾನು ನಿನ್ನ ಅಜ್ಜಿ! ಅಥವಾ ನೀನು ಇನ್ನು ಕಾಲಚಂದನಾಗಿದ್ದಾಗ ನಿನ್ನ ಅಜ್ಜಿಯಾಗಿದ್ದೆ. ಇದೆಲ್ಲ ನಡೆದ ಮೇಲೆ ನನಗೆ ಮುಕ್ತಿಯ ಪುಣ್ಯವೂ ಇಲ್ಲ. ನರಕದ ಶಿಕ್ಷೆಯೂ ಇಲ್ಲ. ಜೀವನ್ಮರಣದ ಚಕ್ರದಲ್ಲಿ ನಾನು ನಿರಂತರ ತಿರುಗಬೇಕು. ಏಳೇಳು ಯುಗಗಳಲ್ಲೂ ನನಗೆ ಉದ್ಧಾರವಿಲ್ಲ. ಕಾಲಾಪಹಾಡ್,'' ಎಂದು ಇಂದುಬಾಲಾದೇವಿ ಗೊಳಿಟ್ಟು ಅತ್ತಳು. ಬಳಿಕ ಬಾಯಿಯಲ್ಲಿ ಏನೋ ಹಾಕಿಕೊಂಡಳು.

''ನನ್ನನ್ನು [illegible], ಕಾಲಾ ಪಹಾಡ್! ನಿನಗೆ ನಿರಂತರ [illegible] [illegible]. ಉಳಿದವರಿಗೆ ತಕ್ಕ [illegible] ನಿನಗೆ ಬಾರದಿರಲಿ. ನಿನ್ನ ಆತ್ಮ ಹಿಂಸೆಯ ವೇದನೆಯಲ್ಲಿ ತೊಳಲಾಡಿ ಸಾಯಲಿ,'' ಎನ್ನುತ್ತ ಧಡ್ ಎಂದು ನೆಲಕ್ಕೆ ಬಿದ್ದಳು. ಅವಳ ದೇಹ ತೀವ್ರ ಸೆಳೆತದಿಂದ ಒದ್ದಾಡುತ್ತ ಬಾಯಿಯಲ್ಲಿ ಬುರುಗು ತುಂಬಿತು. ಅನಂತರ ದೇಹ ನಿಶ್ಚಲವಾಯಿತು.

ಕಣ್ಣೀರು ಸುರಿಸುತ್ತ ಕಾಲಾ ಪಹಾಡ್ ಅವಳ ಹತ್ತಿರ ಹೋದ. ನೂರುಲ್ ಹಸನ್ ಬಗ್ಗಿ ನೋಡಿ, ''ಅವಳು ಸತ್ತಿದ್ದಾಳೆ. ವಿಷ ಸೇವಿಸಿರಬೇಕು,'' ಅಂದ.

ಕಾಲಾ ಪಹಾಡ್ ತುಟಿಕಡಿದು ಆಕೆಯನ್ನು ನೋಡುತ್ತ ನಿಂತ. ಆತನ ಮನಃಪಟಲದ ಮೇಲೆ ಅನೇಕ ಚಿತ್ರಗಳು ಸುಳಿದಾಡಿದವು. ತಾನು ಎಲ್ಲವನ್ನೂ - ತನ್ನ ಕುಟುಂಬದ ಗೌರವವನ್ನೂ - ವಿನಾಶಗೊಳಿಸಿದ್ದ. ಇನ್ನು ಜೀವಿಸುವುದರಲ್ಲಿ ಅರ್ಥವಾದರೂ ಏನಿದೆ? ಈಗ ತನ್ನವರೆನ್ನುವವರು ಯಾರೂ ಇಲ್ಲ ಅಂದುಕೊಂಡ.

''ನೂರುಲ್ ಹಸನ್, ಹೊರಗೆ ಹೋಗಿ ಎಲ್ಲವನ್ನೂ ನಿಲ್ಲಿಸು'' ಎಂದಾತ ಗಡುಸಾಗಿ, ಅಂದ.

ಅನಂತರ ಕಾಲಾ ಪಹಾಡ್ ಡೇರೆಯಲ್ಲಿ ಬಾಗಿಲು ಮುಚ್ಚಿ ಒಳಗೆ ಒಬ್ಬನೆ ಕುಳಿತ. ನೀರು, ಆಹಾರ, ಎಲ್ಲವನ್ನೂ ಬಿಟ್ಟು ನೆಲದ ಮೇಲೆ ಬಿದ್ದು ನರಳಾಡಿದ. ನೂರುಲ್‌ಹಸನ್ ಒಳಗೆ ಇಣುಕಿ ನೋಡಿದಾಗ ಸೇನಾಧಿಪತಿ ನೆಲದ ಮೇಲೆ ಬೋರಲಾಗಿ ಬಿದ್ದಿದ್ದ. ಆದರೆ ಒಳಗೆ ಹೋಗಲು ಆತನಿಗೆ ಧೈರ್ಯವಾಗಲಿಲ್ಲ. ಏನು ಮಾಡುವುದೆಂದು ತಿಳಿಯಲಿಲ್ಲ. ಮೂರು ಹಗಲು ರಾತ್ರಿ ಆತ ಹಾಗೇ ಬಿದ್ದುಕೊಂಡಿದ್ದ. ನಾಲ್ಕನೆಯದಿನ, ಉಪನಾಯಕ ನೋಡಿದಾಗ, ಅಲ್ಲಿ ಯಾರೂ ಇರಲಿಲ್ಲ.

ಒಳಗೆ ಹೊಕ್ಕು ಡೇರೆಯಲ್ಲಿ ಹುಡುಕಾಡಿದ. ಕಾಲಾ ಪಹಾಡನ ಯಾವ ಕುರುಹೂ ಇರಲಿಲ್ಲ. ಡೇರೆಯ ಸುತ್ತಲೂ ಇಷ್ಟೊಂದು ಪಹರೆಯುವರಿರುವಾಗ ಆತ ಹೇಗೆ ಕಣ್ಮರೆಯಾಗಿದನೆಂಬುದು [illegible]

ದುಲಾರಿಗೊಂದು ಮೊಹರು ಹಾಕಿದ ಪತ್ರವಿತ್ತು. ಆ ಪತ್ರವನ್ನು ದುಲಾರಿಗೆ ಮುಟ್ಟಿಸಿದ.

ದುಲಾರಿ ತನ್ನ ತಂದೆ, ಸೋದರರ ಸಮಕ್ಷಮ ಪತ್ರವನ್ನು ಒಡೆದು ಓದಿದಳು:

''ಪ್ರೇಮವೇನು ಎಂಬುದನ್ನೇ ಮರೆತುಬಿಟ್ಟಿದುದರಿಂದ ನಾನು ಮಮತೆಯ ಮಾತುಗಳನ್ನು ಬರೆಯಲಾರೆ. ನಾನು ದ್ವೇಷದ ಮನುಷ್ಯ. ನನಗೆ ಒಲವಿದ್ದದ್ದೆಲ್ಲವನ್ನೂ ವಿನಾಶಗೊಳಿಸಿದೆ. ಈಗ ನನ್ನನ್ನೇ ನಾನು ನಾಶಗೊಳಿಸಿಕೊಳ್ಳುವೆ. ಇಲ್ಲಿಂದ ರಾತ್ರಿಯಲ್ಲಿ ಕಳ್ಳನಂತೆ ಪಾರಾಗಿ ಹೋಗುವೆ. ಎಲ್ಲಿಗೆ ಹೋಗುವೆನೋ ನಾನರಿಯೆ. ನೀನು ನನ್ನನ್ನು ಪ್ರೇಮಿಸಿದ್ದರೆ, ಯಾವಾಗಲಾದರೊಮ್ಮೆ ನನ್ನನ್ನು ನೆನೆಸಿ ನನಗೋಸ್ಕರ ಒಂದು ಹನಿ ಕಂಬನಿ ಸುರಿಸು. ನಾನೆಲ್ಲಿಗೆ ಹೋದರೂ ಪುನಃ ಕಾಲಚಂದನಾಗುವೆ. ನಿನ್ನನ್ನು ನೋಡಲಾರೆನೆಂದಿಷ್ಟೇ ನನಗೆ ದುಃಖವಾಗಿದೆ. ಇದ್ದು, ಜೀವನದ ಕೊನೆಯವರೆಗೂ ಪಶ್ಚಾತ್ತಾಪಪಡುತ್ತ ಇರುವೆ. ಫಾತಿಮಾಳನ್ನು ಸರಿಯಾಗಿ ನೋಡಿಕೋ. ಸುಲ್ತಾನರಿಗೆ, ನಿನ್ನ ಸೋದರರಿಗೆ ನನ್ನ ವಂದನೆಗಳು. - ಅಲ್ವಿದಾ.''

ದುಲಾರಿಯ ಕಣ್ಣಾಲಿಗಳಲ್ಲಿ ನೀರು ತುಂಬಿ ಬಂತು. ಸುಲ್ತಾನ ಸಂತಾಪದಿಂದ ನರಳಿದ.

''ಅಬ್ಬಾಜಾನ್, ಒಬ್ಬ ಸ್ತ್ರೀ ದೇಶಕ್ಕೆ ಏನೇನು ಮಾಡಿದಳು! ನೋಡು. ಇದಕ್ಕೆಲ್ಲ ನಾನೇ ಕಾರಣ. ಜಗತ್ತು ನಿಂದಿಸಬೇಕಾದದ್ದು ನನ್ನನ್ನೆ ಹೊರತು ನನ್ನ ಪತಿಯನ್ನಲ್ಲ. ನನ್ನ ಪ್ರೇಮದ ನಿಮಿತ್ತವಾಗಿಯೆ ಇಷ್ಟೆಲ್ಲ ಸಂಭವಿಸಿದ್ದು. ಈ ಜಗತ್ತಿನಲ್ಲಿ ನಾನೇ ಮಹಾ ಪಾಪಿ.''

ಏನು ಮಾಡಿದರೂ ಆಕೆಯನ್ನು ಸಂತೈಸಲಾಗಲಿಲ್ಲ. ಒಬ್ಬಳೇ ಇದ್ದಾಗ ಆಕೆ ಮಹಾನಂದಾ ನದಿಯನ್ನು ದಿಟ್ಟಿಸಿ ನೋಡಿದಳು. ಇಲ್ಲಿಯೆ ಅವಳ ಪ್ರೇಮ ಅಂಕುರಿಸಿದ್ದು. ಇಲ್ಲಿಯೆ ಅವಳ ದ್ವೇಷ ಅಭಿವರ್ಧಿಸಿದ್ದು. ಇಲ್ಲಿಯೆ ಅವಳು ಜೀವಿಸಿದ್ದು. ಅವಳ ಅಂತ್ಯವಾಗುವುದೂ



ಇಲ್ಲಿಯೇ.

ಮುಚ್ಚಂಜೆಯಲ್ಲಿ ಮಂಜುಕವಿದಾಗ ಅವಳ ಆಕೃತಿ ನದಿಯತ್ತ ನಡೆಯಿತು. ಘಟ್ಟದ ಹತ್ತಿರ ತಡೆದು ಮೆಟ್ಟಿಲಿಳಿಯಿತು. ಅನಂತರ ಯಾರೂ ಅವಳನ್ನು ಪುನಃ ಕಾಣಲಿಲ್ಲ.

ಅವಳು ಕಣ್ಮರೆಯಾದಳೆಂಬ ಸುದ್ದಿ ಮರುದಿನ ಹಬ್ಬಿತು. ಸುಲ್ತಾನ ಒಮ್ಮೆಲೆ ಮುಪ್ಪಿನ ಮುದುಕನಂತಾಗಿಬಿಟ್ಟ. ಮಗಳಿಲ್ಲದೆ ಆತನ ಬಾಳು ಶೂನ್ಯವಾಗಿತ್ತು.

ಹಿಮಾಲಯದ ಇಳಿಜಾರಾದ ಹಿಮವೃತ ದಾರಿಯ ಮೇಲೆ ಲಂಗೋಟಿಯ ಹೊರತಾಗಿ ಏನನ್ನೂ ಧರಿಸದ ಮನುಷ್ಯನೊಬ್ಬ ಏಕಾಕಿಯಾಗಿ ನಡೆಯುತ್ತಿದ್ದ. ಮೈಕೊರೆಯುವ ಚಳಿಗಾಳಿಯತ್ತ ಆತನ ಲಕ್ಷವೇ ಇದ್ದಂತಿರಲಿಲ್ಲ. ಕಾಲಬೆರಳುಗಳು ಕತ್ತರಿಸಿಹೋಗಿದ್ದವು. ಕೈ ಬೆರಳುಗಳೂ ಉದುರಿಹೋಗಿದ್ದವು. ದೇಹ ಗಾಸಿಗೊಂಡು ಮೈ ಮೇಲಿನ ಗಾಯಗಳಿಂದ ಹರಿದ ರಕ್ತ ಹೆಪ್ಪುಗಟ್ಟಿತ್ತು. ಊರುಗೋಲಿಲ್ಲದೆ ಎಡವಿ ಬೀಳುತ್ತಿದ್ದ. ಆ ವಿಪರೀತ ವೇದನೆಯನ್ನು ಹೇಗೋ ಸಹಿಸಿಕೊಂಡಿದ್ದ. ನೋವಿನಿಂದ ಮುಖ ವಿಕೃತವಾಗಿತ್ತು. ಬಿದ್ದಾಗಲೆಲ್ಲ ಎದ್ದು ತತ್ತರಿಸುತ್ತ, ಮುಗ್ಗರಿಸುತ್ತ ಮುಂದೆ ನಡೆಯುತ್ತಿದ್ದ. ಆತನ ಕೆದರಿದ ಕೂದಲಿನಲ್ಲಿ ಹಿಮಸಿಕ್ಕಿಕೊಂಡಿತ್ತು. ತಾನಿನ್ನು ಬಹಳ ದಿನ ಬದುಕುವದಿಲ್ಲವೆಂದು ತಿಳಿದಿದ್ದರೂ ಮುಂದೆ ಸಾಗುತ್ತಲೇ ಇದ್ದ. ದೂರದಲ್ಲೆಲ್ಲೊ ಅಮರನಾಥನ ಲಿಂಗ ಇತ್ತು. ಈಗ ಅವನ ಲಕ್ಷವೆಲ್ಲ ಅದರತ್ತಲೆ. ಸಾಯುವ ಮುಂಚೆ ಕಾಲಾಪಹಾಡ ಅಲ್ಲಿ ಸೇರಬೇಕಾಗಿತ್ತು.

ಇತ್ತ ಮಹಾನಂದಾ ನದಿ ಇದಾವುದರ ಪರಿವೆಯಿಲ್ಲದೆ ಗುಳುಗುಳು ಹರಿಯುತ್ತಿತ್ತು. ಜನರು ಅದರಲ್ಲಿ ಮಿಂದು ಮಂತ್ರಗಳನ್ನು ಪಠಿಸಿ ಪುನೀತರಾಗಲು ಹಿಂಡು ಹಿಂಡಾಗಿ ಬರುತ್ತಿದ್ದರು. ಕಾಲಾಪಹಾಡನಿಗೆ ಸಂಬಂಧಿಸಿದ ಹಾಗೆ ಅವರಲ್ಲಿ ಹರಡಿಕೊಂಡ ಕಥೆಗಳು ಹಲವಾರು. ಆತ ಮಹಾದೇವನ ರುದ್ರಾವತಾರ ಎಂಬುದೂ ಅವುಗಳಲ್ಲೊಂದು. ಭೂಮಿಯ ಮೇಲೆ ವಿಧ್ವಂಸಕನಾಗಿ ಮೆರೆದಾತ ಕೇದಾರೇಶ್ವರನ ಲಿಂಗದಲ್ಲಿ ಐಕ್ಯನಾದನೆಂಬುದು ಎಂಥ ವ್ಯಂಗ್ಯದ ಮಾತು! ●

---

*ಆಪತ್ತಿನಲ್ಲಿ ನೆರವಾಗುವವನೇ ನಿಜವಾದ ಗೆಳೆಯ ನಿಜ. ಆದರೆ ಆಪತ್ತು ಬಂದಾಗೆಲ್ಲ ಆತ ಊರಲ್ಲಿರುವುದೇ ಇಲ್ಲವಲ್ಲ.*

*- ಹ್ಯಾರಿಯಟ್ ಸಿ. ಬಟ್ಲರ್*

*ಒಬ್ಬ ಮುಂದುವರಿಯಬೇಕಾದರೆ ಹಿಂದುಳಿಯಲು ಇನ್ನೊಬ್ಬ ಬೇಕೇ ಬೇಕು.*

*- ಗ್ಲ್ಯಾಡ್‌ಸ್ಟೋನ್*

---

Printed and Published by V. G. VAIDYA on behalf of Loka Shikshana Trust at 'Samyukta Karnataka Press', Koppikar Road, Hubli-580020 (Phone: 64303), No. 2, Residency Road, Bangalore-560025 (Phone: 213265)
**Managing Editor: K. SHAMA RAO.**
Representatives: Bombay: V. Satyamurthy (Phone: 5510592)
Madras: S. K. Murthi (Phone: 414870)
New Delhi: V. K. Chopra (Phone:7114785)
**Registered with the Registrar of Newspapers for India under No. 3633/57**